# ಮಾ ನಿಷಾದ

(ಕಥಾಸಂಕಲನ)



ಲೇಖಕರು

ಡಾ|| ವಿಜಯಾ ಸುಬ್ಬರಾಜ್




ಯೋಗಶ್ರೀ ಪ್ರಕಾಶನ
8|26, ಮಹಾಲಕ್ಷ್ಮೀ ನಿವಾಸ, ಮನೆ ನಂ–5,
ಒಂದನೇ ಮಹಡಿ. ಮೌಂಟ್‌ಜಾಯ್ ರಸ್ತೆ,
ಹನುಮಂತನಗರ, ಬೆಂಗಳೂರು–560019

MA-NISHADA—Short Stores written by Dr. VIJAYA SUBBARAJ, Reader in Kannada, M.E.S. College Malleswaram, Bangalore, and Published by M/s. Yogashree Prakashana, Bangalore-19

First Impression—1986



Price—Rs. 12—00

Printers—Sri Vinayaka Printers
Kempegowdanagar, Bangalore-19

# ಓದುವ ಮುನ್ನ

ಡಾ|| ವಿಜಯಾ ಸುಬ್ಬರಾಜ್‌ರವರು ಸೆಂಟ್ರಲ್ ಕಾಲೇಜಿನಲ್ಲಿ ಎಂ. ಎ. (ಕನ್ನಡ) ಅಭ್ಯಾಸ ಮಾಡುತ್ತಿದ್ದಾಗಿನಿಂದಲೂ ನನಗೆ ಪರಿಚಿತರು. ಅವರು ಎಂ. ಎ. ಆದ ಮೇಲೆ ಎಂ. ಇ. ಎಸ್. ಕಾಲೇಜಿನಲ್ಲಿ ಲೆಕ್ಚರರ್ ಆಗಿ ಸೇರಿಕೊಂಡರು. ಸಾಹಿತ್ಯಿಕ ಚಟುವಟಿಕೆಗಳಲ್ಲಿ ಯಾವಾಗಲೂ ಮನಸ್ಸನ್ನಿಟ್ಟಿರುವ ಇವರು ಸುಪ್ರಸಿದ್ಧ ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಈಗಾಗಲೇ ಹಲವು ನಾಟಕಗಳನ್ನು ಹಿಂದಿ ಮತ್ತು ಇಂಗ್ಲಿಷ್‌ನಿಂದ ಅನುವಾದಿಸಿದ್ದಾರೆ. ಒಂದು ಕಾದಂಬರಿಯನ್ನು (ಭಾಗ 1) ಪ್ರಕಟಿಸಿದ್ದಾರೆ. ಇವರ ಸಣ್ಣ ಕತೆಗಳ ಸಂಗ್ರಹಕ್ಕೆ ಮುನ್ನುಡಿಯೊಂದನ್ನು ಬರೆದು ಕೊಡಬೇಕೆಂದು ಒಂದು ವರ್ಷಕ್ಕೂ ಹಿಂದೆ 'ಮಾನಿಷಾದ' ಮೊದಲಾದ ಕತೆಗಳನ್ನು ತಂದುಕೊಟ್ಟಿದ್ದರು.

ಕಾರಣಾಂತರದಿಂದ ಮುಖ್ಯವಾಗಿ ನನ್ನ ಗೊಂದಲದಲ್ಲಿ ಆ ಕತೆಗಳನ್ನು ಸುಮ್ಮನೆ ಇರಿಸಿಬಿಟ್ಟಿದ್ದೆ. ಪ್ರಕಾಶಕರೂ ಸುಮ್ಮನಿದ್ದುದು ಹೆಚ್ಚು. ಈಗ ಮತ್ತೆ ತಗಾದೆ ಬಂದು ನನ್ನ ಟಿಪ್ಪಣಿಯನ್ನು ಸೇರಿಸುತ್ತಿದ್ದೇನೆ.

ಡಾ || ವಿಜಯಾ ಸುಬ್ಬರಾಜ್ ಸಂಪೂರ್ಣವಾಗಿ ಅಂತರ್ಮುಖಿಗಳು. ಈ ಕಾರಣದಿಂದ ಅವರ ಕನಸುಗಳು, ಅನಿಸಿಕೆಗಳು, ಆಸೆಗಳು ಕವಲು ಕವಲಾಗಿ ಹರಿದು ಬರುತ್ತವೆ ಇದರಲ್ಲಿ ಭಯವಿದೆ ; ನೋವಿದೆ ; ಹೆಣ್ಣಿನ ದೌರ್ಬಲ್ಯ ಸಹಿತವಾದ ಬದುಕಿನ ಬಯಕೆಯಿದೆ. ನಾಟಕೀಯತೆ ಕೂಡ ಸ್ವಗತದ ರೀತಿಯಲ್ಲಿ ಸೇರಿಕೊಂಡಿದೆ. ಹೀಗಾದಾಗ ಶೈಲಿಯೂ ಪ್ಯಾಶನೇಟ್ ಆಗಿ ಬರುವುದು ಸಹಜ. ಭಾಷೆಯು ಭಾವನೆಗಳಿಗೆ ಒಗ್ಗುತ್ತಾ ರೂಪ ತಾಳುತ್ತದೆ....ಆದರೂ ನವ್ಯ ಕತೆಗಳಲ್ಲಿ ಕಾಣುವ ಲೈಂಗಿಕ ಸಂಕೇತಗಳಾಗಲಿ, ಸಂದರ್ಭಗಳಾಗಲಿ ಬರುವುದಿಲ್ಲ. ಅಂಥದಕ್ಕೆ ಇವರು ಎಚ್ಚರಿಕೆಯಿಂದ ಅವಕಾಶ ಕೊಡುವುದಿಲ್ಲ. ಆದರೆ ಇವರ ಮಾನಸಿಕ ಸುಪ್ತತೆಯಿಂದ ಸೂಕ್ಷ್ಮವಾದ ಮತ್ತು ಹೆಣ್ಣು ಗಂಡನ್ನು ಬಯಸುವ

ನಿರಾಶೆಯಿಂದ ತೊಳಲುವ ಮುಖ್ಯವಾಗಿ ತಾಯಿತನದ ಆಶಯಗಳು ಇಡೀ ಕೃತಿಯಲ್ಲಿಯೇ ಅಂದರೆ ಎಲ್ಲಾ ಕತೆಗಳಲ್ಲೂ ಹಾಸು ಹೊಕ್ಕಾಗಿದೆ.

ನನಗೆ ತಿಳಿದ ಮಟ್ಟಿಗೆ ಕನ್ನಡದ ಯಾವುದೇ ಹೆಣ್ಣು ಹೃದಯ ಹೀಗೆ ತೀವ್ರತೆಯಿಂದ ತನ್ನ ಅನುಭವಗಳಿಗೆ ಸ್ವರೂಪವನ್ನು ಕೊಟ್ಟಿರುವ ನೆನಪಿಲ್ಲ. ಇಂತಹ ಶೈಲಿಯಂತೂ ಬೇರೆ ಯಾವ ಸ್ತ್ರೀ ಬರಹಗಾರರಲ್ಲೂ ಇರುವುದಿಲ್ಲ ಎನ್ನಿಸಿದೆ. ಅವರೆಲ್ಲಾ ಸಾಮಾನ್ಯವಾಗಿ ಪೂರ್ಣ ಜಾಗೃತ ಮನಸ್ಸಿನಿಂದ ಕಾರ್ಯನಿರತರಾದವರು. ಈ ವಿಷಯದಲ್ಲಿ ಜಾಗೃತಿ ಮತ್ತು ಅಂತರಂಗಿ.ಕತೆ ಎರಡನ್ನು ಅಚ್ಚುಕಟ್ಟಾಗಿ ಬಳಸುವ ಏಕಮಾತ್ರ ಲೇಖಕಿ ಶ್ರೀಮತಿ ವೀಣಾ ಎಲಬರ್ಗಿಯವರನ್ನು ಬಿಟ್ಟರೆ, ಇನ್ನೂ ಜಾಗೃತಿಯನ್ನು ಸರಿಯಾಗಿ ಬಳಸಿಕೊಳ್ಳಬೇಕಾದವರು ವಿಜಯಾ ಸುಬ್ಬರಾಜ್ ಒಬ್ಬರೇ ಅಂತಹ ಎಚ್ಚರಿಕೆಯನ್ನು ಬಳಸದಿದ್ದರೆ ಈ ಕತೆಗಳು ಅಸ್ಪಷ್ಟವಾಗುತ್ತಿರಲಿಲ್ಲ. ಎಲ್ಲವೂ "ಒಳದನಿ"ಗಳಂತೆ ತೋರುತ್ತಿರಲಿಲ್ಲ.

ಅನೇಕ ವೇಳೆ ಈ ಕತೆಗಳು ಕೇವಲ ಘಟನಾವಳಿಗಳ ಜೋಡಣೆಯಾಗುತ್ತದೆ. ಕತೆಯ ಹೇಳಿಕೆಯೂ ಉದ್ದವಾಗಿರುವ ಕಡೆಗಳಲ್ಲೆಲ್ಲಾ ಈ ಜೋಡಣೆಯಾಗಿದ್ದು ಇವರ ಭಾವುಕತೆ ಮಾತ್ರವೇ ಅತಿಯಾಗುತ್ತದೆ. ಅಲ್ಲದೆ ಕತೆಯ ಪಾತಳಿಯೂ ಬದುಕಿನ ಬಗ್ಗಡದ ತಳವನ್ನು ಮುಟ್ಟುವುದೇ ಇಲ್ಲ. ಹೀಗಾಗಿ ಇಲ್ಲಿಯ ಅನೇಕ ರಚನೆಗಳು ಪ್ರಬಂಧಗಳಂತೆ ತೋರಬಹುದು.

ವಿಜಯಾ ಸುಬ್ಬರಾಜ್‌ವರು ಮಾನಿಷಾದ, ಬೀಳ್ಕೊಡುಗೆ, ಗಂಟುಗಳು, ನೊಣ ಈ ನಾಲ್ಕು ಘಟನೆಗಳಲ್ಲಿ ಓದುಗರ ಆತ್ಮೀಯತೆಯನ್ನು ಪಡೆದುಕೊಳ್ಳುತ್ತಾರೆ ಎನ್ನಿಸಿದೆ. ಇವುಗಳಲ್ಲಿ ಒಂದೊಂದು ಉದ್ದಿಶ್ಯವೂ ಹೊಳೆಯುವುದರಿಂದ ಈಕೆ ಮನಸ್ಸು ಮಾಡಿದರೆ ಅಂದರೆ ವಿಮರ್ಶಾ ಪ್ರಜ್ಞೆಯನ್ನು ಹರಿತ ಮಾಡಿಕೊಂಡರೆ ಒಳ್ಳೆಯ ಹೊಸ ರೀತಿಯ ಸಣ್ಣ ಕತೆಗಳನ್ನು ರಚಿಸಬಲ್ಲರು ಎನ್ನಿಸುತ್ತದೆ.

"ಗಂಟುಗಳು" ನಿಜಕ್ಕೂ ಗಮನಿಸಬೇಕಾದ ಕೃತಿ. ಯುವತಿಯೊಬ್ಬಳಿಗೆ ಬದುಕು ಇಂದಿನ ಪರಿಸರದಲ್ಲಿ ಅದರ ಅಸ್ಪಷ್ಟ ಆಶಯಗಳಲ್ಲಿ ಹಲವು ಬಗೆಯ ಗೋಜಲಿನಲ್ಲಿ ಅರ್ಥವಾಗದ (ಕತೆಯ ಉದ್ದೇಶವೇ ಅದು)

ಒಂದು ಮಾಲೆಯಾಗಿ ಕಣ್ಣೆದುರಿಗೆ ತೂಗುತ್ತದೆ  ಈ ಕತೆಯು ವಿಶೇಷವೇ ಇಂಥ ವಸ್ತುವಿನಲ್ಲಿದೆ.

ವಿಜಯಾ ಸುಬ್ಬರಾಜ್‌ರವರ ಈ ಸಂಗ್ರಹವನು ಕನ್ನಡಿಗರು ಕೊಂಚ ವಿಶಾಲ ಹೃದಯದಿಂದಲೇ ಸ್ವಾಗತಿಸಬೇಕಾದೀತು. ಆದರೂ ಇವರು ಕಥನ ಕಲೆಯಲ್ಲಿ ಕೈ ಪಳಗಿಸಿಕೊಂಡು ನಿಜಕ್ಕೂ ಚಿರಕಾಲ ಉಳಿಯಬಲ್ಲ ರಚನೆಗಳನ್ನು ನೀಡುತ್ತಾರೆಂದು ನಂಬಬಹುದಾಗಿದೆ. ಈಚಿನ ದಿನಗಳಲ್ಲಿ ಸಣ್ಣ ಕತೆಯೂ ಭಾವಗೀತೆಯಂತೆ ಪ್ರಕಾಶಕರ ಅನಾದರಣೆಗೆ ಗುರಿಯಾಗುತ್ತಿದೆ. ಇವುಗಳಿಗೆ ಮಾರುಕಟ್ಟೆಯಿಲ್ಲವೆಂಬುದು ವ್ಯಾಪಾರಿಗಳ ಆಕ್ಷೇಪ ಆದುದರಿಂದ ಸಣ್ಣ ಕತೆಗಾರರು ಸ್ವಂತ ಪ್ರಯತ್ನ ಮತ್ತು ಪ್ರೇರಣೆಗಳಿಗೆ ಮಾತ್ರ ಮಾರು ಹೋಗಬೇಕಾಗುತ್ತದೆ. ಈ ಕತೆಗಾರ್ತಿಯಲ್ಲಿ ಅಂತಹ ಛಲವೇನೋ ಇದೆ. ಅದರ ಬಲದ ಮೇಲೆ ಮುಂದುವರಿದಾರೆಂದೂ ಅನ್ನಿಸಿದೆ.

ಈ ಕತೆಗಳಲ್ಲಿ ಕಂಡು ಬರುವ ಅಸ್ಪಷ್ಟತೆಗೆ ಶೈಲಿಯು ಕಾರಣವಾಗಿಲ್ಲ ಎಂಬುದು ಒಂದು ಸಮಾಧಾನ. ಹೆಣ್ಣು ಹೆಂಗಸಾಗಿ ಬದುಕಿನ ಪದರಗಳನ್ನು ಬಿಡಿಸುವಲ್ಲಿ ಇನ್ನಷ್ಟು ಅನುಭವ ಕೊಡಬೇಕಾದೀತು. ನಮ್ಮ ಗಂಡು ಬರಹಗಾರರು ಹೆಣ್ಣನ್ನು ಚಿತ್ರಿಸುವ, ಅರ್ಥೈಸುವ ರೀತಿಯಲ್ಲಿಯೇ ವಿಜಯಾ ಸುಬ್ಬರಾಜ್‌ರವರು ಗಂಡನ್ನು ಕುರಿತು ಬರೆಯುತ್ತಿದ್ದಾರೆ. ಇದರಿಂದ ಒಳ್ಳೆಯ ಸಾಹಿತ್ಯವು ಒಡಮೂಡಲು ಇಂತಹ ಮಿತಿಯನ್ನು ದಾಟಿದ ಮತ್ತು ಬದುಕನ್ನು ಅದರ ತಿರುಳಿನ ಪದರಗಳಲ್ಲಿ ಪ್ರಯತ್ನವಾದರೂ ಆಗಬೇಕಾಗುತ್ತದೆ. ಇವರ 'ಗಂಟುಗಳು' ಈ ಕಾಣುವನಿಟ್ಟಿನಲ್ಲಿ ಹೊಸ ಆಸೆಯೊಂದನ್ನು ಮೂಡಿಸುತ್ತದೆ.

ಹೀಗೆಯಾದರೂ ಇವರು ಬೆಳೆಯಲಿ ಎಂದು ಆಶಿಸುತ್ತೇನೆ

ಕ. ವೆಂ. ರಾಜಗೋಪಾಲ

ದಿನಾಂಕ 5-12-19೮0

# ಒಂದು ಮಾತು

ಪ್ರಿಯ ಸಹೃದಯರೇ,

ಇದು ನನ್ನ ಮೊದಲ ಕಥಾಸಂಕಲನ. ಸುಮಾರು ಐದಾರು ವರುಷಗಳಲ್ಲಿ ಬರೆದ ಈ ಕಥೆಗಳನ್ನು ಸಂಕಲನದ ರೂಪದಲ್ಲಿ ತರಬೇಕೆಂದಿದ್ದ ನನ್ನ ಪ್ರಯತ್ನಕ್ಕೆ ಶ್ರೀ ನಾಗರಾಜ್‌ರವರ ಪ್ರೋತ್ಸಾಹ ದೊರೆತದ್ದು ನಿರೀಕ್ಷೆಗೆ ಮೀರಿದ ಸಂತೋಷಕ್ಕೆ ದಾರಿಯಾಯಿತು. ಈ ಸಂಕಲನದಲ್ಲಿನ ಹಲವಾರು ಕತೆಗಳು ಸಾಪ್ತಾಹಿಕಗಳಾದ ಪ್ರಜಾಮತ, ಕರ್ಮವೀರ, ವನಿತಾ ಇತ್ಯಾದಿಗಳಲ್ಲಿ ಬೆಳಕನ್ನು ಕಂಡಿವೆ. ಓದುಗರ ಮೆಚ್ಚುಗೆಯನ್ನೂ ಪಡೆದಿವೆ. ಆದರೆ ಅವೆಲ್ಲವನ್ನು ಸಂಕಲನ ರೂಪದಲ್ಲಿ ಹೊರತರಬೇಕೆನ್ನುವ ನನ್ನ ಹೆಬ್ಬಯಕೆ ಯೋಗಶ್ರೀ ಪ್ರಕಾಶನದ ಶ್ರೀಮಾನ್ ಎಚ್. ಎನ್. ನಾಗರಾಜ್‌ರವರು ಮುಂದೆ ಬಂದು ಪ್ರಕಟಿಸಲು ಹೊಣೆ ಹೊರುವವರೆಗೆ ಸಫಲವಾಗಿರಲಿಲ್ಲ. ಆದ್ದರಿಂದ ಈ ಸಂದರ್ಭದಲ್ಲಿ ಮೊಟ್ಟಮೊದಲಿಗೆ ನನ್ನ ಕೃತಜ್ಞತೆಗಳು ಸಲ್ಲಬೇಕಾದ್ದು ಅವರಿಗೆ. ಈ ಸಂಕಲನದಲ್ಲಿನ ಕತೆಗಳನ್ನು ಆಸಕ್ತಿಯಿಂದ ಓದಿ ಮುನ್ನುಡಿಯೊಂದನ್ನು ಬರೆದು ಕೊಟ್ಟು ಉತ್ತೇಜನ ನೀಡಿದ ಪ್ರೊ|| ಕ. ವೆಂ. ರಾಜಗೋಪಾಲ್‌ರವರಿಗೆ ನನ್ನ ಕೃತಜ್ಞತಾಪೂರ್ವಕವಾದ ಗೌರವವನ್ನು ಸಲ್ಲಿಸುವುದೂ ಅಷ್ಟೆ ಮುಖ್ಯ ಹೊಣೆ. ಓದುಗ ಬಂಧುಗಳು ಈ ಸಂಕಲನವನ್ನು ಉದಾರವಾಗಿ ಸ್ವೀಕರಿಸಿ ತಮ್ಮ ಅನಿಸಿಕೆಗಳನ್ನು ಪೂರ್ವಗ್ರಹವಿಲ್ಲದೆ ತಿಳಿಸುತ್ತಾರೆಂದು ಭಾವಿಸುತ್ತೇನೆ.

ವಿಜಯಾ ಸುಬ್ಬರಾಜ್
(ಡಾ|| ವಿಜಯಾ ಸುಬ್ಬರಾಜ್)

# ಮಾ ನಿ ಷಾ ದ

ಮೇಲೆ ವಿಸ್ತಾರವಾದ ಬೋಳು ಆಕಾಶ. ಆಗೊಮ್ಮೆ ಈಗೊಮ್ಮೆ ಹರಿದು ಹೋಗುವ ಬಿಳಿಯ ಮೋಡಗಳು, ಬೋಳು ತಲೆಯ ಮೇಲೆ ಮರೆತು ಬಿಟ್ಟ ಬಿಳಿ ಕೂದಲಿನಂತೆ ಕಾಣುತ್ತಿತ್ತು. ಕೆಳಗೆ ನಾನು ತುಂಬು ಪ್ರವಾಹದಲ್ಲಿ ತೇಲಿ ಹೊಗುತ್ತಿದ್ದೇನೆ. ದೊಡ್ಡದಾಗಿ ಏಳುತ್ತಿರುವ ಅಲೆಗಳು ಕಾಲ್ಚೆಂಡಿನಂತೆ ನನ್ನನ್ನು ಎತ್ತಿ ಎತ್ತಿ ಮೇಲಕ್ಕೆ ಎಸೆಯುತ್ತಿವೆ. ಮೇಲೆ ಎಸೆದಾಗ ಗಟ್ಟಿಯಾಗಿ ಆಕಾಶವನ್ನಾದರೂ ಹಿಡಿಯೋಣವೆಂದರೆಶೂನ್ಯತೆಯು ಕೈಗೆ ಸಿಗುತಿತ್ತು. ಜೀವನ ಪರ್ಯಂತದ ಶಕ್ತಿ ಸಂಚಯಿಸಿ ಗಟ್ಟಿಯಾಗಿ ಯಾರನ್ನಾದರೂ ಸಹಾಯಕ್ಕೆ ಕೂಗೋಣವೆಂದರೆ ಒಂದು ಕೀಟವೂ ಕಾಣುತ್ತಿರಲಿಲ್ಲ. ಕಣ್ಣು ಹರಿದಲ್ಲೆಲ್ಲ ಬರಿ ನೀರು ಉಪ್ಪುನೀರು. ಅಲೆಗಳ ಜೊತೆಗೆ ಗುದ್ದಾಡಿ ಗುದ್ದಾಡಿ ಕೈಕಾಲು ಸೊತವು. ಏದುಸಿರುಬಿಡುವಂತಾಗುತ್ತಿತ್ತು. ಸಮುದ್ರಕ್ಕೆ ದಂಡೆಯೇ ಇಲ್ಲವೇನೋ ಎನಿಸುತ್ತಿತ್ತು. ಸಾವಿನ ಸಮುದ್ರದಿಂದ ಹೇಗೆ ತಪ್ಪಿಸಿಕೊಳ್ಳುವುದು – ಎನಿಸುತ್ತಿತ್ತು. ಜಲಸಮಾಧಿ ನನಗೆ ಗಟ್ಟಿ ಅನಿಸಿತು. ಭಯಂಕರ ಜಲವಿದ್ಯುತ್ ಪ್ರವಾಹದಲ್ಲಿ, ಸೋತ ಪ್ರಯತ್ನದಲ್ಲಿ, ನನ್ನ ಸುತ್ತ ನೆರಳು ಕೈ ಒಳಗೆ ಧಗ ಧಗ ಉರಿಯುವ ಪಂಜುಗಳು. ಅಸಹ್ಯ ಮೈ. ವಿಕರಾಳ ರೂಪ, ವಿಕಟನಗೆ ನಕ್ಕು ಕುಣಿಯುತ್ತಿದ್ದವು. ಕುಡಿದು ಕೆಂಪಾದ ಕಣ್ಣುಗಳಿಂದ ನನ್ನನ್ನು ಇರಿಯುವಂತೆ ನೋಡುತ್ತಾ, ಒಂದೊಂದಾಗಿ ನನ್ನ ಕಾಲಿನಡಿಯಿಂದ ಪಂಜಿನ ಸ್ಪರ್ಶ ಮಾಡಿಸಿದರು. ಬಿಸಿ ಬಿಸಿ ರಕ್ತಕ್ಕೆ ಬೆಂಕಿಯಸ್ಪರ್ಶ ಚಟಚಟ ಶಬ್ದ, ನೋವು, ಕ್ರಮೇಣ ಉರಿಯತೊಡಗಿದೆ. ಜ್ವಾಲೆಗಳ ನಡುವೆ ಅಸ್ಪಷ್ಟ ಆಕೃತಿಯಾಗಿ ಕಾಣುವ ನಾನು ಪೂರ್ತಿಯಾಗಿ ಬೆಂಕಿಯುಂಡೆಯಾದೆ. ಭೂ ವಿಕಾಸದ ಮೊದಲಿಗೆ ಭೂಮಿಯೂ ಬೆಂಕಿಯುಂಡೆಯಾಗಿದ್ದುದು ನೆನಪಾಯಿತು ಹಾಗಾದರೆ ನಾನು ಭೂಮಿ! ನಾನು ಭೂಮಿ! ಸಂತೊಷವಾಯಿತು ಬೆಂಕಿಯುಂಡೆಯಾಗಿದ್ದರೂ ನನ್ನ ಸಂವೆದನೆಗಳು ಕಳೆದಿರಲಿಲ್ಲ. ಏನಾಗುತ್ತಿದೆಯೆಂಬುದರ ಪ್ರಜ್ಞೆಇತ್ತು. ನೋಡ ನೋಡುತ್ತಿದ್ದಂತೆ ನೆರಳು

ಗಳ ನರ್ತನ ನಿಂತಿತು. ತೃಪ್ತಿಯಾದಂತೆ ಕಂಡವು. ಕ್ರಮೇಣ ಕಂಪಿಸುತ್ತಾ ಮರೆಯಾದವು. ನೀರಿನ ಪದರದ ಮೇಲೆ ಗುಳು ಗುಳು ಉರುಳುತ್ತಾ ಹೋದೆ

ಹೀಗಾದರೂ ದಂಡೆ ತಲುಪಬಹುದೇನೋ ಎಂಬ ಆಸೆ ಮೂಡಿತು. ಮನಸ್ಸು ಹಗುರವಾಯಿತು. ಹಿಂದೆ ತಿರುಗಿ ನೋಡಿದೆ. ಓಹ್ ಊಹಿಸಲಾಗದಷ್ಟು ದೂರ ಸವೆದಿದ್ದೇನೆ. ಹಾಗಾದರೆ ಎಷ್ಟು ದಿವಸದಿಂದ ಈ ಪ್ರವಾಹದ ಒಡಲಲ್ಲಿ ಬದುಕಿದ್ದೇನೆ! ನನ್ನ ತಾಳ್ಮೆಗೆ ನಾನೇ ಮೆಚ್ಚಿದೆ. ಬೀಸುವ ಗಾಳಿ ಸತ್ತಿತು! ಹೆಬ್ಬುಲಿಯಲೆಗಳು ಸೋತವು! ಕಡಲೂ ಮೌನ!

ನಿರಾಳ ಉಸಿರಾಡಿದೆ. ಧಗ ಧಗ ಉರಿಯುತ್ತ ಉರುಳುತ್ತಿದ್ದ ಉಂಡೆ ನಾನು ತಣ್ಣಗಾಗಿದ್ದೆ. ಆ ಉಂಡೆ ಮೈಯೊಳಗಿಂದ ಎರಡು ಕೈ ಎರಡು ಕಾಲು ಹೊರಗೆ ಬಂತು. ದೂರದಲ್ಲಿ ದಂಡೆ ಕಾಣಿಸಿತು. ಈಗ ಅವನು ಸಿಗಬಾರದೆ? ಎನಿಸಿತು. ನೆಮ್ಮದಿಯ ಉಸಿರಾಡುತ್ತಿರುವಷ್ಟರಲ್ಲಿ ಅನಿರೀಕ್ಷಿತವಾಗಿ ದೊಡ್ಡದೊಂದು ಅಲೆ ಬಂದು ಅಪ್ಪಳಿಸಿತು. ಮನುಷ್ಯ ದೇಹದ ಸ್ಪರ್ಶ. ಆಶ್ಚರ್ಯ ನನ್ನ ಹಾಗೆ ಸೆಳವಿಗೆ ಸಿಕ್ಕವರು ಯಾರಿರಬಹುದು? ಯೋಚಿಸಿದೆ. ಆ ದೇಹ ಕೈಯಾಗಿ ಮೂಡಿದ ನನ್ನ ಕೈಗಳನ್ನು ಹಿಡಿಯಿತು. ನನ್ನ ಬೆಂಕಿದೇಹ ಮಾಯವಾಯಿತು. ದಾಹ ವಿಪರೀತವಾಗಿದ್ದುದರ ನೆನಪಾಯಿತು. ಆ ಮೃದುವಾಗಿದ್ದ ಕೈಗಳಪ್ಪುಗೆಯಿಂದ ಸ್ವಲ್ಪ ದಣಿವಾರಿತು. ಪರವಾಗಿಲ್ಲ. ಒಬ್ಬರಿಗೊಬ್ಬರ ಸಹಾಯ ಸಿಕ್ಕುತ್ತದೆ ಎಂದುಕೊಂಡೆ. ಅಷ್ಟರಲ್ಲಿ ಆ ಕೈಗಳು ನನ್ನ ಮುಖವನ್ನು ತನ್ನತ್ತ ತಿರುಗಿಸಿದವು. ನೋಡುತ್ತೇನೆ, ಅವನೇ. ಅರೇ ಅವನು ಇಲ್ಲಿಗೆ ಹೇಗೆ ಬಂದ! ಕಣ್ಣು ಮೋಸ ಮಾಡಿದವೇನೋ ಕೇಳಿ ಖಚಿತ ಪಡಿಸಿಕೊಳ್ಳೋಣವೆಂದು ಕೇಳಿದೆ, 'ಯಾರು ನೀನು?' ಅವನು ಆ ಪ್ರಶ್ನೆಗೆ ನಕ್ಕನಲ್ಲದೆ ಉತ್ತರ ಕೊಡಲಿಲ್ಲ. ಮತ್ತೆ ಕೇಳಿದೆ, ಅವನು ಮೊದಲು ದಂಡೆ ಸೇರೋಣ, ಆಮೇಲೆ ಪರಿಚಯ ಎಂದ. ಸುಮ್ಮನಾದೆ. ನೀರು ಬೇಸರ ಬರಿಸಿತ್ತು. ಎಂದು ನೆಲ ಕಂಡೀತು ಎಂದು ಹಂಬಲಿಸಿತು ನನ್ನ ಮನಸ್ಸು.

ದಂಡೆಯನ್ನು ದಾಟಿ ಹರಿದ ನನ್ನ ಕಣ್ಣಿಗೆ ದೂರದಲ್ಲಿ ಮಂದ ಬೆಳಕು ಕಾಣಿಸಿತು. ನಾನು ದಡ ಮುಟ್ಟಿದ್ದೆ. ಖುಷಿಯಿಂದ ಕುಣಿಯುವಂತಾಯಿತು.

ನನ್ನನ್ನು ಹಿಡಿದುಕೊಂಡು ದಂಡೆವರೆಗೂ ಬಂದ ವ್ಯಕ್ತಿ ನನ್ನನ್ನು ಎಸೆದು ಒಂದೇ ಓಟ ಓಡಿದ. ಯಾಕೆ ಹೀಗೆ ಓಡುತ್ತಿದ್ದಾನೆ ಈ ಮನುಷ್ಯ, ಬಡ ಪಾಯಿ ಎಂದುಕೊಂಡೆ. ಗಟ್ಟಿಯಾಗಿ ಕುತ್ತಿಗೆಪಟ್ಟಿಯನ್ನು ಹಿಡಿದಾದರೂ ಎಳೆಯೋಣವೆಂದು ಕೈ ಚಾಚಿದರೆ ಒಂದೇ ಸಮನೆ ಬೊಗಳುವ ನಾಯಿ ಯೊಂದೇ ಇತ್ತು. ಅವನು ಇರಲಿಲ್ಲ.

o o o

ಹಗಲು ರಾತ್ರಿಗಳೆಲ್ಲ ನನ್ನ ಪಾಲಿಗೆ ಒಂದೇ ಆಗಿದ್ದವು. ಒಮ್ಮೆಯಾ ದರೂ ಅವುಗಳ ವ್ಯತ್ಯಾಸ ಅರಿವಿಗೆ ಬರಬಾರದೇ ಎನಿಸಿತು. ದಿನಗಳು ಕಳೆಯು ವುದು ಅವನ ಜತೆ ಅಸಹ್ಯವೆನಿಸಿತ್ತು. ಅವನು ಸುಳಿದರೆ ದೈತ್ಯ ನೆರಳುಗಳ ಭೀತಿಯೆನಿಸಿತ್ತು.

ದಿನಂಪ್ರತಿ ಹಸಿದು ಬರುತ್ತಿದ್ದ ಅವನಿಗೆ ನೀಡುವಷ್ಟು ಮಾಂಸ ನನ್ನಲ್ಲಿರಲಿಲ್ಲ. ಗರ್ಜಿಸುತ್ತಿದ್ದ. ಹೆದರಿ ಮೂಲೆ ಸೇರುತ್ತಿದ್ದ ನನಗೆ ಈ ಗುಹೆಯಿಂದ ತಪ್ಪಿಸಿ ಕೊಂಡು ಹೋಗುವುದಕ್ಕೆ ಸಾಧ್ಯವೇ ಇಲ್ಲವೆನಿಸಿತು. ದೊಡ್ಡವರ ಒಪ್ಪಿಗೆಯಿಂದ ಈ ಗುಹೆ ಸೇರಿದ್ದೆ. ಒಳಗೆ ಸೇರಿಸಿದ್ದೇ ಬಾಯಿಗೆ ದೊಡ್ಡಬಂಡೆಯನ್ನು ಅಡ್ಡ ಲಿಟ್ಟಿದ್ದರು. ಇವನು ಹೇಗೋ ಬಂಡೆಯನ್ನು ಒತ್ತರಿಸಿ ಹೊರಗೆ ಸುತ್ತಾಡಿ ಕಂಡ ಕಂಡದ್ದನ್ನು ಮೂಸಿ ಮೇದು ಬರುತ್ತಿದ್ದ. ಬಕಾಸುರ ಹೊಟ್ಟೆಗೆ ಅಷ್ಟು ಸಾಕಾಗದೆ ನನ್ನ ಮಾಂಸ ಬೇರೆ ಬೇಕಿತ್ತು. ಮಿರ ಮಿರ ಮಿಂಚುತ್ತ ಸುಪುಷ್ಟವಾಗಿದ್ದ ನನ್ನ ಮಾಂಸ ಕಂಡೊಡನೆ ಜೊಲ್ಲು ಸುರಿಸುತ್ತಿದ್ದ. ಆ ಕಣ್ಣುಗಳಲ್ಲಿ ಕೊಳ್ಳಿ ಬೆಂಕಿ ಉರಿಯುತ್ತಿತ್ತು.

ಹೊರಗಿನ ಪ್ರಪಂಚದ ಬೆಳಕೇ ನನ್ನಿಂದ ದೂರವಾಗಿತ್ತು. ಕಣ್ಣರಳಿಸಿ ದೊಡ್ಡದಾಗಿ ಕಾಣುವ ಅದ್ಭುತಗಳನ್ನು ನೋಡಬೇಕೆಂದು ಬಯಸಿತ್ತು. ಕತ್ತಲು, ಜವಗು, ಬೆವರವಾಸನೆ, ಕೊಳಕು ದಟ್ಟಯಿಸಿತು. ಆ ಪರಿಸರದಲ್ಲಿ ಉದುರಿದ್ದೆಂದರೆ ಕೀಟಗಳು, ಕ್ರಿಮಿಗಳು! ಧೂಳು ಝಾಡಿಸಲೂ ಆಗದ ಆ ಸಂಕೀರ್ಣ ಗುಹೆಯಲ್ಲಿ ನಮ್ಮ ಸುತ್ತ ಜೇಡ ಬಲೆ ಹೆಣೆಯಿತು. ಬಲೆಯೊ ಳಗೆ ಕೀಟಗಳು-ಕೀಟಗಳ ಮಧ್ಯೆ ನಾನು. ನನ್ನನ್ನು ಕೀಟಗಳು ಕಡಿದು

ಕಡಿದು ರಕ್ತ ಹೀರತೊಡಗಿದವು. ತೇಲುಗಣ್ಣು ಬೀಳತೊಡಗಿತು. ಹೇಗಾದರೂ ಗುಹೆಯ ಬಾಯಿ ತೆರೆದಾಗ ಬಲೆ ಕಡಿದು ಹೊರಗೆ ಓಡಿಬಿಡಬೇಕೆಂದುಕೊಂಡೆ!

ಎಷ್ಟು ಚೆನ್ನಾಗಿರುತ್ತೆ! ಕತ್ತಲನ್ನು ಉಗುಳಿಬಿಟ್ಟು ಬೆಳಕನ್ನು ಹೀರಿ, ಅದರಲ್ಲಿ ಮೀಯಬೇಕು, ವಿಚಿತ್ರ ದೃಶ್ಯಗಳನ್ನು ಕಾಣಬೇಕು, ದೊಡ್ಡ ಕಾಡಿನಲ್ಲಿ ಸ್ವಚ್ಛಂದ ಸುಳಿದಾಡಬೇಕು, ನನಗಿಂತ ಭಿನ್ನರಾದವರನ್ನು ನೋಡಬೇಕು ಹಾಯಬೇಕು, ತಿವಿಯಬೇಕು. ಎಷ್ಟು ಖುಷಿಯಾಗಬಹುದು. ಅವನ ಆ ಹಳಸಿದ ನಾಲಗೆಯ ವಾಸನೆ ಓಕರಿಕೆ ಬರಿಸುತ್ತಿತ್ತು. ರೆಕ್ಕೆ ಪಟಪಟನೆ ಹೊಡದೆ ಕಾದೆ, ಕಾಯುತ್ತಲೇ ಕುಳಿತೆ.

ಂ ಂ ಂ ಂ

ನನಗೂ ಸಿಟ್ಟು ಬಂದಿತ್ತು. ಕಿರುಚಿದೆ. ನನ್ನ ಬಾಯ ಬಡಿದು ನಿರ್ಬಂಧಿಸಬೇಡ. ನಿನ್ನಷ್ಟೇ ಸ್ವಾತಂತ್ರ್ಯ ನನಗಿದೆ. ಜೇನು ಸವರಿದ ನಿನ್ನ ನಾಲಿಗೆ ವಿಷ. ನಿನ್ನ ಖುಷಿಗೆ ನಾನು ಹೆಂಡ. ನಿನ್ನ ಸ್ವಾರ್ಥಕ್ಕೆ ನಾನು ದಲಾಲಿ. ನಿನ್ನ ಮೋಜಿಗೆ ನಾನು ಮಾಂಸ. ತಿಳೀತು....ಅದಕ್ಕೇ ನೀನು ನನ್ನ ಮೇಲೆ ನೇಣು ಎಸೆದದ್ದು. ಹಸುರಾಗಿದೆ ಎಂದುಕೊಂಡೆ. ಪುಷ್ಕಳ ಊಟ ಸಿಗುತ್ತೆ ಎಂದುಕೊಂಡೆ. ನಿನ್ನ ದುರಭ್ಯಾಸ, ದುಷ್ಟತನ ಅಸಲಿ ಬಣ್ಣ, ಮುಖವಾಡ ಹಾಕಿಕೊಂಡು ಮೋಸಮಾಡಿದೆ.

ನನ್ನ ಮಾತು ಆವನ ಮೇಲೆ ಯಾವ ಪರಿಣಾಮವನ್ನೂ ಬೀರಲಿಲ್ಲ. ಕೆಟ್ಟದಾಗಿ ನಗತೊಡಗಿದ. ಅಸಹ್ಯವಾಯಿತು. ಸಾಯಿಸಿಬಿಡುವ ಯೋಚನೆ ಬಂತು. ಮರುಗಳಿಗೆ ನಾನು ದುರ್ಬಲ ಜಾತಿ ಎಂದು ಗೊತ್ತಾಯಿತು. ನಿನ್ನ ಪಂಜುಗಳಿಂದ ನಿನ್ನ ಹಲ್ಲುಗಳಿಂದ ತಪ್ಪಿಸಿಕೊಳ್ಳುತ್ತೇನೆ. ನೋಡುತ್ತಿರು–ಎಂದು ಕೂಗಿ ಹೇಳಬೇಕೆಂದಿದ್ದೆ. ಆದರೆ ಕೆಲಸ ಕೆಡುತ್ತೆ ಅಂತ ಅನ್ನಿಸಿ ಸುಮ್ಮನಾದೆ.

ನಾನೇ ಹೆಣೆದುಕೊಂಡ ಬಲೆ. ಒಳಗೇ ವಿಲಿವಿಲಿ ಒದ್ದಾಡಿದೆ. ದಟ್ಟವಾಗಿ ಬೆಳೆದ ಪೊದೆಗಳನ್ನು ಕಡಿದು ನಾನೇ ಹಾದಿಯನ್ನು ನಿರ್ಮಿಸಿಕೊಳ್ಳಬೇಕು

ಕಿಷ್ಕಿಂಧೆಯ ಕಲ್ಲು ನೆಲದಲ್ಲಿ ಯಕ್ಷಲೋಕದ ಕನಸುಗಳ ಕಳೆ ತೆಗೆಯಬೇಕು

ಹೊಂಚಿ ಕಾದಿದ್ದು ಒಂದಿಷ್ಟು ಚಿಕ್ಕಕೆಂಡಿಯಾದರೂ ನುಸುಳಿ ಹೋಗ ಬೇಕು. ನಿರ್ಧಾರ ಗಟ್ಟಿಯಾಗುತ್ತಾ ಬಂತು. ಹೊಗೆಯಾಡುತ್ತಿರುವ ಸಿಗ ರೇಟು ಹಾಗೆಯೇ ಹಾವಾಗಿ ಹಿಂದಿರುಗಿ ಅವನ ತುಟಿ ಕಚ್ಚಬೇಕೆಂದು ಹಿಡಿ ಶಾಪ ಹಾಕಿದೆ.

ನನ್ನ ಅಸಹಾಯಕತೆ ನಾನು ಹಾರಿಹೋಗಲಾರೆ-ಅನ್ನುವ ಭರವಸೆ ಯನ್ನು ಅವನಿಗೆ ಕೊಟ್ಟ ಹಾಗಿತ್ತು. ಅದಕ್ಕೆ ಪ್ರತಿಭಟನೆಯಿಲ್ಲದೆ ನನ್ನ ಸಿಡುಕು ಬೈಗಳನ್ನು ತಣ್ಣಗೆ ಸ್ವೀಕರಿಸಿದೆ.

ಎಷ್ಟು ದೊಡ್ಡದಾಗಿದೆ ಈ ಪ್ರಪಂಚ. ಮೈಮನಸ್ಸು ರೋಮಾಂಚಿತ ವಾಯಿತು. ನಾನು ಸುರಕ್ಷಿತ. ಇಷ್ಟ ಬಂದಂತೆ ಅಲೆದಾಡಬಹುದು. ಈ ಕಾಡಿ ನಲ್ಲಿ ಏನೆಲ್ಲ ವೈವಿಧ್ಯತೆಯಿದೆ! ಈ ಪ್ರಾಣಿಗಳು ಬೇರೆ ಬೇರೆಯಾಗಿಯೇ ಇವೆ ಯಲ್ಲ! ಒಂದೊಂದರ ಬಳಿಯೂ ನಿಂತು ನಿಂತು ಮುಂದೆ ಹೋದೆ.

ಬೆಳಗಿನಿಂದ ಒಂದೇ ಸಮನೆ ಸುತ್ತಾಡಿದೆ. ಹೊಟ್ಟೆ ಚುರುಗುಟ್ಟಿತು. ಮೇವಿಗೆ ಸಮಸ್ಯೆ ಬಂತು, ಹಸಿವಿನ ಅನುಭವ ನನಗೆ. ಮೊಟ್ಟಮೊದಲ ಈಗ ಆಗಿತ್ತು. ಆ ಕತ್ತಲಲ್ಲಿ, ಬೆವರಲ್ಲಿ, ಅವರ ಹಿಂಸೆಯಲ್ಲಿ ನಾನು ನಿಷ್ಪಂದ ಜಡ ವಾಗಿದ್ದೆ. ಹೊರಗೆ ಬಿದ್ದದ್ದೇ ಏನೇನೋ ಭಾವನೆಗಳು, ಬಯಕೆಗಳು. ಅವು ಗಳ ಪೂರ್ತಿಗೆ ಸಾಹಸ ಪ್ರಯತ್ನಗಳು. ಪ್ರತಿಯೊಂದು ಗಿಡ ಮರದ ಹಣ್ಣು ಗಳ ರುಚಿ ನೋಡಿದೆ. ಸಾಕಾಗಲಿಲ್ಲ. ನಡೆಯುತ್ತಾ ನಡೆಯುತ್ತಾ ಕಾಲು ಚುರುಕುಗೊಂಡು ಓಡತೊಡಗಿದೆ. ಆ ವೇಗಕ್ಕೆ ನನಗೇ ಮುಗ್ಗರಿಸುವಂತೆ ಆಗು ತ್ತಿತ್ತಲ್ಲದೆ ಎದುರು ಬಂದದ್ದೆಲ್ಲಾ ಜೋಲಿ ಹೊಡೆದು ಮುಂದಕ್ಕೆ ಬೋರಲಾಗಿ ಬೀಳುತ್ತಿತ್ತು. ಓಡುವ ನನಗೆ ಪ್ರಪಂಚ, ಕಾಡು ನನಗಿಂತ ವೇಗವಾಗಿ ಸ್ಪರ್ಧಿಸಿ ಓಡುವಂತಿತ್ತು.

ಓಡಿದಷ್ಟೂ ನಿಲ್ಲುವುದಕ್ಕೆ ನೆಲೆಯೇ ಸಿಗಲಿಲ್ಲ. ಹೀಗೆಯೇ ಓಡುತ್ತಿದ್ದರೆ

ಭೂಮಿಯ ತುದಿಯೂ ತಪ್ಪಿ ಹೋಗುತ್ತದೆ ಅನಿಸಿತು. ಯಾರಾದರೂ ಸಿಕ್ಕಿದರೆ ಆಶ್ರಯಪಡೆಯಬಹುದು .... ಛಿ! ಆಶ್ರಯವೇ ? ಆಶ್ರಯದಿಂದ ತಪ್ಪಿಸಿಕೊಂಡೇ ಬಂದಿರುವಾಗ ಮತ್ತೆ ಆಶ್ರಯ ಬಯಸಿತ್ತೇ ಮನಸ್ಸು! ನಾನು ಬಿಟ್ಟು ಬಂದ ಗುಹೆಯೇ ಮತ್ತೆ ಸಿಕ್ಕರೆ ಖಂಡಿತ ಸಮಾಧಿ!

ಮೈ ಕಂಪಿಸಿತು. ಎದೆ ನಡುಗಿತು. ಅವನೇನಾದರೂ ಬೆನ್ನಟ್ಟಿದರೆ! ನನ್ನಿಂದ ಅವನಿಗೆ ಲಾಭವೇ. ಸುಮ್ಮನೆ ಬಿಡಲಾರ. ಅವನ ವ್ಯವಹಾರಗಳು ಕುಸಿಯುತ್ತವೆ. ಹಸಿವಿನಿಂದ ಸಾಯಬೇಕಾಗುತ್ತದೆ. ನನ್ನನ್ನು ಹಿಂಸಿಸುವುದೆಂದರೆ ಒಂದು ಥರಾ ಖುಷಿ. ನನ್ನನ್ನು ಕಾಡುವ ಕ್ಯಾಲಿಬಾನ್. ನನ್ನಲ್ಲಿನ ಮಿರಾಂಡ ಸತ್ತು ಹೋಗಿದ್ದಾಳೆ!

ಹಾವು ಮೊಸಳೆಗಳಿಂದ ಬಿಡಿಸಿ ರಕ್ಷಿಸುವುದಕ್ಕೆ ಪರ್ಸಿಯಸ್ನಾಗಿ ಬರುವ ಮಹಾನುಭಾವ ಇಲ್ಲ. ನಾನು ಪುರಾಣದ ಹೆಣ್ಣಲ್ಲ! ಈ ಲೋಕದ್ದು! ದೇವರು ಬರಲಾರ. ಮೊರೆಯಿಡುವುದು ಬೇಡ.

ಅವನ ನೆನಪಿನ ನೆರಳು ನನ್ನನ್ನ ಹಿಂಬಾಲಿಸುತಿತ್ತು. ಭೂತವಾಗಿ ಯಾವ ಕ್ಷಣದಲ್ಲಾದರೂ ನುಂಗಬಹುದಿತ್ತು. ದಟ್ಟವಾದ ಕಾಡು. ಬಹುಶಃ ಬರಲಾರ. ನಾನು ಅವನ ಕಣ್ಣಿಂದ ತಪ್ಪಿ ಹೋಗುತ್ತೇನೆ. ನೊರೆ ಕಾರುತ್ತಾ, ಏದುಸಿರು ಬಿಡುತ್ತಾ ಬಾಲ ಸುತ್ತಿಕೊಂಡು ಹೊರಟುಹೋಗುತ್ತೇನೆ - ಭಾವನೆ ಸ್ವಲ್ಪ ಸಮಾಧಾನ.

ಕತ್ತಲು ಬೀಳುವುದೇ ಇಲ್ಲ ಈ ಕಾಡಿನಲ್ಲಿ ಎಂದುಕೊಂಡಿದ್ದೆ. ಆದರೆ ಆಶ್ಚರ್ಯ. ಇಲ್ಲೂ ಕತ್ತಲು ಅಲ್ಲೂ ಗುಹೆಯಲ್ಲೂ ಕತ್ತಲು. ಇದ್ಯಾಕೆ ಇದು ಹೀಗೆ ಎಂದು ಯೋಚಿಸಿತು ಬುದ್ಧಿ—ಭಟ್ಟಿ ಇಳಿಸಿದ ಮಸಿಗತ್ತಲಲ್ಲಿ. ಜೊಲ್ಲು ಸುರಿಸುತ್ತಾ ನಾಲಿಗೆ ಚಾಚಿದ ಪ್ರಾಣಿಗಳು. ಡೇಂಜರ್ ಲೈಟ್‌ಗಳಂತೆ ಉರಿಯುತ್ತಿರುವ ಕಣ್ಣುಗಳು. ಒಂದೇ ಎರಡೇ, ಪಿಲಪಿಲನೆ ಮರಿಇಟ್ಟಂತೆ ಅಸಂಖ್ಯಾತ ಕಣ್ಣು ದೀಪಗಳು ಹೊತ್ತಿ ಉರಿಯತೊಡಗಿದವು. ಭಯವಾಯಿತು ಸ್ವಚ್ಛಂದ

ವಾಗಿ, ಸುರಕ್ಷಿತವಾಗಿ ಈ ಕಾಡಿನಲ್ಲಿ ಅಲೆದಾಡಬಹುದು – ಎಂದುಕೊಂಡ್ರು
ಗುಹೆ ದಾಟಿ ಬಂದಿದ್ದೆ. ನಾನು ಹೊದ ಕಡೆಯಲ್ಲೆಲ್ಲ ಅವು ನನ್ನ ಬೆನ್ನಟ್ಟಿ
ದ್ದವು. ಇವುಗಳಲ್ಲಿ ಅವನವೂ ಇರಬಹುದೇ ಎನಿಸಿತು. ಆದರೆ ಹೇಗೆ ಎಲ್ಲವೂ
ಇರಬಹುದೇ ಎನಿಸಿತು. ಆದರೆ ಹೇಗೆ ? ಎಲ್ಲವು ಒಂದೇ ಸಮನೆ ಇದ್ದವು.
ಯಾರ ಕಣ್ಣುಗಳು ಯಾರದೋ? ಮುಖಗಳೇ ಕಾಣುತ್ತಿಲ್ಲ. ಪೆಂಡುಲಮ್
ನಂತೆ, ಕೆಂಪು ನಾಲಿಗೆಗಳು ಜೋತಾಡುತ್ತಿವೆ. ಸುತ್ತಲೂ ಕಣ್ಣುಗಳು ಬೇಟೆ
ಯಾಡುತ್ತಿವೆ. ತಿರುಗಿ ನೊಡಲೂ ಸಾಹಸ ಸಾಕಾಗಲಿಲ್ಲ. ಬೆಳಿಗ್ಗೆ ತಂಪಾಗಿದ್ದು
ಬಿಳಿಯ ದೀಪಗಳಾಗಿದ್ದು ಕತ್ತಲಲ್ಲಿ ಮಾತ್ರ ಕೆಂಪು ದೀಪಗಳಾಗಿ ಭೀತಿ ಹುಟ್ಟಿ
ಸತೊಡಿಗಿದವು. ನಡಿಗೆ ತಡವರಿಸಿತು. ಗಟ್ಟಿಯಾಗಿ ಕಣ್ಣು ಮುಚ್ಚಿಕೊಂಡರೆ
ಈ ಕಣ್ಣುಗಳು ಮರೆಯಾಗುವುವೇನೊ ಎಂದುಕೊಂಡೆ. ಆದರೆ ಕಣ್ಣು ಮುಚ್ಚಿ
ದರೆ ಮನಸ್ಸಿಗೆ ಇಳಿಯುವ ಭಯದಿಂದ ನೋಡುತ್ತಲೇ ಇದ್ದೆ. ಹುಲಿ, ಸಿಂಹ
ತೋಳ, ಹಸು ಎಲ್ಲಾ ಒಂದೇ! ಒಂದೇ ಒಂದು ಜೊತೆ ಕಣ್ಣುಗಳು ಹತ್ತಿರ
ಹತ್ತಿರ ಬರತೊಡಗಿದವು. ನಿಂತಲ್ಲೇ ಕಾಲು ಕುಸಿಯಿತು. ಉಳಿದ ಕಣ್ಣುಗಳು
ಕೆಂಪು ಬೆಳಕಲ್ಲಿ ಬರುತ್ತಿರುವ ಕಣ್ಣುಗಳ ಮುಖ ಕಾಣಿಸಿತು. ಬರುತಾ
ಬರುತ್ತಾ ಸ್ಪಷ್ಟವಾಯಿತು. ಅದು ತೋಳ ಮುದಿ ತೋಳ. ಕೈ ಚಾಚಿ
ಹಿಡಿಯಿತು. ಚಿಟ್ಟನೆ ಚೀರಿ ಕಣ್ಣು ಮುಚ್ಚಿದೆ-

o o o

ಇಷ್ಟು ದಿವಸ ಅಲೆದಾಡಿದ್ದು ಸಾರ್ಥಕವಾಯಿತು. ತಲೆಗೊಂದು ನೆರಳು
ಸಿಕ್ಕಿತು. ಅಜೀರ್ಣದಿಂದ ಹಣ್ಣಾದ ದೇಹ ಸೋತಿದೆ. ಕೊನೆಗಾಲ. ಮನೆ
ತುಂಬ ಪುಟ ಪುಟ ಕೆನೆವ ಮರಿಗಳು. ಯಾರದು ಇಷ್ಟೊಂದು ಅನಿಸಿತ್ತು.
ಆಮೇಲೆ ತಿಳಿಯಿತು, ಇವನದೇ ಎಂದು. ಒಳಗೆ ಹೊರಗೆ ಸುಳಿದಾಡಿದೆ ವಿಶಾಲ
ವಾಗಿದೆ ಕೋಟೆ ಇದರಲ್ಲಿ ನಾನು ಸುರಕ್ಷಿತ. ಅಭೇದ್ಯ ಕೋಟೆಯಲ್ಲಿ ನೆಲೆಸಿಕ್ಕಿ
ದ್ದು ಆಶ್ಚರ್ಯ! ಪಾಪ ಸೋತು ಶಿಪ್ಪೆಯಾದ ಈ ನನ್ನ ಬಗ್ಗೆ ಮರುಕ ತುಂಬಿ
ತ್ತು. 'ಕಾಡು' ಎಂದರೆ ಹಿಂಸ ಪಶುಗಳೇ ಇರುತ್ತವೆ ಎಂದುಕೊಂಡಿದ್ದೆ
ಈಗ ಅವನು ಬಂದರೂ ಏನೂ ಮಾಡಲಾರ ನನ್ನ ಪಿಳ್ಳೆಗಳು ನರಳಿ ನರಳಿ ಸತ್ತಿ

ರಬೇಕು. ಪೀಡೆ ಕಳೆಯಿತು ಎಂದುಕೊಂಡೆ.

ನಿರುಪದ್ರವಿ ಪ್ರಾಣಿ ಜೊತೆ ವಾಸಕ್ಕೆ ಸಿಕ್ಕಿದ್ದು ಅದೃಷ್ಟ. ಸ್ವಲ್ಪ ಸ್ವಲ್ಪ ಸುಧಾರಿಸಿಕೊಂಡೆ. ಹೊಸ ಜಾಗದಲ್ಲಿ ಹೊಂದಿಕೊಳ್ಳಲಾರೆ ಎನಿಸಿತು. ಆದರೆ ಕ್ರಮೇಣ ಸುಧಾರಣೆ ಸಾಧ್ಯ ಎನಿಸಿತು. ಮೈ ತುಂಬಾ ಮಲ ಮಲ ಅರಳಿದ ಮೊಗ್ಗುಗಳು. ಬತ್ತಿ ಹೋದ ನದಿಗಳೆಲ್ಲ ಮತ್ತೆ ತುಂಬಿಕೊಂಡು ಉಕ್ಕಿ ಹರಿ ದವು. ಮಳೆ ಬಿದ್ದು ಮೆದುವಾದ ನೆಲ ಮಣ್ಣಿನ ವಾಸನೆ ಹೊರಡಿಸಿತು. ಮೂ ಗರಳಿಸುವಂತಹ ಪರಿಮಳ. ಹುಚ್ಚು ಹಿಡಿಸುವ ಮಾದಕ ಮಧುರ ಋತು.

ಗುಹೆಯ ಕೊಳಕಿನಲ್ಲಿ ನಾರುವ ಬಾಡುವ ಋತು, ಕಾಡಿನಲ್ಲಿ, ಗೂಡಿ ನಲ್ಲಿ, ಸ್ವಚ್ಛಂದವಾಗಿ ಗಾಳಿಗೆ ತೂಗಿ ತೊನೆಯುತ್ತಾ ಅರಳಿತು! ಸಣ್ಣಗೆ ಬಯಕೆಯ ನೆರಳು ಹೊರಟಿತು. ಎಲ್ಲಿಂದ ಬಂದುದೋ ಅರ್ಥವಾಗಲಿಲ್ಲ.

ಗಂಟೆಯಾಗಲೇ ಹತ್ತಾಯಿತು. ಮರಿಗಳು ಮಲಗಿದ್ದವು. ಕತ್ತಲೆಂದರೆ ಭಯವಾಗಿತ್ತು. ಮತ್ತೆಲ್ಲಿ ಕೆಂಪು ಕಣ್ಣುಗಳು ಬೆನ್ನಟ್ಟುವವೋ ಎಂದು ಸಂಶ ಯ ಬಂತು. ನೆರಳುಕೊಳ್ಳ ಪ್ರಾಣಿ ಇನ್ನೂ ಬಂದಿರಲಿಲ್ಲ. ಆ ಪ್ರಾಣಿಯ ಭೀತಿ ನನಗೆ ಇರಲಿಲ್ಲ. ಅಕಸ್ಮಾತ್ತಾಗಿ ಬೇರೆ ಪ್ರಾಣಿಗಳೇನಾದರೂ ವಾಸನೆ ಹಿಡಿದು ನುಗ್ಗಿ ಬಂದರೆ ಎಂದು ಮಾತ್ರ ತಲ್ಲಣಿಸಿದೆ. ಒಂದೇ ಸಮನೆ ಗಾಳಿ ಬೀಸತೊಡಗಿತು. ರಭಸದಿಂದ ಬೀಸುತ್ತಿರುವ ಗಾಳಿಗೆ ಈ ಮನೆ–ಅಂದರೆ ಈ ಗೂಡು ಹಾರಿಹೋಗುವುದೇನೋ ಎನಿಸಿತು. ಗಟ್ಟಿಯಾಗಿ ಹಾಸಿಗೆಯನ್ನು ಹಿಡಿದೆ.

ಒಂದು ಗಂಟೆಯ ನಂತರ ಗಾಳಿ ಬೀಸುವುದು ನಿಂತುಹೋಯಿತು. ದಣಿದ ಕಣ್ಣುಗಳು ಹಾಗೇ ಮುಚ್ಚಿದವು. ನಾನು, ನನ್ನ ಗುಹೆ. ಆ ಗುಹೆಗೆ ಬಂದದ್ದು ಅವನ ಸರ್ಪಕಾವಲಿನಲ್ಲಿ ನರಳಿದ್ದು, ಗೃಧ್ರ ಕೊಕ್ಕಿಗೆ ಸಿಕ್ಕಿ ಕುಕ್ಕಿಸಿಕೊಂಡದ್ದು ರಾಕ್ಷಸ ಕೈಗಳಲ್ಲಿ ಉಂಡೆಯಾದದ್ದು, ಪಂಜು ಕಣ್ಣುಗಳಲ್ಲಿ ನನ್ನ ಕನಸುಗ ಳನ್ನು ಸುಟ್ಟಿದ್ದು, ಕತ್ತಲು, ಕಮರು ವಾಸನೆಗಳಲ್ಲಿ ಕ್ರಿಮಿ ಕೀಟಗಳನ್ನು ಹುಟ್ಟಿಸಿದ್ದು–ಎಲ್ಲಾ... ಎಲ್ಲಾ ಒಂದೊಂದಾಗಿ ನೆನಪಾಯಿತು. ಅವನಿಂದ

ದೂರ ದೂರ ತಪ್ಪಿಸಿಕೊಂಡು ಭಯಂಕರ ಕಾಡಿನಲ್ಲಿ ಅಲೆದಾಡಿದ್ದು....ಕಣ್ಣು ಗಳು ಬೇಟೆಯಾಡಿದ್ದು.... ತಪ್ಪಿಸಿಕೊಂಡು ನೆರಳಲ್ಲಿ ಕೊನೆಗೆ ನಿಂತದ್ದು.... ಅಲ್ಲಿಂದ ಮುಂದೆ....ಮುಂದೆ....ಅಸ್ಪಷ್ಟ.

'ಕಟ್' 'ಕಟ್' ಬಾಗಿಲು ಬಡಿದ ಶಬ್ದ. ಅರೆ! ಕಾಡಿಗೆ ಬಾಗಿಲಿದೆಯೇ ಎನಿಸಿತು. ಹೆಜ್ಜೆ ಸಪ್ಪುಳಿರಬೇಕು. ಮತ್ತೊಮ್ಮೆ ಗಾಳಿ ಬೀಸಿತು. ಪೊದೆಗಳು ದಟ್ಟವಾಗಿ ಬೆಳೆದಿದ್ದವು. ಆದರೂ ಗಾಳಿ ಬೀಸಿ ಸಪ್ಪಳ ಮಾಡಿತು. ರಾತ್ರಿ ಯಲ್ಲಿ ಎಲ್ಲಾ ಪ್ರಾಣಿಗಳು ಮಲಗಿರಬೇಕು ಅಲ್ಲವೇ ಎಂದುಕೊಂಡೆ. ಹಾಗಾ ದರೆ ನೆಮ್ಮದಿಯಿಂದ ಇರಬಹುದು. ನನ್ನ ಮನೆ ಮುಂದೆ ಬೇಲಿ ಇದೆ. ದೊಡ್ಡ ಬಂಡೆ ಬಾಗಿಲಿದೆ. ಯಾರೂ ಬರೊಲ್ಲ. ಬಂದರೆ ನೆರಳು ನೀಡಿದ ಪ್ರಾಣಿ ಬರ ಬಹುದು ಅಷ್ಟರಲ್ಲಿ ....ಮನಸ್ಸಿಗೆ ಇನೊಂದು ಯೋಚನೆ ಬಂತು. ಆಕಸ್ಮಿ ಕವಾಗಿ ನೆರಳು ನೀಡಿದ ಪ್ರಾಣಿಗೆ ಅವನು ಸ್ನೇಹಿತನಾಗಿದ್ದರೆ? ಈವಿಚಾರ ಸುಳಿದು ಸುಂಟರಗಾಳಿಗೆ ಸಿಕ್ಕಿ ತರಗೆಲೆಯಂತೆ ನಡುಗಿದೆ. ಈ ಎರಡು ಪ್ರಾಣಿ ಗಳು ಸಂಚುಹೂಡಿ ಹಲ್ಲೆ ನಡೆಸಿದರೆ .... ?

ಏನನ್ನೂ ನಿರ್ಧರಿಸಲು ಸಾಧ್ಯವಾಗಲಿಲ್ಲ. ಕಳೆದ ದಿನಗಳಲ್ಲ ನನ್ನ ಬದು ಕಿನ ಹಾದಿಯ ಅವಶೇಷಗಳಂತೆ ಕಂಡವು. ನನ್ನ ಬದುಕೇ ನನಗೆ ಶೃಂಖಲೆ ಯಾಯಿತು.

ಹೆಜ್ಜೆ ಹೆಜ್ಜೆಗೆ ಒಂದು ಕಮರಿ ಬಾಯಿ ತೆರೆದಂತೆ ತೋರಿತು. ನನ್ನ ಹುಟ್ಟೇ ನನಗೆ ನೆಟ್ಟ ಗೋರಿಯಾಯಿತು.

ಮೆಲ್ಲನೆ ಬಾಗಿಲು ತೆರೆದ ಶಬ್ದ. ವಿಕಟ ನಗೆ! ಬೆಚ್ಚಿದೆ. ನಗು ಮತ್ತಷ್ಟು ಜೋರಾಯಿತು. ಹತ್ತಿರ ಹತ್ತಿರ ಬಂತು. ಭಯಂಕರ ಆಕೃತಿ. ವಿಚಿತ್ರ ವೇಷ. ಕ್ರಮೇಣ ಹೆಜ್ಜೆ ಸಪ್ಪಳ ಮತ್ತಷ್ಟು ಒಳಗೆ ಬಂತು. ಯಾರೋ ನನ್ನ ಮೇಲೆ ಬಾಗುತ್ತಿರುವುದರ ಅನುಭವ. ಬಿಸಿಯುಸಿರಿನ ರಭಸದಿಂದ ಕಣ್ಣು ಬಿಟ್ಟು ನೋಡಿದೆ. ಇಬ್ಬರು ಬೇಡರು! ಕಂಪಿಸಿ ಹೋದೆ. ಆ ಕಣ್ಣುಗಳು ಪರಿಚಿತವೇ. ನಾನು ಕತ್ತಲಲ್ಲಿ ಕಂಡ ಕೆಂಪು ಕಣ್ಣುಗಳು. ತೋಳ

ಕಣ್ಣುಗಳು. ನಿಷಾದ ಕಣ್ಣುಗಳು. ಇನ್ನೊಂದು ಜೊತೆ ಕಣ್ಣುಗಳು ಸ್ವಲ್ಪ ದೂರದಲ್ಲಿ ಹೊಳೆಯುತ್ತಿವೆ. ಬೇಟೆಯನ್ನು ಪರಿಚಯಿಸುವಂತೆ ಕಂಡಿತು. ನನ್ನ ಬಳಿಯು ಅವನ ಕಣ್ಣುಗಳು ಮೆಚ್ಚುಗೆ ತೋರುತ್ತಿರುವಂತೆ ಅನಿಸಿತು. ಬೇಟೆ ತಪ್ಪಬಾರದು.

ಬಾಣ ಹೂಡಿ ಸಿದ್ಧಪಡಿಸಿಕೊಂಡ. ನನ್ನ ಹೆಣ್ಣು ಹೃದಯ ಕಂಪಿಸಿತು. ಅಂಗಲಾಚಿದೆ. ಪ್ರಯೋಜನವಾಗಲಿಲ್ಲ. ನನ್ನ ವಾಲ್ಮೀಕಿ ಮನಸ್ಸು ಮಾ ನಿಷಾದ ! ಮಾ ನಿಷಾದ ! ಎಂದು ಗೋಗರೆಯಿತು. ಇದ್ದಕ್ಕಿದ್ದಂತೆ ಮಳೆ ಹನಿಯಿಟ್ಟಿತು. ಚಾವಣಿ ಕುಸಿಯಿತು. ವಿಪರೀತವಾದ ಮಳೆ. ಒಳಗೂ ನೀರು ಬರತೊಡಗಿತು. ಸ್ವಲ್ಪಕಾಲದಲ್ಲೇ ದೊಡ್ಡ ಪ್ರವಾಹವಾಯಿತು. ಆ ಪ್ರವಾಹದಲ್ಲಿ ಕೊಚ್ಚಿಕೊಂಡು ಹೋಗುತ್ತಿದ್ದೇನೆ. ನಿಷಾದನಿಲ್ಲ. ನೆರಳು ಪ್ರಾಣಿಯೂ ಇಲ್ಲ.

ಸಾಯುವ ಹಂಬಲ ಸತ್ತಿತು. ಬದುಕಬೇಕೆಂಬ ಆಸೆ ಚಿಗುರಿತು. ನಿಷಾದನ ಭೀತಿ ಮಾತ್ರ ನನ್ನಲ್ಲಿ ಶಾಶ್ವತವಾಗಿ ಉಳಿಯಿತು. ಮಾ ನಿಷಾದ ! ಮಾ ನಿಷಾದ !....ಅನುರಣನ ಮುಗಿಲು ನೆಲಗಳನ್ನು ತುಂಬಿತು. ಮೋಡಗಳ ಎದೆಯೊಳಗೆ, ಅಲೆಗಳ ಪುಟಗಳೊಳಗೆ ನನ್ನ ಕತೆ ಬರೆದಿದ್ದೇನೆ.

ಕಾಡು ಬಿಟ್ಟು ಕಾಡನ್ನೇ ಹೊಕ್ಕಿದ್ದೇನೆ. ಅಸಹಾಯಕತೆಯಲ್ಲೇ ಅಲೆಯುತ್ತಿದ್ದೇನೆ. ನಿಷಾದನ ನೆನಪು ಹೋಗಿಲ್ಲ. ಪಂಜ ಕಣ್ಣುಗಳ ಆ ವಿಕರಾಳ ಬರುವುದಿಲ್ಲವೆಂಬ ಭರವಸೆಯಿಲ್ಲ.

........

# ನಿರ್ಧಾರ

ಹನಿ ಹನಿಯಾಗಿ ಉದುರಿದ ಮಳೆ ಬರ ಬರುತ್ತಾ, ಆಕಾಶವನ್ನು ಸೀಳಿ ಕೊಂಡು ಆನೆ ಸೊಂಡಿಲ ಗಾತ್ರದ ಧಾರೆಗಳಾಗಿ ಬೀಳತೊಡಗಿತು. ಸೃಷ್ಟಿಯ ಚಟುವಟಿಕೆಗಳೆಲ್ಲ ಒಮ್ಮೆಲೇ ಸ್ಥಗಿತಗೊಂಡಂತಿತ್ತು. ಧಾರಾಕಾರವಾಗಿ ಬೀಳುವ ಮಳೆ ಪ್ರವಾಹದಂತೆ ಉಕ್ಕಿ ಹರಿಯುವ ಮಳೆ ನೀರಿನ ಹೊಳೆ.... ಇವೆರಡೇ ಆ ಕ್ಷಣಕ್ಕೆ.

ಚಿಕ್ಕಂದಿನಿಂದ ಮಳೆಯೆಂದರೆ ಅನುಪಮಳಿಗೆ ಎಲ್ಲಿಲ್ಲದ ಖುಷಿ. ಅಪ್ಪ ಅಮ್ಮನ ಬೆದರಿಕೆಯನ್ನೂ ನಿರ್ಲಕ್ಷಿಸಿ ಜಡಿಯುವ ಮಳೆಗೆ ಮೈ ಒಡ್ಡಿ ಚನ್ನಾಗಿ ತೊಯ್ದು ಬಂದು ಅಪ್ಪ ಅಮ್ಮನಿಂದ ಬೈಸಿಕೊಂಡು, ಒಂದೆರಡು ದಿನ ಜ್ವರ ದಿಂದ ಮಲಗಿದ ಹೊರತು ಅವಳ ಮನಸ್ಸು ಸಮಾಧಾನಗೊಳ್ಳುತ್ತಿರಲಿಲ್ಲ.

ಕೋಣೆಯ ಕಿಟಕಿಯ ಸರಳುಗಳ ಮೇಲೆ ಮುಖವಿಟ್ಟು ಅವುಗಳ ನಡು ವಿನಿಂದ, ಕೆಳಗೆ ರಸ್ತೆಯಲ್ಲಿ ಹರಿಯುವ ಮಳೆ ಮಣ್ಣಿನ ಹೊಳೆಯನ್ನು ತದೇಕ ದೃಷ್ಟಿಯಿಂದ ನೋಡುತ್ತಾ ನಿಂತಿದ್ದಾಳೆ. ಬೆಳಗಿನಿಂದಾದ ಬೇಸರ ಈ ದೃಶ್ಯಾ ವಲೋಕನದಿಂದ ದೂರವಾದೀತೇನೋ ಎಂದೆನಿಸಿತು—ಅವಳ ಮನಸ್ಸಿಗೆ. ಆದರೆ ಶಾಲೆಯಿಂದ ಇನ್ನೂ ಹಿಂದಿರುಗದ ಪ್ರಮದಾಳ ಬಗ್ಗೆ ಯೋಚನೆ ಹತ್ತಿತು. ಈ ವಿಪರೀತ ಮಳೇಲಿ ಹೇಗೆ ತಾನೇ ಬಂದಾಳು ? ಶಾಲೆಗೆ ಹೋಗುವಾಗ ಮಳೆ ಬರುವ ಸೂಚನೆಯೂ ಇರಲಿಲ್ಲ. ಇಲ್ಲವಾದರೆ ರೈನ್‌ಕೋಟನ್ನು ಕೊಟ್ಟು ಕಳಿಸಬಹುದಾಗಿತ್ತು. ಅವಳಿಗೇನು ಹಾಗೆಯೇ ಬಂದಾಳು. ಆದರೆ ನಂತರ ಅನುಭವಿಸುವವಳು ತಾನಲ್ಲವೆ ? ಎಂದು ಆವಳ ತಾಯಿ ಹೃದಯ ಚಟಪಡಿ ಸಿತು. ತಾನು ನೆನೆದು ಬಂದರೆ ಅಪ್ಪ ಅಮ್ಮ ಬೈಯುತ್ತಿದುದ್ದರ ಅರ್ಥ ಈಗ

ಅವಳಿಗೆ ಹೊಳೆದಿತ್ತು. ಮನಸ್ಸು ಮಗಳಿಗಾಗಿ ಕಾತರಿಸಿತು. ಬೇಗ ಜಡಿದು ಕೊಡೆ ಹಿಡಿದು ತಾನೇ ಹೋಗಿ ಕರೆತರಲೇ ಎಂದು ಯೋಚಿಸಿದಳು. ಆದರೆ ಈಗೀಗಲೇ ಒಂದು ತಿಂಗಳ ಜ್ವರದ ಪೀಡೆಯಿಂದ ತಪ್ಪಿಸಿಕೊಂಡು ಚೇತರಿಸಿ ಕೊಳ್ಳುತ್ತಿದ್ದಳು. ಮೈಯಲ್ಲಿನ ದೌರ್ಬಲ್ಯದ ಜೊತೆಗೆ ಮನಸ್ಸಿನ ಒಂಟಿತನದ ಬೇಸರ ಅವಳನ್ನು ಮತ್ತಷ್ಟು ಕುಗ್ಗಿಸಿತ್ತು. ಸರಿ, ಅವಳೇ ಬರುತ್ತಾಳೆ. ಮಳೆ ಯಲ್ಲಿ ಬರಬೇಡವೆಂದು ಸಾಕಷ್ಟು ಸಲ ಎಚ್ಚರಿಸಿದ್ದೀನಿ. ಮಳೆ ನಿಂತಮೇಲೆ ಬರುತ್ತಾಳೆ ಎಂದು ತನಗೆ ತಾನೇ ಸಮಾಧಾನ ತಂದುಕೊಂಡಳು.

ಮತ್ತೆ ರಭಸದಿಂದ ಹರಿಯುವ ನೀರಿನತ್ತ ದೃಷ್ಟಿ ಹರಿಸಿದಳು. ಒಂದೇ ಸಮನೆ ನೆಟ್ಟ ನೋಟದಿಂದಾಗಿ ತಾನೂ ಅದರೊಂದಿಗೆ ಕೊಚ್ಚಿ ಹೋಗುತ್ತಿರು ವಂತೆ ಭಾಸವಾಯಿತು.

ಇದ್ದಕ್ಕಿದ್ದಂತೆ ಮನಸ್ಸಿನಲ್ಲಿ ಸಣ್ಣಗೆ ನೋವು ಕಾಣಿಸಿಕೊಂಡಿತು. ಆ ನೋವೇ ಕರಗಿ ಕಂಬನಿ ಮುತ್ತಾಗಿ ಪಟ ಪಟನೆ ಉದುರಿದವು. ಕಣ್ಣು ಮಂಜಾ ಯಿತು. ಸಲೀಮನ ನಗುವ ಮುಖ ಕಣ್ಮುಂದೆ ನಿಂತಿತು. 'ಸಾರಿ ಡಾರ್ಲಿಂಗ್, ನನ್ನಿಂದ ನಿನಗಾದ ಅನ್ಯಾಯಕ್ಕೆ ಪ್ರತಿಯಿಲ್ಲದಂತಾಗಿದೆ. ಬಂಗಾರದಂತಹ ನಿನ್ನ ಬಾಳನ್ನು ಮಣ್ಣುಗೂಡಿಸಿದ್ದೇ ಅಲ್ಲದೆ ದಿಕ್ಕಿಲ್ಲದ ಪರದೇಶಿಯನ್ನಾಗಿಸಿದೆ. ಕ್ಷಮಿಸು ಅನು ಡಾರ್ಲಿಂಗ್, ಮಾತು ಕಿವಿಯಲ್ಲಿ ಪ್ರತಿಧ್ವನಿಸಿತು. ಮೌನ ಆಳು ಮಳೆಯಷ್ಟೇ ಅಬ್ಬರಿಸಿತು. ಬಿಕ್ಕುವ ದನಿ ಅಬ್ಬರದಲಿ ಕಿವುಡಾಯಿತು.

'ಸಲೀಂ, ಸಲೀಂ–ನನ್ನನ್ನೇಕೆ ಇನ್ನೂ ಬದುಕಿಸಿದ್ದೀ ? ನೀನಿದ್ದಲ್ಲಿ ನಾನಿ ರಬೇಕೆಂದಲ್ಲವೇ ನೀನು ಬಯಸಿದ್ದು. ನನ್ನನ್ನು ಮಾತ್ರ ಈ ಪ್ರಪಂಚದಲ್ಲಿ ಎಸೆದು ನೀನು ನೆಮ್ಮದಿಯಾಗಿರುವುದು ನಿನಗೆ ನ್ಯಾಯವೇ ? ನಮ್ಮಿಬ್ಬರದ್ದು ಅಮರ ಪ್ರೇಮ, ಲೈಲಾ ಮಜ್ನೂರಂತಹುದು. ಯಾರಿಂದಲೂ ನಮ್ಮನ್ನಗಲಿ ಸಲು ಸಾಧ್ಯವಿಲ್ಲ-ಎಂದು ಹೇಳರಲಿಲ್ಲವೇ. ಈಗೇನಾಯಿತು. ಭಯಂಕರ ಒಂಟಿ ತನದ ಪ್ರಪಾತದಲ್ಲಿ ನನ್ನನ್ನು ದೂಡಿಲ್ಲವೇ ?' ತನ್ನಲ್ಲಿ ಮಾತನಾಡಿಕೊಂಡಳು

ಮರುಗಳಿಗೆಯೇ ತಾನೇಕೆ ಸಾಯಬಾರದು ? ಹೇಗಿದ್ದರೂ ಈಗ ಮನಿ

ಯಲ್ಲಿ ತಡೆಯುವವರು ಯಾರೂ ಇಲ್ಲ. ಇದ್ದರೂ ಯಾರಿಗೂ ನಾನು ಬೇಕಿಲ್ಲ-ಎಂದು ವ್ಯಂಗ್ಯವಾಗಿ ನಕ್ಕಳು. ಮಳೆ ಬರುತ್ತಲೇ ಇತ್ತು.

ಸರಸರನೆ ಒಳಗೆ ನಡೆದು ಒಂದು ಸೀರೆ ತಂದು ಮುದುರಿ ಸುರುಳಿ ಸುತ್ತಿ ಕುಣಿಕೆ ಹಾಕಿ, ಮೇಲೆ ಎಲ್ಲಿ ಕಟ್ಟುವುದೆಂದು ಸುತ್ತಲೂ ಪರಿವೀಕ್ಷಿಸಿದಳು. ಥಟ್ಟನೆ ಗೋಡೆಯ ಮೇಲಿನ ಪ್ರಮದಾಳ ಫೋಟೋ ಕಣ್ಣಿಗೆ ಬಿತ್ತು. 'ಅಮ್ಮ' ನಾನು....ನಾನು....ನಾನು ಬೇಡವೇ ?....ಎಂದು ಅಂಗಲಾಚಿದಂತೆ ಎನಿಸಿತು. ಕೈಲಿ ಹಿಡಿದ ಸೀರೆಯ ಕುಣಿಕೆಯನ್ನು ಎಸೆದು ಮಂಚದ ಮೇಲೆ ದೊಪ್ಪನೆ ಬಿದ್ದು ಹೊರಳಾಡಿದಳು.

ಪ್ರಮದಾ ಸಲೀಮನ ನೆನಪು. ಅದು ಅವನ ವಸ್ತು. ಅದನ್ನು ಜೋಪಾನವಾಗಿ ಕಾಪಾಡಿದರೆ ಮಾತ್ರ ಸಲೀಮನಿಗೆ ಸಂತೋಷವಾದೀತು. ತಾನು ಸತ್ತು ಪ್ರಮದಾ ಬೀದಿ ಪಾಲಾದರೆ ? ....ಇಲ್ಲ....ಇಲ್ಲ....ಖಂಡಿತ ಬದುಕುತ್ತೇನೆ. ನನ್ನನ್ನು ನಿಕೃಷ್ಟವಾಗಿ ಕಂಡ ಮಡಿವಂತ ಸಮಾಜಕ್ಕೆ, ನಾನು ಸತ್ತೆನೆಂದು ಸುಳ್ಳು ಸುಳ್ಳು ಪ್ರಚಾರ ಮಾಡಿದ ಅಪ್ಪ ಅಮ್ಮನಿಗೆ ತೋರಿಸುತ್ತೇನೆ....ಯಾರೂ ಇಲ್ಲದೆಯೂ ನಾನು ಬದುಕಬಲ್ಲೆನೆಂದು.

ಅದು ಕಾಲೇಜು ಓದುವ ದಿನಗಳು. ಅಪ್ಪ ಅಮ್ಮನಿಗೆ 'ಅನುಪಮ' ಎಂದರೆ ಉಳಿದ ಮಕ್ಕಳಿಗಿಂತ ಪ್ರೀತಿ. ಅನುಪಮಳ ಅಕ್ಕ ರಜನಿ ಎಸ್. ಎಸ್. ಎಲ್. ಸಿಗೆ ನಿಲ್ಲಿಸಿದ್ದಳು ಓದನ್ನು. ಅಣ್ಣ ರಾಜೇಂದ್ರ ಇಂಜಿನಿಯರಿಂಗ್ ಮುಗಿಸಿ ರೂರ್‌ಕೆಲಾದಲ್ಲಿ ಕೆಲಸದಲ್ಲಿದ್ದ. ಅನುಪಮಾಳನ್ನು ಎಸ್. ಎಸ್. ಎಲ್. ಸಿ. ಆದ ಕೂಡಲೇ ನಿಲ್ಲಿಸಬೇಕೆಂದು ಯೋಚಿಸಿದರು. ಅವರೆ ಹಟ ಹಿಡಿದು ಕಾಲೇಜು ಮೆಟಲು ಹತ್ತಿದಳು. ಅನುಪಮಾಳದು ತೀರಾ ಆಂತರ್ಮುಖಿ ವ್ಯಕ್ತಿತ್ವ. ಅಷ್ಟಾಗಿ ಮೈಚಳಿ ಬಿಟ್ಟು ತನ್ನ ಜೊತೆಯವರೊಂದಿಗೆ ಬೆರೆಯುತ್ತಿರಲಿಲ್ಲ. ತಾನಾಯ್ತು ತನ್ನ ಕ್ಲಾಸಾಯ್ತು. ಇಲ್ಲವಾದರೆ ಯಾವುದೋ ಒಂದು ಮರದಡಿಯಲ್ಲಿ ಕುಳಿತು ಪುಸ್ತಕಕ್ಕೆ ಅಂಟಬಿಡುತಿದ್ದಳು ಹುಡುಗರು ಬೇಕಂತಲೇ ವನದೇವತೆ, ಮಹಾ ಶ್ವೇತೆ-ತಪೋನಿರತೆ ಎಂದೆಲ್ಲಾ

ಚುಡಾಯಿಸುತ್ತಿದ್ದರು. ಆದರೆ ಅನುಪಮಾಳ ತಣ್ಣನೆಯ ನೋಟ ಅವಳ ಉತ್ಸಾಹದ ಕಾವಾರಿಸುತ್ತಿತ್ತು.

ಒಮ್ಮೆ ಯಾರೋ ಒಬ್ಬ ಹುಡುಗ ಕೀಟಲೆಗೆ 'ಇದೆಲ್ಲಾ ಪೋಸಮ್ಮ. ಯಾರೋ ಲವರ್‌ಗೆ ಹೀಗೆ ಕಾಯ್ತಿರ್‍ತಾಳೆ–ಎಂದಿದ್ದ. ಅನುಪಮಾಳಿಗೆ ಈ ಮಾತು ಮುಳ್ಳಿನಂತೆ ಇರಿದು ಕಂಬನಿ ಬರಿಸಿತು. ಅವರ ಗುಂಪಿನಲ್ಲಿದ್ದ ಸಲೀಮನಿಗೆ ಏನೆನ್ನಿಸಿತೋ, ತನ್ನ ಗೆಳೆಯರಿಗೆಲ್ಲಾ ಬೈದ. ಅವನ ಮನಸ್ಸಿಗೆ ಆಕೆಯ ಕಣ್ಣಲ್ಲಿ ನೀರೂರುವುದನ್ನು ನೋಡಿ ತೀರಾ ಕೆಡುಕೆನಿಸಿತು. ತಾನೇ ತಪ್ಪು ಮಾಡಿದಂತೆ ವ್ಯಥೆಪಟ್ಟ. ಹೋಗಿ ಕ್ಷಮೆ ಕೇಳಲೇ- ಎಂದು ಆಲೋಚಿಸಿದ. ಆದರೆ ಗೆಳೆಯರೆದುರಿಗೆ ಹಾಗೆ ಮಾಡಿದರೆ ಅವರ ದೃಷ್ಟಿಯಲ್ಲಿ ಹಾಸ್ಯಾಸ್ಪದ ವ್ಯಕ್ತಿಯಾಗುತ್ತೇನೆಂದು ಸುಮ್ಮನಿದ್ದ. ಗೆಳೆಯರೆಲ್ಲಾ ನಗುತ್ತಾ ಹೊರಟು ಹೋದರು.

ಒಮ್ಮೆ ಕಾಲೇಜಿನಿಂದ 'ಕೃಷ್ಣರಾಜಸಾಗರಕ್ಕೆ' ಪಿಕ್‌ನಿಕ್ ಹೊರಟರು. ಬಸ್ಸಲ್ಲಿ ಕುಳಿತ ಹುಡುಗರ ಸಂತೋಷ, ಸಂಭ್ರಮಗಳಿಗೆ ಕೊನೆಯೇ ಇಲ್ಲ. ಗಂಟಲು ಹರಿಯುವಂತೆ ಕಿರುಚಿಕೊಂಡರು. ಕದಲುವ ಬಸ್ಸಿನಲ್ಲೇ ರಾಕ್-ಅನ್-ರೋಲ್ ಡ್ಯಾನ್ಸ್ ಮಾಡಿದರು. ಎಲೆಯಾಟ ಸ್ವಲ್ಪ ಹೊತ್ತು ಆಡಿದರು ಹಾಡಿ, ಕುಣಿದು ಸುಸ್ತಾದ ನಂತರ ತಿಂಡಿ ಪೊಟ್ಟಣಗಳನ್ನು-ಬಿಚ್ಚಿ ಬಕಾಸುರರಂತೆ ಕಿತ್ತಾಡಿಕೊಂಡು ತಿಂದರು. ಸಲೀಂ ಮಾತ್ರ ಇದ್ಯಾವುದರ ಕಡೆಗೆ ಲಕ್ಷ್ಯವಿಲ್ಲದೆ ಕಿಟಕಿಯಿಂದ ಹೊರಗೆ ನೋಡುತ್ತಿದ್ದ.

'ಲೋ ಸಲೀಮ, ಏನೋ ಅದು ನಿನ್ನ ಜಂಬ. ನಾವೆಲ್ಲ ಫ್ರೆಂಡ್ಲಿಯಾಗಿ ಜಾಲಿಯಾಗಿ ಸೇರಿ ಆಡ್ತಿದ್ದರೆ ನೀನೇನೋ ಮಹಾ ಕನಸು ಕಾಣ್ತಿರೋ ಹಾಗೆ ನೋಡ್ತಿದ್ದೀಯಲ್ಲ. ಸೋಷಿಯಲ್ ಆಗಿ ಇರೋದು ಇಷ್ಟವಿಲ್ಲದಿದ್ದರೆ ನೀನ್ಯಾಕೋ ಪಿಕ್‌ನಿಕ್‌ಗೆ ಬಂದೆ?'– ದೂರುವಂತೆ ಬದರಿನಾಥ ನುಡಿದ.

'ಲೋ ಅವನ್ಯಾಕೆ ಸತಾಯಿಸ್ತಿ' ಮಸಾಲೆಹಾಕಿದ ಮಧುಸೂದನ, ಸಲೀಂ

ಮಾತ್ರ ಸುಮ್ಮನೆ ಅವರ ಕಡೆ ನೋಡಿ ನಕ್ಕು, 'ನಿಮಗಿಷ್ಟ ಬಂದ ಹಾಗೆ ಅಂದ್ಕೊಳ್ರೋ'-ಎಂದು ಮತ್ತೆ ಮುಖ ತಿರುಗಿಸಿದ.

ಸಲೀಮನ ವಿಚಾರ ಬರುತ್ತಲೇ ಅನುಪಮಳ ಕಿವಿ ನಿಮಿರಿತು. ಇಡೀ ಕ್ಲಾಸಿನಲ್ಲೇ ಅವನು ನೋಡೋದಕ್ಕೆ ಚೆನ್ನಾಗಿದ್ದ. ಬುದ್ಧಿವಂತನಾಗಿದ್ದ. ಅಲ್ದೆ ಗಂಭೀರ ಸ್ವಭಾವದವನಾಗಿದ್ದ. ಮಾತು ಬರುತ್ತದೆಯೋ ಎನ್ನುವ ಶಂಕೆ ಉಂಟಾಗುತ್ತಿದ್ದವರಿಗೆ, ಅವನು ಪಾಠಕ್ಕೆ ನಿಂತಾಗ ಮೂಗಿನ ಮೇಲೆ ಬೆರಳಿಟ್ಟುಕೊಳ್ಳುತ್ತಿದ್ದರು. ಪಟ ಪಟ ಮಾತಿನ ಮಧ್ಯೆ ಪದ್ಯದ ಸಾಲುಗಳು ಸುರಿಯುತ್ತಿದ್ದವು.

ಅನುಪಮಳ ಪಕ್ಕದಲ್ಲಿ ಕುಳಿತಿದ್ದ ನೀರಜ ಅನುಪಮಳಿಗೆ ತಿವಿದು ಹೇಳಿದಳು. ಲೇ ಅವನಿಗೆ ಉಮರನ ಪದ್ಯಗಳನ್ನು ಹೇಳಲು ಹೇಳೇ, ತುಂಬಾ ಚೆನ್ನಾಗಿ ಹೇಳ್ತಾನೆ-ಎಂದಳು.

'ನಿನಗೆ ಹೇಗೆ ಗೊತ್ತು ಅದೆಲ್ಲ ?'—ಕಣ್ಣರಳಿಸಿ ಕುತೂಹಲದಿಂದ ಕೇಳಿದಳು ಅನುಪಮಾ. 'ನನ್ನ ಫ್ರೆಂಡ್‌ಗೆ ಅವನು ತುಂಬಾ ಫ್ರೆಂಡ್' ಇಬ್ಬರೂ ರೂಮ್‌ಮೇಟ್ಸ್. ನಾನು ಅವರ ರೂಮಿಗೆ ಒಮ್ಮೆ ಹೋಗಿದ್ದಾಗ ಸಲೀಂ ಉಮರನ ಪದ್ಯಗಳನ್ನು ಎಷ್ಟು ಭಾವಪೂರ್ಣವಾಗಿ ಹಾಡುತ್ತಿದ್ದ ಗೊತ್ತಾ ?'

'ಹಾಗಾದರೆ ನೀನೇ ನಿನ್ನ ಫ್ರೆಂಡ್‌ಗೆ ಹೇಳುವುದಕ್ಕೆ ಹೇಳೆ' ಎಂದು ಕಣ್ಣರಳಿಸಿ ಕೇಳಿದಳು. 'ಉಹುಂ' ನಾ ಹೇಳೊಲ್ಲ. ನನಗೆ ನಾಚಿಕೆಯಾಗುತ್ತೆ' ಎಂದಳು ನೀರಜ.

'ಹಾಗಾದರೆ ಒಂದು ಕೆಲಸ ಮಾಡೋಣ. ಒಂದು ಚೀಟಿ ಬರೆದು ಮೇಷ್ಟ್ರ ಕೈಗೆ ಕೊಡೋಣ, ಎಂದು ಸೂಚಿಸಿದಳು ಅನುಪಮಾ. ನೀರಜಳಿಗೂ ಅದೇ ಸರಿಯೆಂದು ತೋರಿತು. ಹಾಗೇ ಒಂದು ಚೀಟಿಯಲ್ಲಿ ತಮ್ಮ ಕೋರಿಕೆಯನ್ನು ಬರೆದು ಮೇಷ್ಟ್ರ ಕೈಲಿ ಕೊಟ್ಟರು.

'ಶಂಕರ ಪ್ರಸಾದ'ರು ಅದನ್ನು ಓದಿ ಮುಗುಳ್ನಕ್ಕು ಸಲೀಮನ ಕಡೆ

ತಿರುಗಿ, 'ಸಲೀಂ ಹುಡುಗಿಯರ ಕಡೆಯಿಂದ ಒಂದು ಸಣ್ಣ ಕೋರಿಕೆಯಿದೆ ....ನೀನು ಉಮರನ ಪದ್ಯಗಳನ್ನು ಹಾಡಬೇಕಂತೆ__ನೋಡು ಅವರ ಕೋರಿಕೆಯನ್ನು ತಳ್ಳಿಹಾಕಬೇಡ. ಅವರದರ ಜೊತೆಗೆ ನನ್ನದೂ ಇದೆ__ಹಾಡುತ್ತೀ ತಾನೇ ?'__ಎಂದು ಕೇಳಿದರು.

ಪ್ರಯಾಣದ ಉದ್ದಕ್ಕೂ ಆಚೆನೆಟ್ಟ ಕಣ್ಣುಗಳು ಇತ್ತ ತಿರುಗಿದ್ದವು. ಹುಡುಗಿಯರ ಕೋರಿಕೆ ಎಂದಾಗ ಅವನು ನಾಚಿ ನೀರಾದ__ತಕ್ಷಣ ಅವನಿಗೆ ಏನು ಹೇಳಬೇಕೋ ತೋಚಲಿಲ್ಲ. ಕೋರಿದ ಹುಡುಗಿಯರಲ್ಲಿ ಅನುಪಮಳೂ ಸೇರಿರಬಹುದೇ ?—ಎಂಬ ಅಲೋಚನೆ ಬಂದ ಕೂಡಲೇ 'ಸಾರ್ ಹಾಡುವುದಕ್ಕೆ ನನಗೆ ಅಷ್ಟು ಚೆನ್ನಾಗಿ ಬರುವುದಿಲ್ಲ'—ಎಂದ.

'ಪರವಾಗಿಲ್ಲ. ಆಫ್ಟರಾಲ್ ನಾವೆಲ್ಲಾ ಒಂದೇ ಮನೆಯವರಿದ್ದ ಹಾಗೆ. ಯಾರನ್ನೂ ಮೆಚ್ಚಿಸಬೇಕಾದ್ದಿಲ್ಲ. ಹೊರಗಿನವರು ಯಾರೂ ಇಲ್ಲ. ನಿನಗೆ ಬಂದ ಹಾಗೆ ಹೇಳು'—ಎಂದರು.

'ಹೇಳು ಸಲೀಂ ಅಷ್ಟು ಕೇಳ್ತಿರೋವಾಗ!' ಎಂದು ದನಿಗೂಡಿಸಿದರು ಪರಮಶಿವಯ್ಯ. ಸಲೀಮ್ ಒಂದು ಕ್ಷಣ ಬಿಟ್ಟು ಗಂಟಲು ಸರಿಮಾಡಿಕೊಂಡು

'ಏಳೆನ್ನ ಮನದನ್ನೆ ! ನೋಡು ಪೊಳ್ತರೆ ಬಂದು
ನಿಶಿಯ ಬೋಗುಣಿಯೊಳಕೆ ಹೊಂಬುಗುರಿ ಎಸೆದು
ತಾರೆಯರಳುಗಳನಲ್ಲಿರಿದೆ ಚೆಲ್ಲಾಡಿಹನು;
ನಿದ್ದೆ ಸಾಕಿನ್ನೀಗ, ಮುದ್ದಣುಗಿ ಬಾರ'—ಎಂದು ಅನುಪಲ್ಲವಿ,

ಪಲ್ಲವಿಯಲ್ಲಿ ಹಾಡಿದ. ಗಲಾಟೆ ಮಾಡುವ ಗೋಲಾಂಗೂಲಗಳೆಲ್ಲ ಸುಮ್ಮನಾಗಿದ್ದವು. ಹುಡುಗಿಯರ ಎದೆ ಕುಟ್ಟತೊಡಗಿದವು. ಅನುಪಮಳ ಕಣ್ಣಲ್ಲಿ ಆನಂದದ ಬೆಳಕು ಮೂಡಿತು. 'ಏಳೆನ್ನ ಮನದನ್ನೆ'—ಎಂದು ತಾರಸ್ಥಾಯಿಯಲ್ಲಿ ಹಾಡುತ್ತಿದ್ದಾಗ ಸಲೀಮು ಅನುಪಮಳ ಮೇಲೆ ದೃಷ್ಟಿ ನೆಟ್ಟಿದ್ದ. ಅಂದು ಎಂದಿಗಿಂತ ಇಂಪಾಗಿರಲು ಅನುಪಮಳೆ ಸ್ಫೂರ್ತಿಯಾಗಿದ್ದಳು.

ಅವಳಿಗಾದ ಆನಂದ ಮರೆಯಾಗಿರಲು ಸಾಧ್ಯವಾಗಲಿಲ್ಲ ಸಲೀಮನಿಗೆ ನೆಮ್ಮದಿಯಾಯಿತು. ಆ ದಿನ ಅವಳಿಗಾದ ನೋವು ಇದರಿಂದ ವಾಸಿಯಾಯಿತೆಂದುಕೊಂಡ.

ಅನುಪಮಾಳಿಗೆ ಆ ಕ್ಷಣ ಅನಿಸಿದ್ದು ಅವನು ನಮ್ಮ ಜಾತಿಯುವನಾಗಿರಬಾರದಿತ್ತೇ ? —ಎಂದು. ಆದರೆ ಅವಳ ಹೃದಯ ಅವಳಿಗರಿವಿಲ್ಲದೇ ಸೋಲುತ್ತಿತ್ತು.

'ಪಿಕ್‌ನಿಕ್'ನಿಂದ ಮನೆಗೆ ಮರಳಿದಾಗ ತಲೆ ತುಂಬ ಸಲೀಮನ ವಿಚಾರಗಳು ! ಕಣ್ತುಂಬ ಅವನ ಕನಸುಗಳು !!

o o o o

ಯಾಂತ್ರಿಕವಾದ ಕಾಲೇಜು ಜೀವನ ಕೊನೆಯ ಘಟ್ಟವನ್ನು ಮುಟ್ಟಿತ್ತು. ಫಲಿತಾಂಶ ಹೊರಬಿದ್ದು ಮಾಮೂಲಿನಂತೆ ಸಲೀಮ ಫಸ್ಟ್‌ಕ್ಲಾಸಿನಲ್ಲಿ ಪಾಸಾಗಿದ್ದ, ಅನುಪಮಾಳಿಗೂ ಫಸ್ಟ್‌ಕ್ಲಾಸ್ ಬಂದಿತ್ತು.

ಗೆಳೆಯರೆಲ್ಲ ಅವರವರ ಭವಿಷ್ಯವನ್ನು ಹುಡುಕುತ್ತಾ ಚದುರಿಹೋದರು. ಸಲೀಮ್ ಅನುಪಮಾರ ಅನುಬಂಧ ಕಳಚಿಕೊಳ್ಳಲಾಗದಷ್ಟು ಬಿಗಿಯಿತ್ತು.

ಎಲ್ಲರಿಗಿಂತ ಬೇರೆಯಾಗಿ ಈ ಇಬ್ಬರೂ ಮೌನಪ್ರೇಮಿಗಳಾಗಿದ್ದರು. ಪತ್ರ ವ್ಯವಹಾರದ ಹೊರತಾಗಿ ಎಂದೂ ಜೊತೆಯಾಗಿ ಅಲೆದಾಡಲಿಲ್ಲ.

ಸಲೀಮ ಅನಾಥ, ನನ್ನವರು, ತನ್ನವರು-ಎನ್ನುವವರು ಯಾರೂ ಇಲ್ಲ, ದೂರದ ಸಂಬಂಧಿಯೊಬ್ಬರು, ಅವನ ತಂದೆಯಿಂದ ಯಾವುದೋ ಸಂದರ್ಭದಲ್ಲಿ ಉಪಕೃತರಾಗಿದ್ದ ಕಾರಣ, ಸಲೀಮನ ಓದಿಗೆ ಸಹಾಯ ಮಾಡಿ ಋಣ ಖರಿಸಿಕೊಳ್ಳುವುದಾಗಿ ಹೇಳಿದ್ದರು. ಅವರ ಆದೇಶದ ಮೇರೆಗೆ ಇಲ್ಲಿಗೆ ಬಂದು ಹಾಸ್ಟೆಲಲಿದ್ದು ಓದುತ್ತಿದ್ದ.

ಜೀವನದ ಬಗ್ಗೆ ನಿರ್ಲಿಪ್ತನಾಗಿದ್ದ. ಯಾವುದಕ್ಕೂ ಹೆಚ್ಚಿನ ಆಸಕ್ತಿ ತೋರುತ್ತಿರಲಿಲ್ಲ. ಹಿಂದು ಮುಂದುಗಳಿಗಿಂತ ಇಂದಷ್ಟೇ ಅವನು ಯೋಚಿಸುತ್ತಿದ್ದದ್ದು. 'ನಾಳೆ ಬೆಳಗಾಗ ನಾವಿರುವ ಭರವಸೆಯಿಲ್ಲ;...ಬಾ ಕುಡಿವಮ್ ಇಂದು ರುಚಿಯುಲಿ ಮಧುವ... ನಾಳೆ ಬರುವಿಂದು ಪೇಂ ನಮ್ಮ ಕಾಣುವನೇ ?, ...ಎನ್ನುವ ಉಮರನ ತತ್ವದಂತೆ ಅವನೆದುರಿಗಿರುವ ವರ್ತಮಾನವಷ್ಟೇ ಸತ್ಯ.

ಉಮರನ ಆರಾಧಕ, ಕನಸುಗಾರಿಕೆಯುಳ್ಳ ಮೈ ಮರೆಯುವ ಅವನಿಗೊಬ್ಬ ಪ್ರೇಯಸಿಯ ಪ್ರತ್ಯಕ್ಷ ಪ್ರೇಮದ ಅನುಭವ ಬೇಕಿತ್ತು. ಆ ಪ್ರೇಯಸಿಯನ್ನು ಅನುಪಮಳಲ್ಲಿ ಕಂಡ. ಎಷ್ಟೋ ಸಲ ಅವಳ ಕಣ್ಣುಗಳನ್ನು ಮದಿರೆಯ ಬಟ್ಟಲೆಂದು; ಅವಳ ಆ ಮಾದಕ ನೋಟವನ್ನೇ ಮಧುವೆಂದು ವಿವರಿಸಿದ್ದ.

'ಹೂವಿದ್ದಲ್ಲಿ ವಾಸನೆ; ಚಂದ್ರನಿದ್ದಲ್ಲಿ ಬೆಳ್ದಿಂಗಳು; ನೀನಿದ್ದಲ್ಲಿ ನಾನು'_ ಹೀಗೆ ಏನೇನೋ ಬರೆಯುತ್ತಿದ್ದ.

ಅವನಿಗೆ ತನ್ನ ಧರ್ಮಕ್ಕಿಂತ ಹಿಂದೂ ಧರ್ಮದಲ್ಲಿ ಆಸಕ್ತಿ. ದೇವರ ನಿರಾಕಾರ ಅಸ್ತಿತ್ವಕ್ಕಿಂತ ಸಾಕಾರ ಅಸ್ತಿತ್ವವೇ ಮನುಷ್ಯನ ಮನಸ್ಸಿನ ಏಕಾಗ್ರತೆಯನ್ನು ರೂಢಿಸುವಲ್ಲಿ ಸಾರ್ಥಕ.

'ಅನು, ನಾನು ಮುಸ್ಲಿಮನೆನ್ನುವ ಒಂದು ಕಾರಣ ಬಿಟ್ಟು ನಿನ್ನ ಪ್ರೀತಿಯನ್ನು ಗಳಿಸಿಕೊಳ್ಳಲು ಅಭ್ಯಂತರವಿಲ್ಲವೆಂದು ಭಾವಿಸುತ್ತೇನೆ. ನಿನ್ನ ತಿರಸ್ಕಾರವೇ ನನ್ನ ಬದುಕಿನ ಹಂಸಗೀತೆಯಾಗುತ್ತದೆ–ಎಂದೂ ತಿಳಿಸಿದ್ದ.

ಅನುಪಮಾಳ ದೇಹದ ಕಣ ಕಣವೂ ಸಲೀಮನ ಹೆಸರನ್ನು ಪಿಸುಗುಟ್ಟುತ್ತಿತ್ತು. ಅವಳಿಗೂ ಅವನ ಪ್ರೀತಿ ಇಲ್ಲದೆ ಬಾಳು ಶೂನ್ಯವೆಂದೆನಿಸಿತ್ತು. ಈ ಉಮರನೊಂದಿಗೆ ಬದುಕು ಸ್ವರ್ಗ ಸಮವೇ– ಎಂದು ನಿರ್ಧರಿಸಿದ್ದಳು. ಆದರೆ ಅಪ್ಪ ಅಮ್ಮ ಅಣ್ಣ ಅಕ್ಕ-ಇವರ ಭೀತಿ ಅವಳಲ್ಲಿ ನೂರು ಭೂಕಂಪಗಳನ್ನು ಉಂಟು ಮಾಡಿತು. ಈಗೆಲ್ಲಾ ಮುಗಿದಿದೆ. ಮತ್ತೆ ಅವನನ್ನು ಕಾಣುವ

ಅವಕಾಶ ಸಿಗುವುದಿಲ್ಲ. ತಾನು ಅಪ್ಪ, ಅಮ್ಮ, ಅಣ್ಣ, ಅಕ್ಕ, ಸಲೀಮ ಇವರಲ್ಲಿ ಯಾರನ್ನು ಆರಿಸಿಕೊಳ್ಳುವುದು ? ಸಲೀಮ ತನಗೆ ಬೇಕೆಂದೇ ಎಣಿಸಿದರೆ ಅಷ್ಟೂ ಮಂದಿಯನ್ನು ಬಿಡುವುದಕ್ಕೆ ಸಿದ್ಧವಾಗಿರಬೇಕು. ಆ ಸಿದ್ಧತೆಯನ್ನು ರೂಢಿಸಿಕೊಳ್ಳಬಹುದಾದರೂ ಅಪ್ಪ, ಅಮ್ಮನ ಸಿಟ್ಟನ್ನು ಎದುರಿಸುವಷ್ಟು ಎದೆಗಾರಿಕೆಯಿದೆಯೇ ? ತಮ್ಮ ಜಾತಿಯವನಾಗಿದ್ದರೆ ಹೇಗೋ ಪರಿಸ್ಥಿತಿಯನ್ನು ಕುದುರಿಸಬಹುದಿತ್ತು. ಆದರೆ ಜಾತಿ ತನ್ನದಲ್ಲ ! ಗೋಮಾಂಸವನ್ನು ತಿನ್ನುವ ತುರುಕ ಮುಂಡೇ ಮಕ್ಕಳೆಂದು ಬೈಯ್ಯುತ್ತಿದ್ದ ಅಪ್ಪನ ರೋಷದ ಜ್ವಾಲಾಮುಖಿಯ ಸಿಡಿತವನ್ನು ಎದುರಿಸುವುದೆಂದರೆ ಮತ್ತೆ ಹುಟ್ಟಿ ಬಂದಂತೆ.

ಸಲೀಮ ತನ್ನಲ್ಲಿ ಚೈತನ್ಯ ತುಂಬಿದ್ದ. ಪ್ರೀತಿ ಪ್ರೇಮದ ಗುರುವಾಗಿದ್ದ. ಇಂದಿನ ಬದುಕಿನಲ್ಲಿ ಆಸಕ್ತಿ ಕೆರಳಿಸಿದ್ದ. ನೂರು ಸ್ವರ್ಗಗಳ ಭರವಸೆ ತುಂಬಿದ್ದ 'ಬಾ ತುಂಬು ಬಟ್ಟಲನ್ನು; ಮಧುಮಾಸದಗ್ನಿಯಲಿ ಚಿಂತೆ ಬೆಸನೆಂಬ ಚಳಿ ಬೊಂತೆಯನು ಬಿಸುಡು' ಎಂದು ಅವನು ಹೇಳಿದ ಉಮರನ ಮಾತಿನ ಸತ್ಯದಲ್ಲಿ ನಂಬಿಕೆಯಿಟ್ಟು ನಡೆಯಬೇಕೆಂದುಕೊಂಡ. ಸಲೀಮ ಕವಿ; ನಾನು ಸ್ಫೂರ್ತಿ-ಸಂಯೋಗದಿಂದ ರಸಕಾವ್ಯ...ಅವನು ಹೇಳಿದ ಈ ಮಾತುಗಳು ನೆನಪಿಗೆ ಬಂದರೆ ಭೀತಿಯೂ ಒತ್ತರಿಸಿ ನಡೆದು, ರೋಮಾಂಚದ ಬುದ್ಬುದಗಳೇಳುತ್ತಿದ್ದವು.

ಅವನೊಂದಿಗೆ ಮಾತಾಡಿ ಯಾವುದನ್ನೂ ನಿರ್ಧರಿಸಬೇಕು. ಅಪ್ಪನಿಗೆ ಸುಳಿವು ಹತ್ತಬಾರದು. ಹತ್ತಿದರೆ ಹಗರಣವಾದೀತು- ಎಂದುಕೊಂಡು ಸಲೀಮನಿಗೆ ಪತ್ರ ಬರೆದಳು :—

'ನನ್ನ ಸ್ವರ್ಗದೇವರೆ,

ಸಿಹಿ ಕನಸುಗಳನ್ನು ಬಿತ್ತಿ, ನೈಜ ಬದುಕಿನ ನೋವುಗಳನ್ನು ಮರೆಸಿದ ಧನ್ವಂತರಿಯ ಮುಂದೆ ಮತ್ತೊಂದು ಸಮಸ್ಯೆ. ಬದುಕಿನ ಪ್ರಾರಂಭದ ಘಟ್ಟದಲ್ಲಿ ಮಾತ್ರ ನಾವಿಬ್ಬರೂ ನಿಂತಿದ್ದೇವೆ. ದಾರಿ ಸವೆಸಬೇಕಾದ್ದು ಇನ್ನೂ

ಸಾಕಷ್ಟಿದೆ. ನೀವೆಷ್ಟೋಸಲ ನನ್ನ ಪ್ರೀತಿಯ ವಿಷಯದಲ್ಲಿ ಶಂಕೆ ತಳೆದು ದನ್ನು ಸೂಕ್ಷ್ಮವಾಗಿ ತಿಳಿಸಿದ್ದೀರಿ. ನಿಜ ಹೃದಯದ ಭಾವನೆಗೆ ಪ್ರೀತಿ, ವಾತ್ಸಲ್ಯಗಳಿಗೆ ಜಾತಿಯ ಹಣೆ ಪಟ್ಟಿ ಇಲ್ಲವಾದರೂ ಕಣ್ಣಿಗೆ ಕಾಣದ ತರ್ಕಕ್ಕೆ ಮೀರಿದ 'ಜಾತಿ'ಯ ಚೀಟಿಗಳನ್ನು ಮನುಷ್ಯನಿಗೆ ಅಂಟಿಸಿದ್ದಾರೆ. ಆದರೆ ನೀವೇ ಒಮ್ಮೆ ದೇವರಿಗೆ 'ಜಾತಿ-ಕುಲಗಳ' ಅಂಟಿಲ್ಲವೆಂದು ಹೇಳಿದ್ದೀರಿ. ನಾನು ನಿಮ್ಮನ್ನು ದೇವರೆಂದು ಭಾವಿಸಿರುವಾಗ ನಿಮಗೆ ಜಾತಿಯಿಲ್ಲ. ಜೊತೆಗೆ ನಮ್ಮಿಬ್ಬರ ಪ್ರೀತಿಗೆ ಲೋಕ ರೀತಿಯಿಲ್ಲ. ಆದರೂ ನನಗೇನೊಂದೂ ದಾರಿ ಕಾಣುತ್ತಿಲ್ಲ. ಕತ್ತಲ ಗವಿಯಲ್ಲಿ ತಡವರಿಸುತ್ತಾ ನಡೆದಿದ್ದೇನೆ. ನೀವು ಬೆಳ ಕಾಗಿ ಬೆರಳು ತೋರಿದರೆ ಭವಿಷ್ಯವನ್ನು ಕಂಡುಕೊಂಡೇನು.

ನಕ್ಷತ್ರ ಸಂಖ್ಯೆಯ ಕಣ್ಣುಗಳಿಂದ ಕಾಣುವ ಕಾತರತೆಯಲ್ಲಿ
ನೀವಂದಂತೆ ನಿಮ್ಮ ತುಟಿಯ ಜೇನಾದ
ಬದುಕ ಬಟ್ಟಲ ಮಧುವಾದ
'ನಿಮ್ಮ ಅನುಪಮಾ'

೦ ೦ ೦ ೦ ೦

ಅಪ್ಪ ಅಮ್ಮನ ಆಶೀರ್ವಾದ ಕೋರಿ ಹೋದಾಗ ಅಪ್ಪನಿಂದ ಪಾದ ಪೂಜೆಯಾಯಿತು. ಅಮ್ಮ ಒಳಗೊಳಗೇ ಅತ್ತಳು. ತನ್ನ ಮದುವೆಗೆ ಅಡ್ಡಿ ಬರಬಹುದಾದ ಅನಿಷ್ಟಕ್ಕೆ ಕಾರಣಳಾದ ತಂಗಿಯನ್ನು ನೋಡಲೂ ಅಸಹ್ಯ ಪಟ್ಟುಕೊಂಡು ಅಕ್ಕ ಹೊರಗೇ ಬರಲಿಲ್ಲ. ಈ ಪ್ರತಿಕ್ರಿಯೆ ನಿರೀಕ್ಷಿಸಿದ್ದೇ ಆದರೂ ಹೆಪ್ಪುಗಟ್ಟಿದ ದುಃಖ ಕರಗಿ ದಡ ದಾಟಿಕೊಂಡು ಉಕ್ಕಿ ಹರಿಯಿತು. ಸಲೀಮ ಎರಡೂ ಕೈಗಳಿಂದ ಅವಳ ಭುಜ ಹಿಡಿದು ಮೆಲ್ಲನೆ ನಡೆಸಿಕೊಂಡು ಹೊರಗೆ ಕರೆತಂದ. ಆರ್ಯಸಮಾಜದಲ್ಲಿ ವೈದಿಕ ರೀತಿಯಲ್ಲಿಯೇ ಮದುವೆ ನಡೆದು ಸಲೀಮನಿಗೆ ಸತೀಶನೆಂದು ಹೊಸ ನಾಮಕರಣವಾಗಿತ್ತು.

'ಅನು ನಾನು ನಿನ್ನ ಧರ್ಮಕ್ಕೆ ಸೇರಿಬಿಟ್ಟಿದ್ದೇನೆ. ಇನ್ನು ನಿನಗಾವ ಪಾಪಭೀತಿಯೂ ಇಲ್ಲ-ಎಂದುಕೊಳ್ಳುತ್ತೇನೆ !' ಅರ್ಥಪೂರ್ಣವಾಗಿ ಹೇಳಿದ.

"ಬೇಡ ಬೇಡ 'ಸತೀಶ' ಹೆಸರಿಗಿಂತಲೂ 'ಸಲೀಮ' ಎಂಬ ಹಸರಿನಲ್ಲಿ ಮಾದಕತೆ ಇದೆ. ಇರುವುದೆಲ್ಲ ಇದ್ದಂತೆ ಇರಲಿ. ಬದಲಾವಣೆಯೇ ಬೇಡ."

'ನಿನ್ನಿಷ್ಟ ಅನು. ಸೂಜಿ ಮೊನೆಯಷ್ಟೂ ನಿನ್ನ ಮನಸ್ಸನ್ನು ನೋಯಿಸು ವುದಿಲ್ಲ. ನಿನಗಿಷ್ಟವಾದರೆ ನಮ್ಮೂರಿಗೆ ಹೋಗೋಣ. ಇಲ್ಲವಾದರೆ ಇಲ್ಲೇ ಎಲ್ಲಾದರೂ ಕೆಲಸ ನೋಡಿಕೊಂಡು ಇದ್ದು ಬಿಡೋಣ- ಏನಂತಿ?'

'ಯಾರೂ ಇಲ್ಲದ ನೆಂಟರ ನೆರಳೂ ಬೀಳದ ದೂರದ ಊರಿಗೆ ಹೋಗಿ ಬಿಡೋಣ. ನಾನೂ ನಿಮ್ಮೊಂದಿಗೆ ದುಡಿಯುತ್ತೇನೆ. ಇಬ್ಬರ ಬದುಕೂ ಹೇಗೋ ಕಳೆದುಹೋಗುತ್ತೆ'–ಎಂದಳು.

ಸಲೀಮ ಅವಳ ಇಷ್ಟದಂತೆ ದೂರದ ಊರುಗಳಲ್ಲಿ ಕೆಲಸಕ್ಕೆ ಅರ್ಜಿ ಗಳನ್ನು ಹಾಕತೊಡಗಿದ. ಅಲ್ಲಿಯವರೆಗೆ ತನ್ನ ಬಂಧುವಿನಿಂದ ತನಗೊಬ್ಬನಿಗೇ ಬರುತ್ತಿದ್ಧ ಹಣದಷ್ಟರಲ್ಲಿ ಇಬ್ಬರೂ ಸಮಾಳಿಸಿಕೊಂಡು ಹೋದರು .

ಒಂದು ಪುಟ್ಟ ಕೋಣೆಯೇ ಅವರ ಪ್ರೇಮ ಪ್ರಪಂಚ. ಅದರೆ ಅಷ್ಟರ ಲ್ಲಿಯೇ ಸಲೀಮ ಅನುಪಮಾಳಿಗೆ ಏನೆಲ್ಲ ಕಥೆ ಹೇಳಿ, ಪದ ಹಾಡಿ ಮೈ ಮರೆಸಿ ಸ್ವರ್ಗವೂ ಸಹಿಸದ ಸುಖವನ್ನೂ ಕಾಣಿಸಿದ.

ಸದಾ ಹಸನ್ಮುಖಿ, ಚುರುಕುತನ, ಜೇನುಮಾತು; ಬೆಣ್ಣೆ ಹೃದಯ. ಬೆಳಿಗ್ಗೆ ಅನು ಏಳುವುದಕ್ಕೆ ಮೊದಲೇ ಎದ್ದು, ಮಡದಿಯ ಮಂಚದ ಬಳಿ ಬಂದು 'ಏಳೆನ್ನ ಮನದನ್ನೆ ! ನೋಡು ಪೊಳ್ತರೆ ಬಂದು ನಿಶಿಯ ಬೋಗುಣಿ ಯೊಳಕೆ ಪೊಂಬುಗುರಿಯೆಸೆದಿರೆ'-ಎಂದು ಕೈ ಕೊಟ್ಟು ಎಬ್ಬಿಸುತ್ತಿದ್ದ. ಎದ್ದು. 'ಅನು' ಮುಖ ತೊಳೆದು ಕಾಫಿಗೆ ಸಿದ್ಧ ಮಾಡಿ ಸಲೀಮ ನನ್ನು ಕರೆದಾಗ ಬಾ ತುಂಬು ಬಟ್ಟಲನು; ಬಾರೆನ್ನ ಚೆನ್ನ, ಎಂದು ಕೆನ್ನೆ ಹಿಂಡುತ್ತಿದ್ದ. ಅಷ್ಟಕ್ಕೇ ಬಿಡದೆ ತುಂಬಿದ ಕಾಫಿ ಲೋಟವನ್ನು ಬದಿಗಿಕ್ಕಿ, ಬರಸೆಳೆದು ಬಿಗಿದಪ್ಪಿ ಮುತ್ತುಗಳ ಮಳೆಗರೆದು ಸಾಕು ಸಾಕೆನಿಸುವಂತೆ ಮಾಡ ತ್ತಿದ್ದ.

ಕಷ್ಟದಲ್ಲಿ ಕುಂಟುತ್ತಾ ನಡೆಯುವ ಬದುಕಾದರೂ ಇಬ್ಬರ ಒಲವಿನ ಅಮೃತವೇ ಸಂಜೀವಿನಿ ಶಕ್ತಿಯನ್ನು ಕೊಡುತ್ತಿತ್ತು, ಆದರೆ ಪ್ರೀತಿ ಒಲವುಗಳಿಂದ ಎಷ್ಟು ಕಾಲ ಹೊಟ್ಟೆ ತುಂಬಿಕೊಂಡಿರಲು ಸಾಧ್ಯ ? ಕೆಲಸವೊಂದಿರಲೇಬೇಕು. ಸಂಪಾದನೆಯಾಗಲೇಬೇಕು. ನಾಳೆಗಳ ಚಿಂತೆ ಸಲೀಮನೆನ್ನುತ್ತಿದ್ದಂತೆ ಬೇಡವೆಂದು ಬಿಟ್ಟರೂ 'ಇಂದು'ಗಳ ಚಿಂತೆ ತಪ್ಪಿಸಲು ಅಸಾಧ್ಯ.

'ಸಲೀಂ ನೀವು ಬರೀ ಪ್ರೀತಿಯ ಮಧುವನ್ನು ಕುಡಿಸುತ್ತಲೇ ಇರುತ್ತೀರೋ ಅಥವಾ 'ಊಟಗೀಟದ ಚಿಂತೆ ಮಾಡುತ್ತಿರೊ'- ಎಂದು ಅರ್ಧ ಗಂಬೀರವಾಗಿ ಅರ್ಧ ವಿನೋದವಾಗಿ ಕೇಳಿದರೆ,

"ಬುಂಡೆಯ ತುಂಬಾ ಹೆಂಡ. ಪಕ್ಕದಲ್ಲಿ ನಿನ್ನಂತಹ ಹೆಂಡತಿಯಿದ್ದರೆ" ಏನೂ ಬೇಡ ಅನೂ. ಕಾಡೂ ಸ್ವರ್ಗಕ್ಕೆ ಸಮಾನವಾಗಿರುತ್ತದೆ. ನೀನಿದ್ದರೆ ಹಸಿವು ನೀರಡಿಕೆಗಳನ್ನೂ ಮರೆತ ಅತಿ ಮಾನವನಾಗುತ್ತೇನೆ. ನಿನಗೆ ಹಾಗೆ ಅನಿಸುವುದಿಲ್ಲವೇ ?—"

"ಸಲೀಮ್, ನೀವು ಮಾತಿನಿಂದ ನನ್ನನ್ನು ಮೂಕಳನ್ನಾಗಿ ಮಾಡುತ್ತೀರಿ"—ಎಂದು ನಕ್ಕಳು. 'ಸರಿ ಹಾಗಾದರೆ ಮತ್ತೂ ಒಳ್ಳೆಯದಾಯಿತು. ನೀನು ಮೂಕ ಪ್ರತಿಮೆಯಾದರೆ ನಾನು ಪ್ರೇಮ ಮಂತ್ರಗಳಿಂದ ಮಾತಾಡಿಸುವ ಪೂಜಾರಿಯಾಗುತ್ತೇನೆ.'

"ಪ್ರತಿಮೆಗಳನ್ನು ಪೂಜಿಸಿದರೆ ನಿಮ್ಮ 'ಅಲ್ಲಾ' ಸಿಟ್ಟಾಗುತ್ತಾನೆ".

'ಪ್ರೀತಿ ಪ್ರೇಮಾರಾಧಕರಿಗೆ ಅಲ್ಲಾನೂ ಇಲ್ಲ ಮುಲ್ಲಾನೂ ಇಲ್ಲ. ನಾನು ನಂಬುವ ಸೂಫಿ ಧರ್ಮ ಮಧುಮಯವಾದುದು. ಮನುಷ್ಯ ಹೃದಯವೇ ಬಟ್ಟಲು: ಮದ್ಯವೇ ಭಗವಂತನ ಭಕ್ತಿ; ಉಪಾಸನೆಯು ಸುರಾಪಾನ. ಪ್ರಿಯೆಯೇ ವಿಚಾರ ಸಹಚರಿ–ಗೊತ್ತೇನು ನಿನಗೇ'—ಎಂದದ್ದಕ್ಕೆ 'ಅಬ್ಬಬ್ಬ ನಿಮ್ಮನ್ನು ಅರ್ಥಮಾಡಿಕೊಳ್ಳುವುದೇ ಕಷ್ಟ. ನೀವು ಎಷ್ಟು ಆಳದ ವ್ಯಕ್ತಿ

ಗಳೋ ಇನ್ನೂ ತಿಳಿಯಲು ಸಾಧ್ಯವಿಲ್ಲ" -ಎಂದು ಹುಸಿ ಮುನಿಸಿನಿಂದ ನುಡಿಯು ತ್ತಿದ್ದಳು.

ಮದುವೆಯ ಮೊದಲ ದಿನಗಳು ಮಧುಮಯ ಯಾತ್ರೆಯಾಗಿತ್ತು. ಆದರೆ ಮಧ್ಯೆ ಮಧ್ಯೆ ಎಂದೋ ಒಮ್ಮೆ ಅನುಪಮಳಿಗೆ ಮನೆಯ ನೆನಪಾಗಿ ಮಧುರ ಜೀವನದಲ್ಲಿ, ಹೂ ಮಂಚದಲ್ಲಿ ಮಡಿದ ಮುಳ್ಳಿನಂತಾಗುತ್ತಿತ್ತು.

ಇಬ್ಬರಿಗೂ ಹೊರಗಿನ ಪ್ರಪಂಚದ ಪರಿವೆಯಿಲ್ಲದೆ ಪ್ರಶಾಂತ ಪರಿಸರ ದಲ್ಲಿ ವಿಹರಿಸುವ ವಿಹಂಗಮಗಳಾದರು. ದಿನ ಕಳೆದದ್ದು, ತಿಂಗಳು ಉರು ಳಿದ್ದು, ವರುಷಗಳು ಸುದಮ್ದೂ ಯಾವುದೂ ಅಷ್ಟೊಂದು ಗಮನೀಯವೆನಿಸ ಲಿಲ್ಲ ಅವರಿಗೆ.

ಸಲೀಮನಿಗೆ ಅನುಪಮಳನ್ನು ಮಹಾರಾಣಿಯಂತೆ ಮೆರೆಸಬೇಕು. ಅವಳಿಗಾವ ಕೊರತೆಯ ಅನುಭವವಾಗಬಾರದು ಎನ್ನುವ ಅಭಿಲಾಷೆ ತನ್ನ ನಂಬಿ ಕೆಗೆ ವಿರೋಧವಾದರೂ ಅನಿವಾರ್ಯವೆನಿಸತೊಡಗಿತು. ಆದಕ್ಕಾಗಿ ದುಡಿಯ ಬೇಕು. ಆದರೆ ದುಡಿಯಲು ಕೆಲಸ ಸಿಕ್ಕಿರಲಿಲ್ಲ.

ಮದುವೆಯಾದ ಎರಡು ವರ್ಷಕ್ಕೆ ಸಲೀಮನಿಗೆ ಕೆಲಸ ಸಿಕ್ಕಿತು. ಕೈ ತುಂಬಾ ಸಂಬಳ! ಕುಣಿದಾಡಿ ಅನುಪಮಳನ್ನು ಎತ್ತಿ ಮುದ್ದಾಡಿದ. ಗಿರಗಿರನೆ ತಿರುಗಿಸಿದ. ಈ ಹೆಚ್ಚು ಸಂತೋಷ ಅವಳಲ್ಲಿ ಭೀತಿ ಗಾಬರಿಗಳನ್ನು ಮೂಡಿ ಸಿತು.

ಹೊಸ ಊರು ಹೊಸ ಬದುಕು, ರಜೆ ಸಿಕ್ಕಾಗಲೆಲ್ಲ ಸುಂದರ ಪ್ರದೇಶ ಗಳಿಗೆ ಕರೆದೊಯ್ದು ನದಿ, ನಾಲೆ, ಪಶು, ಪಕ್ಷಿ ಯಾವೊಂದು ಸುಂದರ ವಸ್ತುವೂ ಸಲೀಮನಲ್ಲಿ ಕಾವ್ಯಮಯ ಉದ್ಗಾರಗಳನ್ನು ಪ್ರೇರೇಪಿಸುತ್ತಿದ್ದುವು. 'ಅಬ್ಬ! ಇಷ್ಟೊಂದು ಸುಂದರ ಬದುಕನ್ನು ನಿರೀಕ್ಷಿಸಿರಲಿಲ್ಲ. ಯಾವ ಜನ್ಮದ ಅನು ಬಂಧವೋ! ಜಾತಿ-ನೀತಿಗಳನ್ನು ಮೀರಿ ಬೆಸೆದಿವೆ. ಈ ನಮ್ಮ ಹೃದಯ ಗಳನ್ನು!'— ಎಂದು ಅಚ್ಚರಿಪಡುತ್ತಿದ್ದಳು.

ಸಲೀಮ-ಅನೂರ ಸಂತೋಷಕ್ಕೆ ಗರಿ ಮೂಡಿವೆ ಹೊಸ ಸುದ್ದಿಯಿಂದ. ಅನೂಳಲ್ಲಿ ಆಗುತ್ತಿದ್ದ ಪರಿವರ್ತನೆಯನ್ನು ಗಮನಿಸಿದ. ಊಹಿಸಿಕೊಂಡು ನಗುತ್ತಿದ್ದ. ಅನೂ ನಾಚಿಕೆಯಿಂದ ಅವನ ಮುಂದೆ ಸುಳಿಯುವುದನ್ನು ತಪ್ಪಿಸಿದ್ದಳು. ಕಂಡರೆ ಕಾವ್ಯ ಹಾಡಿ ಕೀಟಲೆ ಮಾಡುವ ಅವನ ಸಹವಾಸ ಹಿತವಾದರೂ ಈಗ ಅವಳಿಗೆ ಬೇಡವಾಗಿತ್ತು. ತನ್ನದೇ ಆದ ಆಲೋಚನೆಗಳ ಗೂಡು ಕಟ್ಟಿಕೊಂಡಿರತೊಡಗಿದಳು.

ಕಲ್ಪನೆಗಳ ಹಂದರ ನಿರ್ಮಿಸುವ ಕವಿ ಹೃದಯದವನು, ಕೆಲಸವನ್ನೂ ಸಮರ್ಥವಾಗಿ ನಿರ್ವಹಿಸಬಲ್ಲ ಎಂಬುದನ್ನು ತೋರಿಸಿದ. ಅವನ ಬಾಸ್‌ಗೆ ಸಲೀಮ ತೀರ ಹತ್ತಿರವಾಗಿದ್ದ. ಸಲೀಮನು ಆಫೀಸಿಗೆ ಬರದಿದ್ದರೆ ಆಫೀಸೆಲ್ಲಾ ಹಾಳುಗುಡುವಂತಿತ್ತು. ಒಮ್ಮೆ ನಗುತ್ತ ಕೀಟಲೆಗಾಗಿ ಕೇಳಿದ: ಸಲೀಮ ನಿನ್ನ ಕೈ ಹಿಡಿದವಳನ್ನೂ ಹೀಗೇ ಕವಿತೆಗಳನ್ನು ಹಾಡಿ ಮೈ ಮರೆಸುತ್ತಿಯಾ? –ಎಂದು.

"ಸಾರ್ ನಮ್ಮ ಬದುಕೊಂದು ಸುಂದರ ಕವನ. ನಾನು ಕವಿಯಾದರೆ ನನ್ನವಳೇ ನನಗೆ ಸ್ಫೂರ್ತಿಯ ವಸ್ತು. ನಮ್ಮ ಪ್ರೀತಿಯೊಂದಕ್ಕೇ ನನಗೆ ಈ ಜಗತ್ತಿನಲ್ಲಿ ಬೆಲೆ; ಬೇರೆ ಯಾವುದಕ್ಕೂ ನಾನು ಬೆಲೆ ಕೊಡುವುದಿಲ್ಲ ಸಾರ್" ಎಂದ.

"ಸಲೀಮ್, ನಿಮ್ಮಿಬ್ಬರ ಈ ಅನ್ಯೋನ್ಯ ದಾಂಪತ್ಯಕ್ಕೆ, ನಿನ್ನ ಭಾವುಕ ಬದುಕಿಗೆ ನನ್ನ ಕಂಗ್ರ್ಯಾಜ್ಯುಲೇಷನ್ಸ್. ಒಮ್ಮೆಯಾದರೂ ನಿಮ್ಮ ಮನೆಗೆ ನನ್ನನ್ನು ಆಹ್ವಾನಿಸುವುದಿಲ್ಲವೇ ಸಲೀಂ ?

"ಸಾರ್ ನನ್ನದು ಬಡ ಕುಟೀರ. ನಿಮ್ಮಂಥವರನ್ನು ಅಲ್ಲಿಗೆ ಕರೆದೊಯ್ಯುವುದಕ್ಕೇ ನಾಚಿಕೆಯಾಗುತ್ತೆ"–ಎಂದ.

"ಡೋಂಟ್ ವರಿ ಸಲೀಮ್-ನಾನು ಅಂತಹ 'ಸ್ನಾಬ್' ವ್ಯಕ್ತಿಯಲ್ಲ. ನನಗೂ ಮನುಷ್ಯ ಭಾವನೆಗಳಲ್ಲಿ ಪ್ರೀತಿ ಇದೆ. ಹಣ ಅಂತಸ್ತನ್ನು ನಾನು ನೋಡುವುದಿಲ್ಲ" ಎಂದ.

"ಹಾಗಾದರೆ ಖಂಡಿತ ತಮಗೆ ಸ್ವಾಗತ. ನಾನು ಆಫೀಸಿನಿಂದ ಹೋಗು ವಾಗ ನನ್ನ ಜೊತೆಗೇ ಬನ್ನಿ ಸಾರ್"– ಎಂದ.

"ಸರಿ ಹಾಗಾದರೆ ನಾಳೆ ಹೋಗೋಣ"-ಎಂದ.

ಸಲೀಮನು ಆಗಬಹುದೆಂದು ಒಪ್ಪಿಗೆಯಿತ್ತ.

o o o o

ಮರುದಿವಸ ಆಫೀಸರ್ ಬಾಸ್ ಆದ ಮುಖರ್ಜಿಯವರನ್ನು ಕರೆತರುವು ದಾಗಿತ್ತು. ಅನುಪಮ ಇದ್ದುದನ್ನೆಲ್ಲಾ ಓರಣವಾಗಿ ಜೋಡಿಸಿದಳು. ಪುಟ್ಟ ಹಜಾರದಲ್ಲಿ ಎರಡು ಕುರ್ಚಿಗಳು ಒಂದು ಸಣ್ಣ ಸ್ಟೂಲನ್ನೇ ಟೀ ಟೇಬಲ್ ಆಗಿ ಮಧ್ಯೆ ಇಟ್ಟು ಅದರ ಮೇಲೊಂದು ಕಸೂತಿಯ ಬಟ್ಟೆಯನ್ನು ಹೊದಿಸಿ ದಳು. ಅದರಲ್ಲಿದ್ದುದು ಪ್ರಿಯಪ್ರೇಯಸಿಯರ ಚಿತ್ರ. ಪ್ರಿಯನ ಎದೆಗೆ ಹೊಂದಿ ಕೊಂಡಿರುವ ಪ್ರೇಯಸಿ, ಪ್ರಿಯನ ಕೈಲೊಂದು ಹೆಂಡದ ಹೂಜಿ. ತುಂಬಾ ಮುದ್ದಾಗಿ ಬಿಡಿಸಲಾಗಿತ್ತು. ಮಧ್ಯದಲ್ಲಿ ಹೂದಾನಿ. ಒಂದು ಗೊಂಚಲು ಗುಲಾಬಿಯನ್ನು ತಂದು ಅದರಲ್ಲಿಟ್ಟಳು.

ಐದು ಗಂಟೆಯಾಗುತ್ತಿದ್ದಂತೆ ಅನು ಅವರ ನಿರೀಕ್ಷೆಯಲ್ಲಿ ಕಾಯತೊಡಗಿದಳು. ಅವರು ಬರುವಷ್ಟು ಹೊತ್ತಿಗೆ ತಾನು ಎಲ್ಲವನ್ನೂ ಸಿದ್ಧಗೊಳಿಸಿ. ತೆಳುಗುಲಾಬಿ ಬಣ್ಣದ ಸೀರೆಯುಟ್ಟು ಅದೇ ಬಣ್ಣದ ರವಿಕೆ ತೊಟ್ಟು, ಹಣೆಗೆ ಕೆಂಪು ಕುಂಕುಮ ಧರಿಸಿದ್ದಳು. "ಹಣೆಯ ಕುಂಕುಮ ಬೆಂಕಿ" –ಎಂದು ಕೀಟಲೆಗೆ ಸಲೀಮ ಹೇಳಿದ್ದು ನೆನಪಾಗಿ ನಕ್ಕಳು.

ಹೊರಗೆ ಕಾರು ನಿಂತ ಶಬ್ದವಾಯಿತು. ಕಾರಿನಲ್ಲಿ ತನ್ನ ಮನೆಗೆ ಬರುವ ವರಾರೂ ಇಲ್ಲದಿದ್ದರೂ ಈ ದಿನ ಬಂದವರು ಸಲೀಮನ ಬಾಸ್ ಇರಬೇಕೆಂದು ಕೊಂಡು ಅವರ ಸ್ವಾಗತಕ್ಕೆ ಸಿದ್ಧಳಾದಳು.

ಸಲೀಮ ಬಾಸ್‌ನೊಂದಿಗೆ ಇಳಿದು ನೇರವಾಗಿ ಹಜಾರಕ್ಕೆ ಕರೆತಂದ. ಒಳಗೆ ಕಾಲಿಡುತ್ತಿದ್ದಂತೆಯೇ ಘಮ ಘಮ ಅತ್ತರಿನ ವಾಸನೆಯೆನಿಸಿತು.

ಬುರ್ಕಾದಲ್ಲಿ ಎದುರಾಗಬಹುದೆಂದು ನಿರೀಕ್ಷಿಸಿದ ಬಾಸ್ ಮುಖರ್ಜಿಯವರಿಗೆ ಅನುಪಮಾ ಎದುರಿಗೆ ಕೈ ಜೋಡಿಸಿ ನಮಸ್ಕರಿಸಿದಾಗ ಆಶ್ಚರ್ಯವಾಯಿತು. ಅವಳು ಹಿಂದೂತನಕ್ಕೆ ಪ್ರತೀಕದಂತೆ ಇದ್ದಾಳೆ. ಹಣೆಯ ಕುಂಕುಮದಿಂದ ಆಶ್ಚರ್ಯವಾಯಿತು. ಸಲೀಮನಿಗೆ ಮುಖರ್ಜಿಯವರ ಬೆಪ್ಪು ಕಣ್ಣುಗಳು ಅರ್ಥವಾಗಿ, ನಕ್ಕು–ಸಾರ್ ಈಕೆ ನನ್ನ ಹೆಂಡತಿ ಅನುಪಮಾ. ನನ್ನ ದೇವತೆ ಯೆಂದರೆ ಇವಳೇ ಎಂದ.

"ಸಲೀಂ ಈ ಹೆಸರು ನಮ್ಮ ಹಿಂದೂ ಹೆಸರಲ್ಲವೇ ? –ಎಂದು ಅನು ಮಾನದಿಂದಲೇ ಕೇಳಿದ, ಹೌದು ಸಾರ್. ನಿಮ್ಮ ಅನುಮಾನ ನನಗರ್ಥ ವಾಯಿತು, ನೀವು ನನಗೆ ಬೇಕಾದವರು. ನನ್ನ ವೈಯಕ್ತಿಕ ಬದುಕಿಗೆ ಸಂಬಂಧಿಸಿದ ಕಥೆ ಹೇಳುತ್ತೇನೆಂದು, ಅನುಪಮಾ ಮತ್ತು ತಮ್ಮಿಬ್ಬರ ಪ್ರೇಮ ಕಥೆಯನ್ನು ವಿವರಿಸಿದ-ಸಲೀಮನಲ್ಲಿ ಭಾವೋದ್ವೇಗ ಹೆಚ್ಚಾಗುತ್ತಿತ್ತು.

ಪ್ರಪಂಚವೇ ಎದುರು ಬಿದ್ದರೂ ನಮ್ಮನ್ನು ಯಾರೂ ಬೇರೆ ಮಾಡ ಲಾರರು. ಪ್ರೀತಿ ಮೈತ್ರಿಗಳಿಂದ ರಚಿತವಾಗಿರುವ ಹೃದಯಗಳಿಗೆ ಹಿಂದೂ ಮುಸಲ್ಮಾನ್—ಎಂಬ ಮಡಿವಂತಿಕೆಯಿಲ್ಲ ಸಾರ್—ಎಂದ.

ಮುಖರ್ಜಿಯವರ ಕಣ್ಣಲ್ಲಿ ನೀರೂರಿತು. "ನಿಮ್ಮನ್ನು ಹೃದಯ ಪೂರ್ವಕವಾಗಿ ಅಭಿನಂದಿಸುತ್ತೇನೆ ಸಲೀಮ್. ಈ ಪ್ರಪಂಚದಲ್ಲಿ ಪ್ರೇಮಾ ದರ್ಶದಿಂದ ಬದುಕುವ ದಂಪತಿಗಳೇ ದುರ್ಲಭ. ಜಾತಿ-ನೀತಿಗಳನ್ನೂ ಮೀರಿ ಬೆಸೆದ ನಿಮ್ಮ ಬದುಕು ಚಿರಾಯುವಾಗಲಿ-ಎಂದು ಹೃತ್ಪೂರ್ವಕವಾಗಿ ನುಡಿದ. ನನ್ನ ಪ್ರೀತಿಯ ಜ್ಞಾಪಕವಾಗಿ ಇವುಗಳನ್ನು ಸ್ವೀಕರಿಸಿ ಎಂದು ಡ್ರೈವರನು ತಂದಿಟ್ಟಿದ್ದ ಸೇಬಿನ ಬುಟ್ಟಿಯನ್ನು, ಒಂದು ಸೀರೆಯ ಪೊಟ್ಟಣ ವನ್ನೂ ಅವರಿಗೊಪ್ಪಿಸಿದ, ಅನುಪಮಾ ಹಿಂದು-ಮುಂದು ನೋಡಿದಳು. "ಪರವಾಗಿಲ್ಲಮ್ಮ ಸಲೀಮ ನನ್ನ ಸೋದರನಂತೆ. ಬೇರ್ಯಾರೂ ನಿನಗೆ ಕೊಡು ತ್ತಿಲ್ಲ. ತೆಗೆದಿಟ್ಟುಕೋ"—ಎಂದರು. ಸಲೀಮನೂ ಅನುಪಮಳಿಗೆ "ಮುಖರ್ಜಿ ಯವರ ಮನಸ್ಸು ನೋಯಿಸಬೇಡ. ತೆಗೆದಿಡು" ಎಂದು ಹೇಳಿದ.

ಅವುಗಳನ್ನು ಅನುಪಮಳು ತೆಗೆದಿಟ್ಟು ಎರಡು ತಟ್ಟೆಗಳಲ್ಲಿ ತಿಂಡಿಯನ್ನು ತಂದಿಟ್ಟು. ನೀರಿನ ಗ್ಲಾಸುಗಳಿಗಾಗಿ ಒಳಗೆ ಹೋಗಿ ಗ್ಲಾಸುಗಳನ್ನು ಮತ್ತು ನೀರಿನ ಹೂಜಿಯನ್ನು ತಂದಿಟ್ಟಳು. ಗ್ಲಾಸುಗಳೊಳಕ್ಕೆ ನೀರನ್ನು ಬಗ್ಗಿಸಿ ಇರಿಸಿದಳು.

ತಿಂಡಿ ತಿಂದಾದ ಮೇಲೆ ಎರಡು ಕಪ್ಪುಗಳಲ್ಲಿ ಚಹಾ ತಂದಿರಿಸಿದಳು.

"ಸಲೀಮ್ ನಿಮ್ಮ ಫಿಲಾಸಫಿಕ್ ಔಟ್‌ಲುಕ್ ಆಫ್ ಲೈಫ್ ನನ್ನನ್ನು ತರ್ಕಶೂನ್ಯನನ್ನಾಗಿ ಮಾಡಿದೆ. ಪ್ರೀತಿಗೆ ಜಾತಿ ಬಿಟ್ಟು ಬದುಕು ಬದುಕುತ್ತೇವೆಂದು ಹೇಳಿ ಹೊರಟವರು ಬಹಳ ಮಂದಿ ಇದ್ದರೂ ಅವನ ನಂಬಿಕೆಗಳಿಗೆ ಬಲವಾದ ನೆಲೆಯಿಲ್ಲ. ಆದರೆ ನಿಮ್ಮ ಪ್ರೀತಿಯ ತತ್ವ. ಇರುವುದರಲ್ಲಿ ನಂಬಿಕೆ-ನನಗೆ ತುಂಬಾ ಹಿಡಿಸಿದುವು. ಭವಿಷ್ಯದ ಚಿಂತೆ ಬಿಟ್ಟು ಇಂದಿನದಷ್ಟನ್ನೇ ಯೋಚಿಸುತ್ತಿರುವ ನಿಮ್ಮದು ಸುಖದ ವರ್ತಮಾನಗಳೇ ಆಗಿರಲಿ...ನಾನಿನ್ನು ಬರುತ್ತೇನೆ ಸಲೀಮ್. ಒಮ್ಮೆ ನಿಮ್ಮಾಕೆಯನ್ನು ಕರೆದು ತನ್ನಿ ನಮ್ಮ ಮನೆಗೆ.

"ಆಗಬಹುದು ಸಾರ್, ನೀವು ಬಂದದ್ದು ನಮಗೆಷ್ಟೋ ಸಂತೋಷ. ಯಾರೂ ಇಲ್ಲದ ಅನಾಥರಂತಿದ್ದ ನಮಗೆ ನೀವೊಬ್ಬ ಬಂಧು. ನಿಮ್ಮ ಪ್ರೀತಿ ಸ್ನೇಹಗಳು ಸದಾ ಇರಲಿ" ಎಂದು ಬೇಡಿದ.

"ಗುಡ್ ಲಕ್ ಸಲೀಮ್. ಬರುತ್ತೇನಮ್ಮ"— ಎಂದು ನಮಸ್ಕರಿಸಿ ಹೊರಗೆ ನಡೆದರು. ಡ್ರೈವರ್ ಕಾರಿನ ಬಾಗಿಲು ತೆರೆದ. ಮುಖರ್ಜಿ ಒಳಗೆ ಕುಳಿತರು. ಸಲೀಮ್-ಅನೂ ಅವರಿಬ್ಬರಿಗೂ ವಂದಿಸಿ, ಕಾರು ಕಣ್ಮರೆಯಾಗುವವರೆಗೂ ಅಲ್ಲಿಯೇ ಇದ್ದು ಒಳಗೆ ಬಂದು ಬಾಗಿಲು ಹಾಕಿಕೊಂಡರು.

ಅನೂಳ ಮುಖವನ್ನು ಕೈಗೆ ತೆಗೆದುಕೊಂಡು ಕಣ್ಣು ರೆಪ್ಪೆ ಮಿಟುಕಿಸದೆ ನೋಡತೊಡಗಿದ. ಮೆಲ್ಲನೆ ಅವಳ ಕೆಂಪು ತುಟಿಗೆ ತುಟಿಯೊತ್ತಿದ. "ಇದೇನು

ಸಲೀಮ್ ಬರಬರುತ್ತಾ ಹೀಗಾಗುತ್ತಿದ್ದೀರಿ. ನಾಳೆ ನಮ್ಮ ನಡುವೆ ಒಂದು ಮಗು ಬಂದರೆ ಹೀಗೆಲ್ಲಾ ಆಡಿವರೆ ಚೆನ್ನಾಗಿರುತ್ತದೆಯೇ ನಿಮಗೆ ಸ್ವಲ್ಪವೂ ನಾಚಿಕೆಯಿಲ್ಲ"

"ನಾಚಿಕೆ !!"— ಗಹಗಹಿಸಿ ನಕ್ಕು ಹೇಳಿದ. ಸ್ವರ್ಗದ ಅಪ್ಸರೆಯರಿಂದ ದೇವತೆಗಳು, ಮಾನವರು, ಈ ಮಧುವನ್ನು ಬಯಸುವುದರಲ್ಲಿ ತಪ್ಪಿಲ್ಲ. ನಾನು ನಿನ್ನಿಂದ ಬಯಸುವುದು ನಿನಗೆ ತಪ್ಪೆನಿಸುವುದೇ ?

"ಕ್ಷಮಿಸಿ ಸಲೀಮ್, ನಾನು ನಿಮ್ಮವಳು. ನೀವಂದಂತೆ ನಾನೊಂದು ಮಧುಕುಂಭ. ನನ್ನಿಂದ ಪಡೆಯುಬಹುದಾದ ಆನಂದವೇ ನಿಮ್ಮ ಮಧುಪಾದರೆ ಇದೋ ನಿಮಗೆ ಸಮರ್ಪಿತ"—ಎಂದು ಹತ್ತಿರಬಂದು ಪೂರ್ತಿಯಾಗಿ ಬಿಗಿದಪ್ಪಿದಳು. ಹಾಗೆಯೇ ಮೈಮರೆತು ಕಣ್ಣು ಮುಚ್ಚಿದಳು.

o o o o

ಪ್ರಮುದಾಳು ಹುಟ್ಟಿ ಒಂದು ವರ್ಷವಾಗಿದೆ. ಆವಳ ಹುಟ್ಟು ಹಬ್ಬವನ್ನು ಇದ್ದುದರಲ್ಲಿಯೇ ಸಂಭ್ರಮದಿಂದ ಆಚರಿಸಿದರು. ಗೆಳೆಯರಿಗೆಲ್ಲ ಭರ್ಜರಿ ಔತಣ ಕೊಡಿಸಿದ. ಬಂಧುಗಳಿಲ್ಲದಿದ್ದರೂ ಗೆಳೆಯರ ಸಂಖ್ಯೆಗೆ ಕಡಿಮೆಯಿರಲಿಲ್ಲ. ಪ್ರಮುದಾಳಿಗೆ ಉಡುಗೊರೆಗಳ ರಾಶಿಯೇ ಬಂತು. ಓ ದೇವರೇ ನೀನೆಷ್ಟು ಕರುಣಿ. ತುಂಬಿ ಬರುವ ಈ ಆನಂದಾತಿರೇಖವನ್ನು ತಡೆದುಕೊಳ್ಳುವ ಶಕ್ತಿ ಕೊಡು. ನನ್ನ ಸಲೀಮ ನೂರು ವರ್ಷ ಬಾಳಲಿ. ಮರಳುಗಾಡುಗಳಲ್ಲಿ ಅಮೃತದ ಹೊನಲುಗಳನ್ನೇ ಹರಿಸಿಯಾನು ! —ಎಂದು ದೇವರಲ್ಲಿ ಮೊರೆಯಿಟ್ಟಳು.

ಒತ್ತಡದ ಕೆಲಸಗಳಿದ್ದರೂ ಆಫೀಸಿನಲ್ಲಿ ಸಲೀಮನ ಪರಿಸ್ಥಿತಿ ಮಾತ್ರ ಇಸಿತೂ ವಿಚಲಿತವಾಗುತ್ತಿರಲಿಲ್ಲ. ತೀರಾ ಪ್ರಶಾಂತವಾದ ಧೋರಣೆಯಿಂದಲೇ ಗೋಜಲು ಸಮಸ್ಯೆಗಳನ್ನು ಸ್ವೀಕರಿಸಿ ಬಿಡಿಸುತ್ತಿದ್ದ. ಆಫೀಸು-ಮನೆ-ಮಡದಿ-ಮಗು- ಈ ವೃತ್ತದ ಪರಿಧಿಯೊಳಗೇ ಪರಿಭ್ರಮಿಸುತ್ತಿದ್ದ.

ದಿನಗಳು, ವರ್ಷಗಳು, ಬೇಕಾದರೆ ಯುಗಗಳೂ ಕ್ಷಣಗಳಂತೆ ಉರುಳಿ ಹೋಗುತ್ತಿದ್ದುವು. ಬೆಳಗು-ರಾತ್ರಿಗಳು, ಆಫೀಸಿನ ಕೆಲಸದ ನೆನಪಿಲ್ಲದಿದ್ದರೆ ಅವರ ಪರಿವೆಗೇ ಬರುತ್ತಿರಲಿಲ್ಲವೇನೋ !

ಪ್ರಮದಾಳ ಬಗ್ಗೆ ಅನುಪಮಾ ಗಗನಚುಂಬಿ ಕನಸಿನ ಗೋಪುರಗಳನ್ನು ಕಟ್ಟಿಕೊಂಡಳು. ಇದು ಹೂ-ಜೇನುಗಳನ್ನು ಬೆರೆಸಿ ಮಾಡಿದ ಮಗು. ಇವಳು ಬೆಳೆಯಬೇಕು. ವಿಶ್ವದಗಲ, ಆಕಾಶದೆತ್ತರ-ಬೆಳೆಯುವಂತೆ ನೋಡಿ ಕೊಳ್ಳಬೇಕು. ಸಲೀಮನಿಗೆ ನಾಳಿನ ಚಿಂತೆಯಿಲ್ಲ. 'ಇಂದು'ಗಳನ್ನು ಜೋಪಾನವಾಗಿ ಕಾಪಾಡಿದರೆ ಮಾತ್ರ 'ನಾಳೆ' ಸುನಿಧಿಯಾದೀತು —ಎಂದು ತೀರಾ ವ್ಯವಹಾರದ ಲೆಕ್ಕಾಚಾರಕ್ಕೆ ಇಳಿದಳು.

ಮೋಜಿನ ಖರ್ಚುಗಳನ್ನು ಮೊಟಕು ಮಾಡಿದಳು. ಸಲೀಮನಿಗೆ ಪ್ರತಿ ದಿನವೂ ವ್ಯವಹಾರದ ಪಾಠವಾಗತೊಡಗಿತು. ಆದರೆ ಹೇಳಿದಾಗ ಕೇಳಿ ಮರುಕ್ಷಣ ಮರೆತುಬಿಡುತ್ತಿದ್ದ. "ನನ್ನ ಪ್ರಮದಾ" ಇಂದರಳಿ ನಾಳೆ ಬಾಡುವ ಹೂವಾಗಬಾರದು. ಅವಳು ಚಿರನೂತನವಾಗಿ ಉಳಿಯಬೇಕು. ಯೌವನದ ದೇಹಕಾಂತಿ ಇಷ್ಟಾದರೂ ಮಸಕಾಗಬಾರದು. ಇಂದುಗಳೆಂದೂ ನಾಳೆ ಗಳಾಗಿ ಹಳಸಬಾರದು—"ಎಂದು ಪ್ರಕೃತಿ ನಿಯಮವನ್ನೇ, ಕಾಲದ ಹರಿತ ವನ್ನೇ ಬದಲಾಯಿಸಿ ನಿಲ್ಲಿಸುವಂತೆ ಯೋಚಿಸಿದ.

ಪ್ರಮದಾಳ ಹುಟ್ಟು ಹಬ್ಬವಾಗಿ ಮೂರು ತಿಂಗಳಾಗಿದೆ. ಅವರ ಜೀವ ನದಿ ಎಲ್ಲಿಯೂ ತಡೆಗಾಣದೆ ಅವ್ಯಾಹತವಾಗಿ ಹರಿದೋಡುತ್ತಿದೆ. ಆದರೆ ಆ ಪರಿವೆ ಮಾತ್ರ ಅವರಿಗಿಲ್ಲ.

ಸಲೀಮ ಒಂದು ದಿನ ಎಂದಿನಂತೆ ಆಫೀಸಿಗೆ ಹೋಗಲಿಲ್ಲ. ಮನೆ ಯಲ್ಲಿಯೇ ಉಳಿದ. ಅನುಪಮಳಿಗೆ ಯಾಕೆಂದು ತಿಳಿಯಲಿಲ್ಲ. "ಆಗಲೇ 9-30 ಆಯಿತು, ಊಟ ರೆಡಿಯಾಗಿದೆ. ನೀವೆದ್ದರೆ ಈಗಲೇ ಬಡಿಸಿಬಿಡುತ್ತೇನೆ" ಎಂದಳು ಮಾಮೂಲಿನಂತೆ.

"ಇಲ್ಲ ಅನೂ ಆಫೀಸಿಗೆ ಹೋಗುವ ಮನಸ್ಸಿಲ್ಲ. ಈ ದಿನಪೂರ್ತಿ ನಿನ್ನೊಂದಿಗೆ, ಪ್ರಮಿಯೊಂದಿಗೆ ಇದ್ದುಬಿಡೋಣವೆಂದುಕೊಂಡಿದ್ದೇನೆ. ಈ ದಿನ ನನ್ನ ಕೈಯಿಂದ ತಪ್ಪಿಹೋದರೆ ಏನೋ ಅನಾಹುತವೆನಿಸುತ್ತಿದೆ. ಇಂದಿನ 'ಇಂದು' ನನಗೆ ಅಮೂಲ್ಯ. ನನ್ನ ಮನದಾಳದಿಂದ ಏಳುತ್ತಿರುವ ಹುಚ್ಚು ಸಂತಸದ ಅಲೆಗಳಿಂದ ನಿಮ್ಮನ್ನು ಕೊಚ್ಚಿಹಾಕಬೇಕೆಂದಿದ್ದೇನೆ. ಇಂದಿನ ಈ ಖುಷಿ ನಾಳೆಗಿರುವುದಿಲ್ಲ. ಅದಕ್ಕೆ ಈ ದಿನ ನಮ್ಮ ಕೈ ಜಾರಿಹೋಗದಂತೆ ಭದ್ರವಾಗಿ ಬಿಗಿ ಹಿಡಿದಿಟ್ಟುಕೊಳ್ಳಬೇಕೆಂದೇ ಉಳಿದಿದ್ದೇನೆ-" ಎಂದು ಒಂದೇ ಸಮನೆ ಬಡಬಡಿಸಿದ.

"ಸಲೀಮ್ ನಿಮಗೇನಾಗಿದೆ. ಮಾಮೂಲಿನಂತೆ ನೀವಿಲ್ಲ. ಇಷ್ಟೊಂದು ಭಾವುಕತೆಯೇಕೆ. ನಾಳೆ ಹಾವಳಿಯ ಚಿಂತೆಯೇಕೆ ? ನೀವೇ ಹೇಳುತ್ತೀರಿ ನಮಗೆಂದೆಂದಿಗೂ ನಾಳೆಗಳು ಬರಲಾರವೆಂದು, ಇನ್ನೇಕೆ ನಿಮಗೆ ಭೀತಿ ?"

"ಇಲ್ಲ ಅನೂ, ಇಂದಿನವರೆಗೂ ನನ್ನನ್ನು ಕಾಡದಿದ್ದ ನಾಳೆಗಳ ನೆನ್ನೆಗಳ ಅಳುಕು ನನ್ನನ್ನು ಬಾಧಿಸುತ್ತಿದೆ. ಅದನ್ನು ಮರೆಯಲು ಸಹಾಯ ಮಾಡು ಅನು-ಪ್ಲೀಸ್ ಸಹಾಯ ಮಾಡು. ಹತ್ತಿರ ಬಾ, ನನ್ನನ್ನು ಒಂದರಗಳಿಗೆಯೂ ಬಿಟ್ಟು ಹೋಗಬಾರದು. ನಿನ್ನ ತುಟಿ ಬಟ್ಟಲನ್ನು ಹತ್ತಿರ ತಾ. ನಾಳೆಗೆ ನಾನು ನೂರ್ಕೋಟಿ ನೆನ್ನೆಗಳ ಜೊತೆಗೆ ಸೇರಿ ಹೋಗುತ್ತೇನೆ. ನೀನಿದ್ದರೆ ಆ ಭೀತಿ ಹತ್ತಿರ ಸುಳಿಯಲಾರದು."

ಅನೂಳ ಹೃದಯ ಕಂಪಿಸಿತು. ಗಿರಗಿರನೆ ತಲೆ ತಿರುಗಿದಂತೆ ಆಯಿತು. ಯಾರನ್ನಾದರೂ ಕರೆದು ತರೋಣವೆಂದರೆ ತನ್ನನ್ನು ಕಪಿ ಮುಷ್ಟಿಯಲ್ಲಿ ಬಿಗಿದು ಹಿಡಿದಿದ್ದಾನೆ. ಅವನಿಗೆ ತಿಳಿಸಿ ಹೇಳುವುದು ಈ ಕ್ಷಣಕ್ಕೆ ಅಸಾಧ್ಯ...ಸಲೀಮ್ ಒಂದು ನಿಮಿಷ ಹೊರಗೆ ಹಜಾರದಲ್ಲಿ 'ಪ್ರಮಿ' ಒಬ್ಬಳೇ ಆಡಿಕೊಳ್ಳುತ್ತಿದ್ದಾಳೆ. ಅವಳನ್ನು ಎತ್ತಿಕೊಂಡು ಬರುತ್ತೇನೆ'— ಎಂದು ಬಿಡಿಸಿಕೊಂಡು ಮಂಚದಿಂದ ಜಗ್ಗನೆದ್ದು ಹೊರಗೆ ಬಾಗಿಲಿನ ಕಡೆಗೆ ನಡೆದಳು.

ಸಲೀಮನ ಸೂಕ್ಷ್ಮ ಕಿವಿಗಳಿಗೆ ಚಿಲಕ ತೆಗೆಯುವ ಶಬ್ದ ಕೇಳಿಸಿತು.

ಅವನೂ ಎದ್ದು ಹಿಂದಿನಿಂದ ಓಡಿ ಚಿಲಕ ತೆಗೆಯಲು ಪ್ರಯತ್ನಿಸುತ್ತಿದ್ದ ಅನೂಳ ಜಡೆ ಹಿಡಿದು ಎಳೆದು 'ಅನೂ' —ಎಂದು ಅಬ್ಬರಿಸಿದ. ಅನೂ ತಿರುಗಿ ನೋಡಿದಳು. ಆವನನ್ನು ನೋಡುತ್ತಿದ್ದಂತೆ ಚಿಳ್ಳನೆ ಕಣ್ಣೀರು ಹಾರಿತು. ಸಲೀಮನ ಕಣ್ಣಲ್ಲಿ ಕೋಪದ ಕೆಂಪು !! ಅನೂಳಿಗೆ ನಂಬಲಾಗ ಲಿಲ್ಲ. ಇಷ್ಟು ವರ್ಷಗಳಲ್ಲಿ ಕಾಣದ ಈ ಸೆಡವು ಇಂದು ಮೂಡಿದ್ದು ಉಲ್ಕಾ ಪಾತದಂತೆ ಅನಿಸಿತು.

ಅವಳ ಕಣ್ಣಲ್ಲಿ ಹನಿಕಂಡ ಸಲೀಮ "ಅನೂ, ಪ್ರಿಯೆ... ಕ್ಷಮಿಸು. ದಯವಿಟ್ಟು ಕ್ಷಮಿಸು. ಅಪರಾಧವಾಯಿತು.... ಈ ಮಧುರ ಗಳಿಗೆಗಳಲ್ಲಿ ಮೂರನೆಯವರ ಪ್ರವೇಶ ಬೇಡವೆಂದು ಹೀಗೆ ಹೇಳಿದೆ. ಮತ್ತೇನೂ ಅಲ್ಲ. ಬಾ. ನನಗೇನೂ ಆಗಿಲ್ಲ. ಆದರೆ ಒಂದು ಸತ್ಯ ಮಾತ್ರ ನನಗೀಗ ಕಾಣು ತ್ತಿದೆ. ಹಿಂದೆಗಳು ಇಂದುಗಳಾಗುವುದಿಲ್ಲ ಮತ್ತು 'ಇಂದು'ಗಳು ಎಂದಿಗೂ 'ನಾಳೆ'ಗಳಾಗದೆ ಉಳಿಯುವುದಿಲ್ಲ. ಋತು ಧರ್ಮದ ತಿರುವನ್ನು ಬದಲಾ ಯಿಸುವುದು ಸಾಧ್ಯವಿಲ್ಲ. ನಾನು ಇಲ್ಲಿಗೆ ಬಂದದ್ದೂ ಗೊತ್ತಿಲ್ಲ. ನಾಳೆಗೆಲ್ಲಿ ಹೋಗುವೆನೋ ತಿಳಿದಿಲ್ಲ. ಹೇಳುವವರೂ ಇಲ್ಲ. ಗುಟ್ಟರಿಯುವುದು ಸಾಧ್ಯವಿಲ್ಲ. ಕೇವಲ ನಾನೊಂದು, ಮರುಭೂಮಿಯಂಲ್ಲಿ ಭೋರಿಡುವ ಬಿರುಗಾಳಿಯೆನಿಸುತ್ತದೆ. ಬಾ ಇರುವ ಈ ಕ್ಷಣಗಳನ್ನು ವ್ಯರ್ಥ ಮಾಡು ವುದು ಬೇಡ—ಎಂದು ಕೈ ಹಿಡಿದು ಎಳೆದುಕೊಂಡು ಹೋದ. ತಾವಿದ್ದ ವಾಸ್ತವ ಲೋಕವನ್ನು ಮರೆತು ಎಷ್ಟು ಹೊತ್ತು ಮರೆತಿದ್ದರೋ 'ಪ್ರಮಿ'ಯ ಅಳು ಕೇಳಿಸಿತು. ಥಟ್ಟನೆ ಕನಸೊಡೆದು, ಕಳೆದು ಹೋಗ ಬಹುದಾದ ವಾಸ್ತವ ಬದುಕಿನ ಎಳೆಯು ಸೆಳೆತಕ್ಕೆ ಬಂದಳು. ಸರಸರನೆ ಪ್ರಮಿಯು ಇದ್ದಲ್ಲಿಗೆ ಹೋಗಿ ಅವಳನ್ನು ಅಪ್ಪಿ ಹಿಡಿದಳು.

ಬೆಳಗಿನ ಹೀಚು ಮಧ್ಯಾಹ್ನ ಕಾಯಾಗಿ, ಸಂಜೆಗೆ ಪಕ್ವಕ್ಕೆ ಬಂದಿತ್ತು. ಅಕಸ್ಮಿಕವಾಗಿ ದೊಡ್ಡ ಬಿರುಗಾಳಿಯೆದ್ದಿತು. ಕಿಟಕಿ ಬಾಗಿಲುಗಳು ರಪರಪನೆ ಹೊಡೆದುಕೊಂಡವು. ನೆಲದ ಮಣ್ಣು ಸುಳಿಗಾಳಿಯ ಜೊತೆಗೆದ್ದು ಸುರುಳಿ ಯಾಗಿ ಎತ್ತರಕ್ಕೆ ಹಾರಿತು.

ಅರ್ಧ ಗಂಟೆಯ ನಂತರ ಬುಸುಗುಟ್ಟಿ ಸೋತು ಸಪ್ಪಗಾದ ಹಾವಿನಂತೆ ವಾತಾವರಣ ತೆಪ್ಪಗಾಯಿತು. ಆದರೆ ಬಿಳುಪಾದ ಮೋಡಗಳ ಮೈ ಬಣ್ಣ ಇದ್ದಕ್ಕಿದ್ದಂತೆ ಕಪ್ಪಿಟ್ಟಿತು. ಕ್ಷಣ ಕ್ಷಣಕ್ಕೆ ಅವು ಉಬ್ಬುತ್ತಿದ್ದವು. ದಟ್ಟವಾಗಿ ಕವಿದ ಅವುಗಳಿಂದಾಗಿ ಸಂಜೆಯೇ ರಾತ್ರಿಯಾಗಿತ್ತು. ರಾತ್ರಿಗೆ ಹಣ್ಣಾಗಬೇಕಾದ್ದು ಬಿರುಗಾಳಿಗೆ ಈಗಲೇ ತೊಟ್ಟು ಕಳಚಿ ಬಿದ್ದಿತ್ತು. ಇನ್ನೇನು ಮಳೆ ಬಂದೇ ಬರುತ್ತದೆ. ಸೀದು ಬತ್ತಿದ ಎದೆಗಳು ತಂಪಾಗುತ್ತವೆ.

ಅನೂ 'ಪ್ರಮಿಗೆ' ಹಾಲು ಕುಡಿಸಿ 'ಜೋ' ತಟ್ಟಿ ಮಲಗಿಸಿದಳು. ಸಲೀಮನಿಗೆ ಒಂದು ಲೋಟದ ತುಂಬಾ ಹಾಲು, ಸುಲಿದಿದ್ದ ಕಿತ್ತಲೆಯ ತೊಳೆಗಳನ್ನು ಒಂದು ಸಣ್ಣ ಪ್ಲೇಟಿನಲ್ಲಿ ತೆಗೆದುಕೊಂಡು ನಡೆದಳು. ಅವನ ಪಕ್ಕದಲ್ಲಿ ಕುಳಿತು, ಒಂದೊಂದಾಗಿ ತೊಳೆಗಳನ್ನು ಬಿಡಿಸಿ ಕುಸುರಿಗಳನ್ನು ಮಾತ್ರ ತಿನ್ನಿಸಿದಳು. ತಿನ್ನುತ್ತಲೇ ಅವಳ ಕೈ ಹಿಡಿದು "ಅನೂ ಸತ್ತನೆನ್ನೆಯ ಚಿಂತೆ ಬಿಟ್ಟು, ಹುಟ್ಟದಿರುವ ನಾಳೆಯ ಕೊರಗನಟ್ಟಿ, ಇವತ್ತಿನ ಸುಖವನ್ನು ಮಾತ್ರ ಉಳಿಸಿಕೊಳ್ಳುತ್ತೀಯಾ. ಜೀವನದ ಸಾರವೆಲ್ಲ ಇನ್ನೊಂದಷ್ಟು ಕ್ಷಣಗಳು ಮಾತ್ರ. ಮರುಕ್ಷಣದಲ್ಲಿ ನನಗಿನ್ನು ಸುಡುಗಾಡ ಕರೆಯಿದೆ"ಎಂದ.

"ಸಲೀಂ ಅಪಶಬ್ದಗಳನ್ನು, ಅನಿಷ್ಟಗಳನ್ನು ನುಡಿಯಬೇಡ" —ಎಂದು ಅವನ ತುಟಿಯ ಮೇಲೆ ಕೈಯಿಟ್ಟು ಬಾಯಿ ಮುಚ್ಚಿದಳು. "ಹುಟ್ಟಿದ ಪ್ರತಿಯೊಂದೂ ಶೂನ್ಯದತ್ತ ಸಾಗುವುದನ್ನು ತಪ್ಪಿಸುವುದು ಅಸಾಧ್ಯ ಅನೂ" —ರಸಿಕತೆಯ ದನಿಯಲ್ಲಿ ವೇದಾಂತದ ಸುಳುಹಿತ್ತು.

"ಇಷ್ಟು ದಿವಸ ನಾನು ಹಾಡುತ್ತಿದೆ ನಿನಗೆ ಬುಲ್ ಬುಲ್ ಈಗ ನೀನಿಂದು ನನಗಾಗಿ ಹಾಡಲಾರೆಯಾ ?" ಆ ದನಿಯಲ್ಲಿ ಪ್ರಾರ್ಥನೆಯಿತ್ತು.

"ಏನು ಹಾಡಲಿ ಸಲೀಂ, ಹಡಗು ಮುಳುಗುತ್ತಿದೆ. ಪ್ರಾಣಾಪಾಯ

ದಿಂದ ತಪ್ಪಿಸಿಕೊಳ್ಳುವುದು ಹೇಗೆಂಬ ವಿಚಾರದ ಹುಳು ಕೊರೆಯುತ್ತಿರುವಾಗ ಕೊರಲ ಕದ ಮುಚ್ಚಿದೆ—"ಬಿಕ್ಕುತ್ತ ಹೇಳಿದಳು.

"ಪ್ಲೀಸ್ ಅನೂ, ಇದೊಂದು ಪ್ರಾರ್ಥನೆ" ಎಂದು ಮತ್ತೆ ಅಂಗಲಾಚಿದ. ಅನೂ ಅಳುತ್ತಲೇ 'ಕರುಣಾಳು ಬಾ ಬೆಳಕೆ, ಮುಸುಕಿದೀ ಮಬ್ಬಿನಲ್ಲಿ ಕೈ ಹಿಡಿದು ನಡೆಸೆನ್ನನು'-ಎಂದು ಹಾಡುತ್ತಿರುವಾಗ ಸಲೀಮ ಕಣ್ಣು ಮುಚ್ಚಿದ. ಅನೂಗೆ ಗಾಬರಿಯಾಗಿ 'ಸಲೀಮ್, ಸಲೀಮ್'-ಎಂದು ಕೂಗಿವಳು. ಅವಳ ಕೂಗಿಗೆ ಮೆಲ್ಲನೆ ಕಣ್ಣು ಬಿಟ್ಟ. ಇನ್ನೂ ಅವನ ಮುಖದಲ್ಲಿ ನಗೆಯು ಹೊಳಪಿತ್ತು.

ಕತ್ತಲಾಯಿತು ಹೆಣ್ಣೆ
ಮತ್ತೆ ಉದಯಿಸಿ ಬರುವೆ
ಪ್ರಮುದಳನು ಕರೆತರಲು
ಮುತ್ತಿಡುವೆನೊಮ್ಮೆ'—ಎಂದೇ ಹಾಡಿನ ದಾಟಿಯಲ್ಲಿ ಹೇಳಿದ. ಶೂಲದಂತಿರಿದ ದುಃಖವಾದರೂ ಎದ್ದು ಹೋಗಿ ಪ್ರಮುದಳನ್ನು ಎಬ್ಬಿಸಿಕೊಂಡು ಬಂದಳು.

ಸಲೀಮ್ ಒಂದು ಕೈಯಿಂದ ಪ್ರಮುದಳನ್ನು, ಮತ್ತೊಂದು ಕೈಯಿಂದ ಅನೂಳನ್ನು ಬರಸೆಳೆದು ಬಿಗಿದಪ್ಪಿ, ನುಡಿದ—'ಅನೂ ನನ್ನ ಪಯಣ ಮುಗಿಯಿತು. ನಾಳೆಗೆ ನಾನು ಕಥೆ. ಪ್ರಮಿಯ ಭವಿಷ್ಯತ್ತು ನಿನ್ನ ಕೈಲಿದೆ. ಅದು ನನ್ನ ಕಾಣಿಕೆ ನಿನಗೆ. ಜೋಪಾನವಾಗಿರಿಸು ಬರುತ್ತೇನೆ' ಎಂದು ಹೇಳುತ್ತಿರುವಂತೆ ತೇಲುಗಣ್ಣು ಹಾಕಿದ.

"ಸಲೀಂ—ಗಟ್ಟಿಯಾಗಿ ಕಿರುಚಿದಳು. ನಮ್ಮಿಬ್ಬರನ್ನು ಯಾರೂ ಬೇರೆ ಮಾಡಲಾರರು. ಸಾವು ನಮ್ಮನ್ನು ಬೇರೆ ಬೇರೆಯಾಗಿ ಕಡಿಯದು. ಸತ್ತರೂ ಇಬ್ಬರೂ ಒಟ್ಟಿಗೇ ಸಾಯೋಣವೆಂದಿರಲಿಲ್ಲವೇ ?....ನಾನೂ ಬರುತ್ತೇನೆ" ಎಂದು ಬಿಕ್ಕಿ ಬಿಕ್ಕಿ ಅತ್ತಳು. 'ಅದೂ ವಿಧಿಗೆ ಇಷ್ಟವಿಲ್ಲ. ಸಾವಿಗೂ

ಅಸೂಯೆ ನಮ್ಮ ಒಲವಿನ ಬದುಕನ್ನು ಕಂಡು....ಈ ದೊಡ್ಡ ಪ್ರಪಂಚದಲ್ಲಿ ಪ್ರಮಿ ತಾಯಿಯ ನೆರಳಿಲ್ಲದೆ ಬಾಡಿ ಹುಡಿಗೂಡುವುದೇ ಇಷ್ಟವೇ ?' ನೀನೇ ಯೋಚಿಸೆಂದು ಕಣ್ಮುಚ್ಚಿದ.

ಹೊರಗೆ ಮಳೆ ಬರುತ್ತಲೇ ಇತ್ತು........

ಇಂತಹದೇ ಮಳೆ. ಸೂಜಿ ಸಾವಿರ ಚುಚ್ಚಿದಂತೆ ನೋವಾಯಿತು. ಹೊರಗೆ ಬಾಗಿಲು ಬಡಿದ ಶಬ್ದವಾಯಿತು. ಕಣ್ಣೊರೆಸಿಕೊಂಡು ಹೋಗಿ ಬಾಗಿಲು ತೆರೆದಳು. ಪ್ರಮದಾ ಕಾರಿನಿಂದ ಇಳಿದು 'ಅಮ್ಮಾ' ಎಂದು ಬೆಸೆದುಕೊಂಡಳು. 'ಅಮ್ಮಾ ಇವರು ನಮ್ಮ ಪ್ರಿನ್ಸಿಪಾಲರು. ತುಂಬಾ ಹೊತ್ತಾದರೂ ಮಳೆ ನಿಲ್ಲಲಿಲ್ಲ. ಮಳೆಯಲ್ಲಿ ಬಂದರೆ ನೀನು ಬೈಯ್ಯುತ್ತೀಯಾಂತ ತುಂಬಾ ಹೊತ್ತು ಕಾದೆ. ನಿಲ್ಲಲೇ ಇಲ್ಲ. ನನ್ನ ಗೆಳೆಯರೆಲ್ಲ ಹೊರಟುಹೋದರು. ಅವರ ಡ್ಯಾಡಿಯರು ಬಂದು ಕರ್‍ಕೊಂಡು ಹೋದರು. ನಾನೊಬ್ಬಳೇ ಆಗಿಬಿಟ್ಟೆ. ಇನ್ನೇನು ನಾನು ಬಂದುಬಿಡೋಣಾಂತ ಆಚೆಗೆ ಬಂದೆ. ನಮ್ಮ ಸಾರ್ 'ಇನ್ನೂ ಹೋಗಲಿಲ್ವಾ ಪ್ರಮದಾ ?–'ಅಂತ ಕೇಳಿದರು. 'ಇಲ್ಲಾ ಸಾರ್ ಮಳೆ ಬರ್‍ತಿದೆ' ಅಂದೆ. ಅದಕ್ಕವರು ಹಾಗಾದರೆ ಬಾ ನಂ ಜೊತೆ. ನಿಮ್ಮ ಮನೆ ಗುರುತು ಹೇಳು, ಕರೆದುಕೊಂಡು ಹೋಗಿಬಿಡ್ತೀನೆಂದ್ರು. ಅದಕ್ಕೆ ಅವರ ಜೊತೆ ಬಂದುಬಿಟ್ಟೆ–ಎಂದಳು. 'ಬರ್‍ತೀನಿ ಪ್ರಮದಾ, ಟಾ ಟಾ ! ಎಂದು ಕೈ ಬೀಸಿ ಕಾರು ಹತ್ತಲು ಹೋದಾಗ, ಇಷ್ಟುಹೊತ್ತಾದರೂ ಅವರನ್ನು ಒಳಗೆ ಕರೆಯದೆ ಅಸಭ್ಯತೆಯಿಂದ ನಿಂತ ತನ್ನ ಬಗ್ಗೆ ತೀರಾ ಕೆಡುಕೆನಿಸಿತು. 'ತುಂಬಾ ಉಪಕಾರವಾಯ್ತು ಸಾರ್. ನೀವು ಕರೆತಂದು ಬಿಡದಿದ್ರೆ ಬಹುಶಃ ಕತ್ತಲಾದರೂ ಮನೆ ಸೇರುತ್ತಿರಲಿಲ್ಲವೇನೋ ?– ಒಳಗೆ ಬನ್ನಿ ಸಾರ್. ಒಂದು ನಿಮಿಷ ಕೂತು ಹೋಗಬಹುದಲ್ಲ ?–'ಪ್ರಾರ್ಥನೆಯ ದನಿಯಲ್ಲಿ ಹೇಳಿದಳು.

ಇಲ್ಲಮ್ಮ ಇನ್ನೊಮ್ಮೆ ಎಂದಾದರೂ ಬರುತ್ತೇನೆ. ಈಗ ಹೊತ್ತಾಯ್ತು ತಮ್ಮ ಇನ್ವಿಟೇಷನ್‌ಗೆ ಧನ್ಯವಾದ—ಎಂದು ಮತ್ತೊಮ್ಮೆ ಪ್ರಮದಳತ್ತ ಮುಗುಳ್ನಗೆ ಬೀರಿ ಕಾರು ಸ್ಟಾರ್ಟ್ ಮಾಡಿದ.

೦ ೦ ೦ ೦

ಪ್ರಮದಳೇ ಈಗ ಅವಳ ಬದುಕಿನ ಆಕರ್ಷಣೆ. ಬದುಕುವ ಆಸೆಯಿಲ್ಲ ವಾದರೂ ಸಲೀಮನ ಪ್ರಾರ್ಥನೆಯಂತೆ ಅವಳಿಗಾಗಿ ಬದುಕಲು ನಿರ್ಧರಿಸಿದ್ದಳು.

ಮುಖರ್ಜಿಯವರು ತಮ್ಮ ಆಫೀಸಿನಲ್ಲೇ ಆಕೆಗೊಂದು ಕೆಲಸ ಕೊಡಿಸಿದ್ದರು. ಅವರಿಬ್ಬರ ಪೋಷಣೆಗೆ ತೊಂದರೆಯಿಲ್ಲವಾಗಿತ್ತು. ಆಗಾಗ ಮುಖರ್ಜಿಯವರು, ಅವರ ಕುಟುಂಬ, ಬಂದು ಯೋಗಕ್ಷೇಮವನ್ನು ವಿಚಾರಿಸಿಕೊಂಡು ಹೋಗುತ್ತಿದ್ದರು. ಅವರ ಸಹಾಯ ಮುಳುಗುವವರಿಗೊಂದು ದಡ ಸಿಕ್ಕಹಾಗಿತ್ತು. ಏನೊಂದು ಸಮಸ್ಯೆ ಬರಲಿ ಮುಖರ್ಜಿಯವರ ಸಲಹೆಯಂತೆ ನಡೆಯುತ್ತಿದ್ದಳು.

ಮುಖರ್ಜಿಯವರಿಗೆ ಅನುಪಮಾಳ ಬದುಕಿಗೊದಗಿದ ಆಘಾತದ ನೆನಪೂ ಜರ್ಝರಿತರನ್ನಾಗಿ ಮಾಡುತ್ತಿತು. ಅವರ ಸಹಾನುಭೂತಿ, ಅನುಕಂಪಗಳಿಗೆ ಕೊನೆಯಿರಲಿಲ್ಲ. ಸ್ವಂತ ತಂಗಿಗಿಂತಲೂ ಹೆಚ್ಚಿನ ಗಮನದಿಂದ ನೋಡಿಕೊಳ್ಳುತ್ತಿದ್ದರು. ಅವರ ದೃಷ್ಟಿಯಲ್ಲಿ ತುಂಬಿದ ಜೇನುಗೂಡು ಒಡೆದು ಮಣ್ಣಲ್ಲಿ ಬೆರೆತಂತಾಗಿತ್ತು. ಅವಳ ಅಸಹಾಯಕ ಬದುಕಿಗೊಂದು ಆಶ್ರಯ ಕಲ್ಪಿಸುವ ಮನಸಿದ್ದರೂ, ಸಲೀಮನೊಂದಿಗೆ ಬಾಳ್ವೆ ನಡೆಸಿದ ಯಾವ ಹೆಣ್ಣೂ ಇನ್ನೊಬ್ಬ ಗಂಡಸನ್ನು ಅಷ್ಟು ಸುಲಭವಾಗಿ ಸ್ವೀಕರಿಸಲಾರಳು. ಮರುಮದುವೆಗೆ ಒಪ್ಪುವುದಾದರೆ ಮುಖರ್ಜಿಯವರು ತಮಗೆ ತಿಳಿದವರಲ್ಲಿ ಯಾರನ್ನಾದರೂ ಪ್ರಯತ್ನಿಸುತ್ತಿದ್ದರು. ಆದರೆ 'ಮದುವೆಯ ಪ್ರಸ್ತಾಪವೇ, —ಮೊದಲೇ ಘಾಯಗೊಂಡ ಮನಸ್ಸಿಗೆ ಬರೆ ಎಳೆದಂತಾಗಬಹುದೆಂದು ಸುಮ್ಮನಿದ್ದರು.

ಮುಖರ್ಜಿಯವರ ಮಡದಿ ಸುನೀತಾದೇವಿಯಂತೂ ಸ್ವಂತ ತನ್ನ ತಂಗಿಯಂತೆಯೇ ಅನುಪಮಳನ್ನು ಭಾವಿಸಿಕೊಂಡು ನೋಡಿಕೊಳ್ಳುತ್ತಿದ್ದರು. ಪ್ರಮದಾಗೆ ಬುದ್ಧಿ ತಿಳಿದಂದಿನಿಂದ 'ಸುನ್ನಿ ಆಂಟಿ'ಯೆಂದರೆ ಪ್ರಾಣ ಬಿಡು

ತ್ತಿದ್ದಳು. ಅವರ ಮಕ್ಕಳ ಜೊತೆ ಆಟಕ್ಕೆ ಬಿದ್ದರೆ, ಅವಳಿಗೆ ಮನೆಗೆ ಬರುವುದಕ್ಕೇ ಮನಸ್ಸು ಬರುತ್ತಿರಲಿಲ್ಲ.

ಮೊದಲ ಬಾರಿಗೆ ಪ್ರಮುದಾ ರಜದಲ್ಲಿ ಅವರ ಮನೆಯಲ್ಲೇ ಇದ್ದಳು. ಅನೂಳಿಗೆ ಮನೆ ಭಯಂಕರ ಸ್ಮಶಾನದಂತೆನಿಸಿತ್ತು. ಒಂಟಿ ಪಿಶಾಚಿಯ ಬದುಕಿನ ಏಕಾಂತತೆಯನ್ನು ಕೆಡಿಸುತ್ತಿದ್ದುದೆಂದರೆ ಅರ್ಥವಿಲ್ಲದ ಆಲೋಚನೆಗಳು. ಕಳೆದ ದಿನಗಳ ಸಿಹಿ ನೆನಪುಗಳು, ಅವಳೆದೆಯಲ್ಲಿ ಪಳೆಯುಳಿಕೆಗಳಂತೆ ಉಳಿದವು. ತನಗೆ ತಾನೇ ಹುಚ್ಚುಚ್ಚಾಗಿ ಮಾತಾಡಿಕೊಳ್ಳುತ್ತಿದ್ದಳು. 'ಸಲೀಂ, ಸಲೀಂ' ಎಂದು ಚೀರಿಡುತ್ತಿದ್ದಳು.

ಪ್ರಮುದಳು ಜೊತೆಗಿದ್ದರೆ ಏಕಾಕಿತನದ ಬೇಸರವಿರುತ್ತಿರಲಿಲ್ಲ. ಅವಳಾಟ ಪಾಟ-ಮುದ್ದು ಮಾತುಗಳು ಭಯಂಕರ ಶೂನ್ಯತೆಯನ್ನು ಸೀಳಿ ಸರಿಸಿ ಉಲ್ಲಾಸದ ಸೌರಭವನ್ನು ಪಸರಿಸುತ್ತಿತ್ತು. ಅವಳ ನಗುವಿನ ಅಲೆಗಳು ಸಂಗೀತದ ಗುಂಜಾರವದಂತಿರುತ್ತಿತ್ತು. ಎರಡು ದಿನ ಕಳೆಯುವುದೂ ಅವಳಿಗೆ ಅಸಾಧ್ಯವಾಯಿತು ಮುಖರ್ಜಿಯವರಿಗೆ ಫೋನ್ ಮಾಡಿ ಪ್ರಮುದಳನ್ನು ಕರೆಸಿಕೊಂಡಳು. ಅವಳು ಅಲ್ಲಿಗೆ ಬರುವುದಿಲ್ಲವೆಂದು ಒಂದೇ ಸಮನೆ ಹಟ ಹಿಡಿದಳು. ಆದರೆ ಮುಖರ್ಜಿಯವರೇ ಒತ್ತಾಯಪಡಿಸಿ ಮನೆಗೆ ಕರೆದುತಂದು ಬಿಟ್ಟರು. ಮನೆಗೆ ಬರುತ್ತಿದ್ದಂತೆಯೇ ಪ್ರಮುದಾ ಉಮ್ಮಳದಿಂದ 'ಏನಮ್ಮಾ, ಆಂಟೀ ಮನೆಯಲ್ಲಿ ಇರೋಕೆ ಬಿಡೊಲ್ಲ. ಅಲ್ಲಿ ಬಾಬು, ಲಲ್ಲಿಎಲ್ಲಾ ಇದ್ದಾರೆ. ಆಡೋಕೆ ಇಲ್ಯಾರಿದ್ದಾರೆ ? ನನಗೆ ಬೇಜಾರಾಗುತ್ತಮ್ಮ ಇಲ್ಲಿ-ಎಂದು ಅಳುವಂತೆ ಮುಖ ಮಾಡಿದಳು.

"ಪ್ರಮಿ ಹಾಗಾದರೆ ನಾನು ನಿನಗೆ ಬೇಡವಾದೆನೇ?-ಎಂದು ಸಪ್ಪಗಿನ" ಮುಖ ಹಾಕಿಕೊಂಡು ಕೇಳಿದಳು.

"ಹಾಗೆಲ್ಲಾ ಮಾತಾಡಬಾರದು ಮರಿ. ಅಮ್ಮನ ಮನಸ್ಸಿಗೆ ನೋವಾಗುತ್ತೆ"-ಎಂದರು ಮುಖರ್ಜಿ.

"ಸಾರಿ ಅಮ್ಮ. ನಮ್ಮ ಟೀಚರ್ ಹೇಳಿದ್ದರು. ಯಾರಿಗಾದರೂ ನೋವು

ಮಾಡಿದರೆ ಜೀಸಸ್‌ಗೆ ಕೋಪ ಬರುತ್ತಂತೆ, ನಮ್ಮನ್ನು ಕ್ಷಮಿಸೋಲ್ವಂತೆ' ಎಂದಳು.

'ಸರಿ ಆಯ್ತು. ಇನ್ಮೇಲೆ ಹಾಗೆಲ್ಲ ಮಾತಾಡಬೇಡ' ಎಂದು ಅವಳಿಗೆ ತಿಳಿಸಿ ಹೇಳಿದ್ದಳು.

ಬರಬರುತ್ತಾ ಒಂಟಿತನದ ಬದುಕಿಗೆ ಹೊಂದಿಕೊಳ್ಳತೊಡಗಿದಳು. ಬೆಳಗ್ಗೆ ಪ್ರಮುದಳನ್ನು ಸ್ಕೂಲಿಗೆ ಕಳಿಸಿ, ತಾನೂ ಊಟ ಮಾಡಿ ಕೆಲಸಕ್ಕೆ ಹೊರಟು ಹೋಗುತ್ತಿದ್ದಳು. ಪ್ರಮುದಳ ಶಾಲೆ ಬೇಗ ಮುಗಿಯುತ್ತಿತ್ತು. ಅವಳು ಹಿಂತಿರುಗಿ ಪಕ್ಕದ ಮನೆಯ ಲಲಿತಮ್ಮನ ಮನೆಯಲ್ಲಿ ಅವರ ಮಗಳು ಪದ್ಮಿಯ ಜೊತೆಗೆ ಅನುಪಮಾ ಕೆಲಸದಿಂದ ಹಿಂದಿರುಗಿ ಬರುವವರೆಗೂ ಆಡಿ ಕೊಂಡಿರುತ್ತಿದ್ದಳು. ಅನುಪಮಾ ಬಂದು ಪ್ರಮುದಳನ್ನು ಅವರ ಮನೆಯಿಂದ ಕರೆತರುತ್ತಿದ್ದಳು. ಅವಳಿಗೆ ಹಾಲು ಕೊಟ್ಟು, ತಾನು ಕಾಫಿ ಕುಡಿದು ರಾತ್ರಿಯ ಅಡುಗೆ ಕೆಲಸಕ್ಕೆ ಇಳಿಯುತ್ತಿದ್ದಳು.

ಹೆಜ್ಜೆ ಹೆಜ್ಜೆಗೆ 'ಪ್ರಮಿ' ತಾಯಿಗೆ ಸಹಾಯ ಮಾಡುತ್ತೇನೆಂದು ಬರುತ್ತಿದ್ದಳು. ಅನೂಳಿಗೆ ಅವಳ ಆ ಮಾತಿಗೇ ಹಿಗ್ಗೆನಿಸುತ್ತಿತ್ತು.

o o o o

ಭಾನುವಾರ ಮುಖರ್ಜಿಯವರ ಮನೆಯಲ್ಲಿ ಒಂದು ಸಣ್ಣ ಪಾರ್ಟಿ. ಮುಖರ್ಜಿಯ ತಮ್ಮ ಸೋಮನಾಥ್ ಒಂದೆರಡು ತಿಂಗಳಿಗಾಗಿ ಇಂಡಿಯಾಕ್ಕೆ ಬಂದಿದ್ದಾನೆ. ಅಮೆರಿಕಾದಲ್ಲಿ 'ಮೆಡಿಸಿನ್' ನಲ್ಲಿ ಹೆಚ್ಚಿನ ವಿದ್ಯಾಭ್ಯಾಸ ಮಾಡುತ್ತಿದ್ದಾನೆ. ಅಲ್ಲಿಗೆ ಹೋಗಿ ಮೂರು ವರ್ಷಗಳಾದರೂ ಇಂಡಿಯಾಕ್ಕೆ ಬಂದಿರಲಿಲ್ಲ. ಅಪ್ಪ ಅಮ್ಮ, ಅಣ್ಣ ಅತ್ತಿಗೆಯರನ್ನು ನೋಡಿಕೊಂಡು ಹೋಗೋಣವೆನಿಸಿ ಬಂದಿದ್ದಾನೆ. ಅಣ್ಣನ ಮನೆಯಲ್ಲಿ ಒಂದೆರಡು ದಿನವಿದ್ದು ಕಲ್ಕತ್ತೆಗೆ ಹೋಗುವುದಾಗಿ ಅಂದುಕೊಂಡಿದ್ದ. ಅಣ್ಣನ ಒತ್ತಾಯಕ್ಕೆ ಒಂದುವಾರ ಅಣ್ಣನ ಮನೆಯಲ್ಲಿ ಉಳಿದ.

ತಮ್ಮನನ್ನು ಕಳಿಸಿಕೊಡುವುದಕ್ಕೆ ಮುಂಚೆ ಒಂದು ಸಂತೋಷಕೂಟವನ್ನು

ಏರ್ಪಡಿಸಿ ಅನುಪಮಾಳನ್ನು ಕರೆಯೋಣವೆನಿಸಿತ್ತು. ಎಷ್ಟು ಸಲ ಮನೆಗೆ ಕರೆಯುತ್ತಿದ್ದರೂ ಅವಳು ಬರುವುದೇ ಅಪರೂಪ. ಈ ನೆವದಿಂದಲಾದರೂ ಬಂದಾಳೆಂದುಕೊಂಡರು. ಮುಖರ್ಜಿಯವರ ಒತ್ತಾಯಕ್ಕೆ ಕಟ್ಟುಬಿದ್ದು 'ಅನೂ'ಳಿಗೆ ಹೋಗಲೇಬೇಕಾಯಿತು. ಪ್ರಮಿಯ ಸಂತೋಷ ಹೇಳತೀರದು. ಆಂಟಿಯ ಮನೆಗೆ ಹೋಗುವುದೆಂದರೆ ಸ್ವರ್ಗ ಸಿಕ್ಕಂಗೆ. ಅದೂ ಜೊತೆಗೆ ಅಮ್ಮ ಬರುತ್ತಿದ್ದಾಳೆ. ಅವಳಿಗೆಷ್ಟೋ ಸಮಾಧಾನ.

ಮುಖರ್ಜಿಯವರು ಡ್ರೈವರನನ್ನು ಅನೂಳ ಮನೆಗೆ ಕಳಿಸಿ ಅವಳನ್ನು ಕರೆತರಲು ಹೇಳಿದ್ದರು. ನಾಲ್ಕು ಗಂಟೆಗೆ ಸರಿಯಾಗಿ ಡ್ರೈವರನು ಬಂದು ಇವರನ್ನು ಕಾರಿನಲ್ಲಿ ಕರೆದೊಯ್ದ. ಕಾರಿನಲ್ಲಿ ಹೋಗುವುದು ಪ್ರಮದಳಿಗೆ ಪ್ರಾಣ. 'ಅಮ್ಮ ಕಾರಿನಲ್ಲಿ ಹೋಗೋಕೆ ಎಷ್ಟು ಚೆನ್ನಾಗಿರುತ್ತೆ ಅಲ್ವಾ ?' –ಅಂದಳು ಮುಗ್ಧ ಕುತೂಹಲದಿಂದ.

ಅನುಪಮಾ ಉತ್ತರ ಕೊಡಲಿಲ್ಲ. ಪ್ರಮದಾ ಕಾರಿನ ಕನ್ನಡಿಯಲ್ಲಿ ಪ್ರತಿಬಿಂಬಿತವಾದ ತಾಯಿಯ ಮುಖವನ್ನು ನೋಡಿದಳು, ಆ ಮುಖದಲ್ಲಿ ಅಷ್ಟಾಗಿ ಗೆಲುವಿದ್ದಂತೆ ಕಾಣಲಿಲ್ಲ. ಅಮ್ಮನಿಗೆ ಬೇಜಾರಾಗಿದೆಯೆಂದು ತಾನೂ ಗಂಭೀರವಾಗಿ ಕುಳಿತಳು.

ಹತ್ತು ನಿಮಿಷಗಳಲ್ಲಿ ಮುಖರ್ಜಿಯವರ ಮನೆ ಸೇರಿದರು. ಸುನೀತಾದೇವಿ ನಗುನಗುತ್ತಾ ಎದುರು ಬಂದು 'ಬಾ ಅನುಪಮಾ. ನೀನು ಬರುತ್ತೀಯೋ ಇಲ್ಲವೋ ಎಂದುಕೊಂಡಿದ್ದೆ. ಸದ್ಯ ಬಂದೆಯಲ್ಲ !'

'ಅದೇನತ್ತಿಗೆ ನೀವು ಕರೆದಾಗ ನಾನು ಬರುವುದಿಲ್ಲವೇ?' ಎಂದು ನಗುತ್ತಲೇ ಉತ್ತರಿಸಿದಳು.

'ಹೋಗಲಿ ಅಷ್ಟಾದರೂ ಅಭಿಮಾನ ಇಟ್ಟುಕೊಂಡಿದ್ದೀಯಲ್ಲ' ಎಂದು ಹೇಳಿ- ಗೆಳೆಯರೆಲ್ಲ ಸೇರಿದ್ದ ಕಡೆಗೆ ಕರೆದೊಯ್ದಳು. ಖಾಲಿಯಾಗಿದ್ದ ಕುರ್ಚಿಯಲ್ಲಿ ಕುಳಿತಳು. 'ಪ್ರಮಿ' ಗೆಳೆಯರ ಜೊತೆಗೆ ಆಡಲು ಹೊರಟುಹೋದಳು.

ಮುಖರ್ಜಿಯವರು ಅಲ್ಲಿ ನೆರೆದಿದ್ದ ಗೆಳೆಯರ ಪರಸ್ಪರ ಪರಿಚಯ

ಮಾಡಿಸಿದರು. ಬಂದಿದ್ದವರು ಕೇವಲ ಎಂಟು ಮಂದಿ ಮಾತ್ರ, ಅದರಲ್ಲಿ ಮುಖರ್ಜಿಯ ಆಫೀಸಿನಿಂದ ಮೂವರು, ಬಂಧುಗಳಿಬ್ಬರು ಮತ್ತೆ ಪ್ರಮದಳ ಸ್ಕೂಲಿನ ಪ್ರಿನ್ಸಿಪಾಲರು, ಅನುಪಮಾಗೆ ಪ್ರಿನ್ಸಿಪಾಲರ ಪರಿಚಯ ಮಾಡಿಸುತ್ತಿದಂತೆ ಆಕೆಗೆ ಥಟ್ಟನೆ ತನ್ನ ಮಗಳನ್ನು ಸುರಿಮಳೆಯಲ್ಲಿ ಕಾರಲ್ಲಿ ಕರೆತಂದ ವ್ಯಕ್ತಿಯ ಮುಖ ನೆನಪಿಗೆ ಬಂತು. ಪರಸ್ಪರ ಕುಶಲ ಪ್ರಶ್ನೆಗಳಾದವು. ಪ್ರಮದಳೆಲ್ಲೆಂದು ವಿಚಾರಿಸಿದರು? 'ಇಲ್ಲೇ ಹೊರಗೆ ಗೆಳೆಯರೊಂದಿಗೆ ಆಡಲು ಹೋಗಿದ್ದಾಳೆ... ನೀವು ಆ ದಿನ ಎಂದಾದರೂ ಬರತ್ತೇನೆಂದು ಹೇಳಿದವರು ಬರಲೇ ಇಲ್ಲ—' ಆಕ್ಷೇಪಿಸಿದಳು ಅನುಪಮಾ.

ಮುಖರ್ಜಿಯವರು 'ನಿನಗೆ ಇವರ ಪರಿಚಯವಿತ್ತೇನು ಅನು?—ಎಂದು ಪ್ರಶ್ನಿಸಿದ್ದಕ್ಕೆ ಮಗಳನ್ನು ಮಳೆಯಲ್ಲಿ ಕಾರಲ್ಲಿ ತಂದುಬಿಟ್ಟ ಸಂಗತಿಯನ್ನು ವಿವರಿಸಿದಳು.

'ದಟ್ ಈಸ್ ಗುಡ್' — ಎಂದು ಮುಖರ್ಜಿಯವರು ನಕ್ಕು, ಅನೂಳನ್ನು ಕರೆದು, 'ತಮ್ಮ' ಸೋಮನಾಥನಿಗೆ ಪರಿಚಯ ಮಾಡಿಸಿದರು.

ಕಾಂತಿಹೀನ ಕಣ್ಣುಗಳು ಜಗ್ಗನೆ ಬೆಳಗಿದವು. ಆದರೆ ನಿರ್ವಿಕಾರ ಮನಸ್ಸಿನಿಂದ ಅವನನ್ನು ದಿಟ್ಟಿಸಿ ನೋಡಿದಳು. ಸೋಮನಾಥನೂ ಆಕೆಯ ನೋಟದ ಅರ್ಥವೇನೆಂದುಕೊಳ್ಳಲಾರದೆ ತಡವರಿಸಿದ.

ನಿಟ್ಟುಸಿರಿನೊಂದಿಗೆ ದೃಷ್ಟಿ ಬದಲಿಸಿದಳು.

'ಕ್ಷಮಿಸಿ, ಅತ್ತಿಗೆಗೆ ಸ್ವಲ್ಪ ಸಹಾಯ ಮಾಡಿ ಬರುತ್ತೇನೆ—' ಎಂದು ಎದ್ದು ಹೋದಳು. ತನ್ನ ಮನೆಯಷ್ಟೇ ಸ್ವತಂತ್ರವಾಗಿ ಓಡಾಡಿದಳು, ಬಂದ ಅತಿಥಿಗಳಿಗೆಲ್ಲಾ ಸಿಹಿ-ಖಾರದ ತಿಂಡಿಗಳಾದವು. ಮತ್ತೆ ಚಹಾ, ಅದಾದ ನಂತರ ಸ್ವಲ್ಪ ಮಾತುಕತೆ, ಹರಟೆ.

7 ಗಂಟೆಯಾಗಲಿತ್ತು. ಆಹ್ವಾನಿತರೆಲ್ಲ ಸೋಮನಾಥನಿಗೆ ಶುಭಾಶಯಗಳನ್ನು, ವಿಧ್ಯಾಭ್ಯಾಸದ ಯಶಸ್ಸನ್ನು ಕೋರಿ, ಹರಸಿ ಹೊರಟರು.

ಅನೂಳು ಹೊರಡುತ್ತೇನೆಂದಳು. ಆವರೆ ದಂಪತಿಗಳು ಒತ್ತಾಯಪಡಿಸಿ ಆ ದಿನ ಅಲ್ಲೇ ಅವರನ್ನು ಉಳಿಸಿಕೊಂಡರು. ಬೆಳಗೆದ್ದ ಕೂಡಲೇ ಕಳಿಸಿ ಕೊಡಬೇಕೆಂದು ಶರತ್ತು ಹಾಕಿ ಅವರ ಮನೆಯಲ್ಲಿ ಆ ರಾತ್ರಿ ಉಳಿದುಕೊಂಡಳು. ಪ್ರಮದಳ ಸಂಭ್ರಮಕ್ಕೆ ಎಲ್ಲೆ ಇಲ್ಲವಾಯಿತು ಸುದ್ದಿಯಿಂದ.

o o o o

ಸೋಮನಾಥ ಕಲ್ಕತ್ತಾದಿಂದ ಅನೂಳಿಗೆ ಕಾಗದ ಬರೆದಿದ್ದ. ಅಣ್ಣನಿಂದ ವಿಷಯವೆಲ್ಲಾ ತಿಳಿದಂತೆಯೂ ಅದನ್ನು ತಾಯಿಗೆ ಹೇಳಿದಾಗ ಆಕೆಯೂ ಸಂತೋಷ ಪಟ್ಟಳೆಂದೂ, ಒಪ್ಪುವುಧಾದರೆ ತಾನು ಮದುವೆಯಾಗಲೂ ಸಿದ್ಧವಾಗಿರುವನೆಂದೂ ಬರೆದಿದ್ದ.

ಅದನ್ನು ಓದಿ ಅವಳಿಗೆ ಮೊದಲು ಕಸಿವಿಸಿಯಾಯಿತು. ಆದರೆ ತನ್ನ ವಿಷಯವೆಲ್ಲ ತಿಳಿದೂ ಮದುವೆಯಾಗಲು ಮುಂದೆ ಬರುವ ಈತನ ಔದಾರ್ಯ ದೊಡ್ಡದೆನ್ನುವುದು ನಿಜವೇ ಆದರೂ ಸಲೀಮನ ಜಾಗಕ್ಕೆ ಇನ್ನೊಬ್ಬರನ್ನು ಬರಮಾಡಿಕೊಳ್ಳಲು ಅವಳ ಮನಸ್ಸು ಕೂಡಲೇ ಒಪ್ಪದಾಯಿತು. ಮುಖರ್ಜಿಯವರ ಸೂಚನೆಯನ್ನೂ ಒಂದೆರಡು ಬಾರಿ ನಿರ್ಲಕ್ಷಿಸಿದ್ದಳು. ಆದರೆ ಈಗ ಮತ್ತೆ ಅದೇ... ಅದೇ... ಸೂಚನೆಗಳು ಮೇಲಿಂದಮೇಲೆ ಬರುತ್ತಿವೆ...... ರಾತ್ರಿಯೆಲ್ಲಾ ನಿದ್ದೆಗೆಟ್ಟು ಹೊರಳಾಡಿದಳು. ತಲೆಗೆಟ್ಟು ಯೋಚಿಸಿದಳು. ಕತ್ತಲು ಹಾದಿಯಲ್ಲಿ ಬೆಳಕೇ ಕಾಣಲಿಲ್ಲ. ನನ್ನ ಸ್ವಾರ್ಥಕ್ಕೆ ನಾನು ಒಪ್ಪಿದರೆ ಸಲೀಮನ ಮನಸ್ಸಿಗೆ ನೋವಾಗುವುದಿಲ್ಲವೆ ? ಸಲೀಮ ಸುಖಕ್ಕಾಗಿ ಅರಸುತ್ತಿದ್ದ. ಸುಂದರ ಸುಖಕ್ಕಾಗಿಯೇ ಅವನು ಬಾಳಿದ್ದ. ಇವತ್ತಿನ ಅರಳಿನಿಂತ ಹೂಗಳು ನಾಳೆಗೆ ಬಾಡುವುದೆಂದು ಅವನು ಅರಳಿ ನಿಂತ ಹೂ ಬದುಕನ್ನು ಗಟ್ಟಿಯಾಗಿ ಅಪ್ಪಿದ್ದ. ನನ್ನ ಸುಖಕ್ಕಾಗಿ ಅವನು ಬಳಲಿದ್ದ, ಅಳಲಿದ್ದ. ಸಾಯುವಾಗ ಅನೂ ನಿನ್ನ ಬಾಳನ್ನು ಗೋಳು ಮಾಡಿಕೊಳ್ಳಬೇಡ. ಸುವರ್ಣ ಸಂಜೆಗಳು ಸಿಕ್ಕಾಗ ರಾತ್ರೆಗಳನ್ನು ಕರೆಯಬೇಡ' —ಎಂದಿದ್ದ. ಇದರರ್ಥವೇನೆಂದು ತಿಳಿಯುವುದು ? ಸೋಮನಾಥ ಸುವರ್ಣ ಸಂಜೆಯೇ ?—ಬಾಡಿ ಬಿದ್ದ ನನ್ನ ಬದುಕಿನ 'ನೆನ್ನೆ'ಯನ್ನು 'ಇಂದಾ'ಗಿ ಅರಳಿಸುತ್ತಾನೆಯೆ ?

ಅವಳ ಕಣ್ಮುಂದೆ ಏನೂ ಕಾಣಲಿಲ್ಲ. ದೊಡ್ಡ ಕಂದರವೊಂದು ಮಾತ್ರವೇ ಮೃತ್ಯುವಿನ ಬಾಯಂತೆ ತೆರೆದಿದೆ. ಇವಳದಕ್ಕೆ ತೀರಾ ಹತ್ತಿರದಲ್ಲಿ ದ್ದಾಳೆ. ಬಿದ್ದು ಸತ್ತರೆ ಎಲ್ಲಕ್ಕೂ ಪರಿಹಾರವೆಂದು ಬೀಳಲು ಬಗ್ಗಿದಳು. ಜಗ್ಗನೆ ಬೆಳಕು ಹೊತ್ತಿಕೊಂಡಿತು. ಅವಳನ್ನು ಎರಡು ಕೈಗಳು ತಬ್ಬಿಹಿಡಿದವು "ಅನೂ, ಇದೆಂಥ ಹುಚ್ಚು ಪ್ರಯತ್ನ? ನಿನ್ನ ಉಮರ್ ನೋಡು, ಇಲ್ಲಿ ನಿಂತಿ ದ್ದಾನೆ–ಎಂದಾಗ ಕಣ್ಣು ಬಿಟ್ಟಳು. "ನಾನೂ ನಿನ್ನ ಜೊತೆಗೇ ಬರುತ್ತೇನೆ, ಉಮರ್ ನನ್ನ ತಲೆ ಚಿಟ್ಟು ಹಿಡಿದಿದೆ. ಏನೊಂದೂ ದಾರಿ ಕಾಣುತ್ತಿಲ್ಲ– ಎಂದು ಅತ್ತಳು.

ನನಗೆ ಗೊತ್ತು ನಿನ್ನ ಸಮಸ್ಯೆ. ಸಾವು ಸಮಸ್ಯೆಗೆ ಪರಿಹಾರವಲ್ಲ. ಅಂಗೈ ಯಲ್ಲಿ ಅರಳಿದ ಸುಖದ ಸುವಾಸನೆಯಿರುವಾಗ ಅದನ್ನು ಹೊಲಸು ಮಾಡಿ ಕೊಳ್ಳುವುದು ಮೂರ್ಖತನ. ಏಳು ಅನೂ, ಕತ್ತಲೆ ಹಾದಿಯಲ್ಲಿ ಮಣಿ ದೀಪದ ಬೆಳಕಿದೆ. ಅಮಾವಾಸ್ಯೆಯ ಕಾರ್ಗತ್ತಲ ಗರ್ಭದಾಳದಿಂದ ಶರದ್ ಪೌರ್ಣಿ ಮೆಯ ಆ ಲೋಕವಿದೆ. ಮಧು ಭಾಂಡ ದೊಡಲು ಹೊಡೆದು ಮಧು ಮಣ್ಣಲಿ ಹರಿದಾಗ, ಯಾರ ಸುಖಕ್ಕೆ ಹೇಳು ? ನೀನು ನಗುತ್ತಿದ್ದರೆ, ಬದುಕಿ ನಲ್ಲಿ ನೂರು ಹುಣ್ಣಿಮೆಗಳು ಕರಗಿ ಹೊನಲಾದರೇ ನನಗ ಸಂತೋಷ." ಅಷ್ಟೆ ! ಅಷ್ಟೆ !! ಅಷ್ಟೆ !!!

ತಟ್ಟನೆ ಎದ್ದು ಸಾವರಿಸಿಕೊಂಡಳು. ಮನಸ್ಸು ನಿರ್ಧಾರದ ತುದಿ ಮುಟ್ಟಿತ್ತು. ಮುಖರ್ಜಿಯವರೊಂದಿಗೆ ಸಲಹೆ ಕೇಳುವುದೆಂದು ಅಂದು ಕೊಳ್ಳುತ್ತಿದ್ದಂತೆ, ಅನಿರೀಕ್ಷಿತವಾಗಿ ಮುಖರ್ಜಿಯವರ ಆಗಮನವಾಯಿತು.

ನಗು ಮುಖದಿಂದಲೇ ಸ್ವಾಗತಿಸಿದಳು. ಮುಖರ್ಜಿಯವರಿಗೆ ಅವಳ ಮುಖದಲ್ಲಿ ವಿಶೇಷ ಗೆಲುವಿದ್ದಂತೆನಿಸಿತು. ಕಾರಣ ಏನೆಂದು ಕೇಳುವ ಕುತೂಹಲವಾದರೂ, ಏನಾದರಾಗಲಿ ಸದ್ಯ ಸಂತೋಷದಿಂದ ಇದ್ದಾಳಲ್ಲ !- ಎಂದುಕೊಂಡು ಸುಮ್ಮನಾದರು.

ಮುಖರ್ಜಿಯವರು ಅವಳ ಮಾತಿಗೆ ಕಾಯದೆ ತಾವೇ ಒಂದು ಕುರ್ಚಿ ಎಳೆದುಕೊಂಡು ಕುಳಿತರು. ಅನೂ ಅವರಿಗೆದುರಾಗೇ ಕುಳಿತಳು.

"ಅನೂ ನಾನು ಯಾಕೆ ಬಂದೆ ಅಂತ ಗೊತ್ತಾ ?"

"ಇಲ್ಲ ಅಣ್ಣ. ನನಗೆ ಹೇಗೆ ಗೊತ್ತಾಗೋಕೆ ಸಾಧ್ಯ ?" ಎಂದು ಮರು ಪ್ರಶ್ನಿಸಿದಳು.

"ಅನೂ ಎಷ್ಟೋ ದಿವಸದಿಂದ ನಿನ್ನಲ್ಲಿ ಒಂದು ವಿಷಯ ಪ್ರಸ್ತಾಪಿಸ ಬೇಕೆಂದಿದ್ದೆ. ಆದರೆ ಧೈರ್ಯ ಬರಲಿಲ್ಲ. ಈಗ ಮೊಂಡು ಧೈರ್ಯದಿಂದ ಬಂದಿದ್ದೀನಿ. ನನ್ನ ಸೋಮು ಮತ್ತು ಅಮ್ಮ ಇಬ್ಬರಿಂದ ಉತ್ತರ ಬಂದಿದೆ ನೀನಿಚ್ಛೆಪಡುವುದಾದರೆ ಸೋಮು ನಿನ್ನನ್ನು ಮದುವೆಯಾಗುತ್ತಾನಂತೆ. ನಿನ್ನ ಕಥೆಯೆಲ್ಲ ಅವನಿಗೆ ಹೇಳಿದ್ದೆ. ಇಂತಹ ಹೃದಯಕ್ಕೆ ನೆಮ್ಮದಿ ಕೊಡಲು ಸಾಧ್ಯವಾದರೆ ನಾನು ಸಿದ್ಧ–ಹಳೆಯ ಗೊಡ್ಡು ವಿಚಾರಗಳಲ್ಲಿ ನನಗೆ ನಂಬಿಕೆ ಯಿಲ್ಲ. ಹೃದಯವಂತಿಕೆಯಿಂದ ಕೂಡಿದ ಒಂದು ಹೆಣ್ಣಾದರೆ ಸಾಕು. ಅದನ್ನು ಆಕೆಯಲ್ಲಿ ಕಂಡಿದ್ದೇನೆ. ಮೊದಲು ಅಮ್ಮ ವಿರೋಧಿಸಿದರೂ ನಿನಗೆ ಸಂತೋಷವಾಗುವುದಾದರೆ ಹಾಗೆ ಮಾಡು–ಎಂದಳಂತೆ" ಇದೆಲ್ಲಾ ಬರೆದಿದ್ದಾನೆ. ಏನು ಹೇಳುತ್ತಿ ಅನೂ?

"ಅಣ್ಣ ನಿಮಗಿಂತ ಶ್ರೇಯೋಭಿಲಾಷಿಗಳು ನನಗೆ ಬೇರೆ ಇಲ್ಲ. ನೀವು ದಾರಿ ತೋರಿಸಿದ ಕಡೆಗೆ ಸಾಗುತ್ತೇನೆ" ಎಂದಷ್ಟೇ ಸುಮ್ಮನಾದಳು.

ಅರಳಿದ ಕಣ್ಣುಗಳಿಂದ ಕೇಳಿದ "ಅನೂ ಇದು ನಿಜವೇ ?"—ಎಂದು.

ಅನುಪಮ ನಕ್ಕಳು. ಸೋಮನಾಥನಲ್ಲಿ ಸಲೀಮನನ್ನು ಕಂಡಳು. ಮೋಡಗಳು ಚದುರಿ ಮಳೆನಿಂತು ಆಕಾಶ ಶುಭ್ರವಾಗಿತ್ತು. ಶುಭ್ರ ನೀಲಾಕಾಶದಲ್ಲಿ ನಕ್ಷತ್ರ ರಾಜಿಯ ನಡುವಿನಿಂದ ಶಾರದ ಪೌರ್ಣಿಮೆಯ ಸ್ವಚ್ಛ ಬೆಳ್ದಿಂಗಳ ಚಲುವೆಯೊಡೆದಿತ್ತು.



# ವಿಪರೀತ

ರಾಮೇಗೌಡ ಮಲಗಿ ಎರಡು ತಿಂಗಳಾಯಿತು. "ಏನೇನು ಚಿಕಿತ್ಸೆಮಾಡಿ ದರೂ ವಾಸಿಯಾಗದ ಹಾಗೆ ಆಗಿದೆ. ಈ ಐದಾರು ವರ್ಷಗಳಿಂದ ಆಗಾಗ ಫಿಟ್ಸ್ ಬರುತ್ತಿತ್ತು. ಆದರೆ ಈ ಸಲ ಪರಾಲಿಸಿಸ್ ಆಗಿ ಕೈ ಕಾಲು ಬಿದ್ದು ಹೋಗಿದೆ. ಹಿಡಿದ ಹಾಸಿಗೆ ಬಿಟ್ಟು ಏಳಲಿಲ್ಲ. ಊರ ದೇವರಿಗೆ ಚಿನ್ನಮ್ಮ ಹರಕೆ ಹೊತ್ತಳು. ಬಿದ್ದ ಕೈಕಾಲುಗಳು ಮತ್ತೆ ಮಾಮೂಲಿನಂತೆ ಬಂದರೆ ಬೆಳ್ಳಿ ಕೈಕಾಲು ಮಾಡಿಸಿ ಕೊಡುವುದಾಗಿ ಮುಡುಪು ಕಟ್ಟಿ ಹರಸಿಕೊಂಡಳು ಆದರೂ ಸಮಾಧಾನವಿಲ್ಲ. ಏನೋ ಭೀತಿ, ಕಳವಳ, ರಾತ್ರಿ ಇಡೀ ಗಂಡನ ಬಳಿ ಎಚ್ಚರವಾಗಿ ಕುಳಿತು ಕಣ್ಣೀರು ಸುರಿಸುತ್ತಿದ್ದಳು. ಅವಳ ಮನಸ್ಸಿನ ಆತಂಕ ಅವಳಿಗೆ, ಬಾಯಿಬಿಟ್ಟು ಯಾರಲ್ಲಿಯೂ ಹೇಳಿಕೊಳ್ಳುವ ಹಾಗಿಲ್ಲ. ಗಂಡನ ಬಳಿ ಆತ್ಮೀಯವಾಗಿ ಮಾತನಾಡುವ ಅಧಿಕಾರವೇ ಇರಲಿಲ್ಲ. ಮದು ವೆಯಾದಂದಿನಿಂದ ಒಂದು ದಿವಸವಾದರೂ 'ಚಿನ್ನಿ' ಅಂತ ಕೂಗಿದ್ದಲ್ಲ. ಅಷ್ಟ್ಯಾಕೆ ಮದುವೆಯ ರಾತ್ರಿಯೇ ವಿರಸದಲ್ಲಿ ಕಳೆಯಿತು.

ಆ ದಿನ ರಾತ್ರಿ....ಚಿನ್ನಮ್ಮ ಯಾಕೋ ನೆನೆಸಿಕೊಂಡಳು. ಕಹಿ ಘಟನೆ ಗಳನ್ನು ಮರೆಯುವುದಕ್ಕೆ ಪ್ರಯತ್ನಿಸಿದರೂ ವಿರಾಮವಾಗಿ ಕುಳಿತ ಚಿನ್ನಮ್ಮ ನನ್ನು ಕಾಡತೊಡಗಿತು.

ಬೆಳಗ್ಗೆ ಮದುವೆ ಸಂಭ್ರಮ ಎಲ್ಲಾ ಮುಗಿದಿತು. ಅವರವರ ಪಾಡಿಗೆ ಎಲ್ಲರೂ ಹೊರಟುಹೋದರು. ರಾತ್ರಿಯ ಕಾರ್ಯಕ್ರಮ ಯಾರಿಗೂ ಮುಖ್ಯವೆನಿಸದಿದ್ದರೂ ದಂಪತಿಗಳ ಬದುಕಿನ ಮಧುರ ಕನಸುಗಳು ನನಸಾಗು ವುದು ಬೇಕಿತ್ತು. ಸಾಮಾನ್ಯವಾಗಿ ಮದುವೆಯಾಗಿ ಒಂದು ವರ್ಷಕ್ಕೆ

'ಪ್ರಸ್ತ'ದ ಕಾರ್ಯಕ್ರಮ. ಆದರೆ ರಾಮೇಗೌಡರ ತಂದೆ ಬಸವೇಗೌಡರಿಗೆ ಮೊಮ್ಮಗನನ್ನು ಕಾಣಬೇಕೆನ್ನುವ ಆತುರದ ಜೊತೆಗೆ ಹಾದಿ ತಪ್ಪಿದ ಮಗ ಹದ್ದುಬಸ್ತಿಗೆ ಬರ್‍ತಾನೆ ಅನ್ನೋ ಅಂತರಂಗದ ಬಯಕೆ, ಈ ಕಾರ್ಯವನ್ನು ಮಾಡಿ ಮುಗಿಸುವುದಕ್ಕೆ ಪ್ರೇರೇಪಿಸಿತ್ತು. ಚಿನ್ನಮ್ಮನ ತಂದೆಗೆ ಈಗಲೇ ಈ ಕಾರ್ಯ ಬೇಡವೆನ್ನಿಸಿತ್ತು. ಚಿನ್ನಮ್ಮ ದೊಡ್ಡವಳಾಗಿ ಕೇವಲ ಆರು ತಿಂಗಳು ಮಾತ್ರವಾಗಿತ್ತು. ಮಗಳು ಇನ್ನೂ ಸ್ವಲ್ಪ ದಿವಸ ಮನೇಲೇ ಇರಲಿ. ಈಗಲೇ ಜವಾಬ್ದಾರಿಯ ಹೊಣೆ ಆ ಎಳೇ ಹೆಗಲಿಗೆ ಬೇಡವೆಂದೆನಿಸಿತ್ತು. ಇಬ್ಬರು ಬೀಗರ ನಡುವೆ ಬೇಕು ಬೇಡಗಳ ವಿಚಾರವಾಗಿ ವಾಗ್ವಾದ ನಡೆಯಿತು.

ಚಿನ್ನಮ್ಮನ ತಂದೆ ಚಂದ್ರೇಗೌಡರು ಬೇಡ ಅಂದಿದ್ದಕ್ಕೆ ಬಸವೇಗೌಡರಿಗೆ ವಿಪರೀತ ಸಿಟ್ಟು. ಮದುವೆ ಮನೆಯಲ್ಲೇ ತಮ್ಮ ದರ್ಪದ ಪ್ರದರ್ಶನ ಮೊದಲು ಮಾಡಿದರು. ಬೀಗರನ್ನು ಉದ್ದೇಶಿಸಿ ಹೇಳಿದರು. "ಗೌಡರೇ ಇವತ್ತಿನವರೆಗೂ ಈ ಊರಾಗೆ ನಾನು ಹೇಳಿದ ಮಾತಿಗೆ ಎಳ್ಳಷ್ಟೂ ಎತ್ಯಾಸ ಬಂದಿಲ್ಲ. ಇನ್ನು ಮುಂದೇನೂ ನನ್ಮಾತ್ಗೆ ಎತ್ಯಾಸ ಬರಬಾರದು. ಬೀಗರಂತೂ ಮರ್‍ವಾದೆಯಿಂದ ಹೇಳ್ತಿದ್ದೀನಿ, ಈವತ್ತು ಪ್ರಸ್ತದ ಕಾರ್ಯನಡೀಲೇಬೇಕು. ಇಲ್ಲದಿದ್ದರೆ ನಿಮ್ಮುಡ್ಗೀನ್ ನೀವೇ ಇಟ್ಕೊಳ್ಳಿ. ನಮ್ಮ ರಾಮುಗಾ ಎಣ್ಣುಗಳನ್ನ ಕೊಡಾಕೆ ಸಾಲಾಗಿ ನಿಂತಿದ್ದಾರೆ." ಒಂದೊಂದು ಮಾತು ಮಾತನಾಡುವಾಗಲೂ ದರ್ಪ ಪ್ರತಿಫಲಿಸುತ್ತಿತ್ತು.

ಚಂದ್ರೇಗೌಡರೂ ಕಡಿಮೆಯೇನಲ್ಲ. ಆ ಊರಿಗೇ ಭಾರಿ ಕುಳ. ಬಸವೇಗೌಡರಿಗಿಂತ ಬುದ್ಧಿವಂತರು, ಜೊತೆಗೆ ಸ್ವಲ್ಪ ಓದಿಕೊಂಡಿದ್ದಾರೆ. ವಿಚಾರಗಳನ್ನು ಚೆನ್ನಾಗಿ ತಿಳಿದುಕೊಂಡಿದ್ದಾರೆ. ಹೆಣ್ಣು ಕೊಟ್ಟ ತಂದೆ, ಗಂಡಿನ ತಂದೆಗೆ ಹೆದರ ಬೇಕು, ಅವರು ಹೇಳಿದ್ಹಂಗೆ ನಡೀಬೇಕು ಅನ್ನೋ ಸಾಮಾನ್ಯ ಭಾವನೆಗೆ ಸ್ವಲ್ಪ ಭಿನ್ನವಾಗಿದ್ದರು. ಇನ್ನೂ ವಯಸ್ಸು ಚಿಕ್ಕದು, ನೋಡೋಕೆ ಮಾಟವಾಗಿ ಬೊಂಬೆಯ ಹಾಗೆ ಇದ್ದಾಳೆ. ಬುಗುಡಿ, ಲೋಲಾಕು, ನತ್ತು, ಕಾಸಿನಸರ, ಬೆಂಡೋಲೆ, ಕೆನ್ನೆ ಸರಗಳಿಂದ ಅಲಂಕೃತ

ಳಾಗಿ, ದಂಡೆ ಹೂ ಮುಡಿದು ಕೈತುಂಬ ತೊಟ್ಟ ಬಳೆಗಳ, ಕಾಲುಗಳನ್ನು ಅಲಂಕರಿಸಿದ್ದ ಗೆಜ್ಜೆ, ಕಾಲಂದಿಗೆಯ ಸದ್ದು ಮಾಡುತ್ತಾ ಹಸೆ ಮಣೆಗೆ ನಡೆದು ಬಂದ ಮಗಳ ಮುದ್ದುಮುಖ ನೆನಪಿಗೆ ಬಂದರೆ 'ಅಂಥ ಮಗಳ ತಂದೆ' ಅನ್ನುವ ಅಭಿಮಾನದ ಛಾಯೆ ಮೂಡುತ್ತಿತ್ತು. ಬಸವೇಗೌಡರ ಅಹಂಕಾರದ ಮಾತು ತಿವಿದ ಹಾಗಾಯಿತು. ತಮ್ಮ ಅಭಿಮಾನವನ್ನು ಕೆರಳಿಸಿದ ಹಾಗಾಯಿತು. ಹೆಣ್ಣಿನ ತಂದೆ ತಗ್ಗಿ ನಡೀಬೇಕು ಅನ್ನುವ ವಿಚಾರವನ್ನೂ ಮರೆತು,

"ಗೌಡರೇ ಈಗ್ಲೇ ಆ ಕೆಲಸಮಾಡೋಕೆಏನವಸರ ? ಇನ್ನೂ ಒಂದು ಸ್ವಲ್ಪದಿವಸ ತಡೆಯೋಣ. ಅಷ್ಟರಲ್ಲಿ ಕೊಳ್ಳಿ ಹೊಡೆಯೋಂಥಾದ್ದೇನೂ ಇಲ್ಲ ಇನ್ನಾ ಮಗೀ ಹಸೀದು. ನಂಗಿರೋವ್ಳು ಒಬ್ಳೇ ಮಗಳು. ಮನೇಲಿ ಇನ್ನೂ ಸ್ವಲ್ಪ ದಿವಸ ಇರಲಿ. ನೀವು ಸಿಟ್ಟು ಮಾಡಿಕೊಂಡು ಕೂಗಾಡಿದರೆ ಏನೂ ಪ್ರಯೋಜನವಿಲ್ಲ, ನಿಮಗೆ ನಿಮ್ಮ ಅಧಿಕಾರ ನಡೀ ಬೇಕನ್ನೂದು ಹ್ಯಾಗೆ ಬೇಕೋ ನಂಗೂ ಅಷ್ಟೇ. ಸುಮ್ಮನೆ ಬಂದ ನೆಂಟ್ರ ಮುಂದೆ ಕೂಗಾಡಿ ಮಾನ ಕಳ್ಕೊಳ್ಳೋದು ಬೇಡ" ಅಂತ ಹೇಳಿದ್ರು.

ಬಸವೇಗೌಡರು ಬಡಪೆಟ್ಟಿಗೆ ಬೀಳೊಂತ ವ್ಯಕ್ತಿಯಲ್ಲ. ಊರಾಗಿರೋ ಜನಕ್ಕೆಲ್ಲಾ ರಾಮೇಗೌಡರ ವಿಚಾರ ತಿಳಿದಿತ್ತು. ಹೆಣ್ಣು ಕೊಡೋಕೆ ಯಾರೂ ಮುಂದು ಬರಲಿಲ್ಲ. ತಡಮಾಡಿದ್ರೆ, ರಾಮೇಗೌಡರ ವಿಚಾರ ತಿಳಿದ್ರೆ ಬಂದ ಸಂಬಂಧ ಮುರೀಬಹುದಿತ್ತು. ದಲ್ಲಾಳಿ ವೆಂಕಣ್ಣ ಶಾಸ್ತ್ರಿಗಳ ಪ್ರಯತ್ನದಿಂದ ಈ ಸಂಬಂಧ ಕುದುರಿತ್ತು. ಇಷ್ಟೆಲ್ಲಾ ತಿಳಿದಿದ್ರೂ, ಮಗನ ಮೇಲಿನ ಅಭಿಮಾನ ಅವನ ಆಕ್ರೋಶಕ್ಕೆ ಗುರಿ ಮಾಡಿತ್ತು. ಚಂದ್ರೇಗೌಡರು ಸಮಾಧಾನವಾಗಿ ಹೇಳಿದರೂ, ಇವರಿಗೆ ಮೈ ಪರಚಿದ ಹಾಗಾಯಿತು. ಉದ್ವೇಗದಿಂದಲೇ ಎದುರು ಬಿದ್ದರು.

'ಏನ್ ಚಂದ್ರೇಗೌಡರೇ ನನಗೆ ಬುದ್ಧಿ ಹೇಳೋ ಹಾಂಗಾಂದ್ರಾ ? ನೀವು ಹೆಣ್ಣಿನ ತಂದೆ ಅನ್ನೋದ ಮರೆತ್ಬಿಟ್ಟಂಗಿದೆ. ಸ್ವಲ್ಪ ತಗ್ಗಿ ಬಗ್ಗಿ ನಡೆಯೋದ್ಬಿಟ್ಟು ತುಂಬಾ ಉದ್ದಾ ಮಾತಾಡ್ತೀರಿ ನಾನೇಳ್ದಂಗೆ ಈಗಲೇ ನಿಮ್ಮ ಮಗಳ ನಿಷೇಕ ಪ್ರಸ್ತ ಮಾಡಿ ಕಳಿಸಿಕೊಟ್ರೆ ಕೊಡಿ.

ಇಲ್ಲ ನಿಮ್ಮ ಮಗಳ್ನ ನೀವು ನಿಮ್ಮ ಮನೆಗೇ ಕರೆದುಕೊಂಡು ಹೋಗಿ ಎಷ್ಟು ದಿವ್ಸ ಬೇಕಾದರೂ ಇಟ್ಕೊಳ್ಳಿ. ನಮ್ಮ ಮಗಂಗೆ ಹುಡುಗೀರ ದಾರಿದ್ರ ಇಲ್ಲ. ಚಿಟಿಕೆ ಹೊಡೆದರೆ ಸಾವಿರ ಮಂದಿ ಸಿಗ್ತಾರೆ. ಏನೋ ವೆಂಕಣ್ಣ ಶಾಸ್ತ್ರಿಗಳು ಒಳ್ಳೇ ಮನೆತನ, ಹುಡುಗಿ ಲಕ್ಷಣವಾಗಿದ್ದಾಳೆ, ತುಂಬಾ ಒಳ್ಳೇಜನ ಮಾಡ್ಕೊಳ್ಳಿ ಅಂತ ಹೇಳಿದ್ದಕ್ಕೆ ಒಪ್ಪಿದ್ನೇ ಹೊರತಾಗಿ ಇನ್ನೇನೂ ಇಲ್ಲ. ನುಗ್ಗೇಹಳ್ಳಿ ಈರಣ್ಣಗೌಡ್ರು ಹೊಲಾ, ಮನಿ, ನಗದು ಹಣ ಎಲ್ಲಾ ಕೊಟ್ಟು ಮದ್ವೆ ಮಾಡ್ಕೋತೀವಂತ ಏಳಿದ್ರು. ಏನೋ ನಿಮಗೆ ಮಾತು ಕೊಟ್ಟಾಯಿತಲ್ಲ ಅಂತ ಒಪ್ಕೊಂಡಿದ್ದೀವಿ ಅಷ್ಟೇ ತಿಳೀತ? ಸುಮ್ಕೆ ಸುಮ್ಕೆ ಯಾಜ್ಯ ಮಾಡಿ ಎಲ್ಲರ ಮುಂದೆ ನಮ್ಮಾನ ಕಳೀಬೇಡ್ರಿ.

ಮಾತು ಮಾಡಬೇಕಾದ ಕೆಲ್ಸ ಮಾಡಿತು. ಅವರ ಮಾತಿನಲ್ಲಿ ತುಂಬಿದ ಅಹಂಕಾರ ತಮ್ಮ ಬಗ್ಗೆ ತಳೆದಿದ್ದ ನಿರ್ಲಕ್ಷಭಾವ, ಚಂದ್ರೇ ಗೌಡರ ಮನಸ್ಸನ್ನು ಕೊರೆಯಿತು. ಸ್ವಾಭಿಮಾನಕ್ಕೆ ಸವಾಲಿನಂತೆ ಈ ಮಾತು ಇದ್ದರೂ ಮಗಳ ಬದುಕಿನ ಪ್ರಶ್ನೆ ಅವರ ಆವೇಶವನ್ನು ತಡೆಯಿತು. ಹೆಂಗಸರ ಮಧ್ಯದಲ್ಲಿ ಕುಳಿತು ಅವರೆಲ್ಲ ಚೇಷ್ಟೆ ಮಾಡು ತ್ತಿದ್ದರೂ, ಅರ್ಥವಾಗದ ಮುಗ್ಧತೆಯಲ್ಲಿ ನಸುನಾಚುತ್ತಿದ್ದರೂ ಅವಳ ಮುಖದ ಮೇಲೆ ಭಾವೀ ಸುಖದ ಕಲ್ಪನೆಯಿಂದಲೋ ಏನೋ ಎಂಬಂತೆ ಆಗಾಗ ಮೂಡುತ್ತಿದ್ದ ಮಂದಹಾಸ, ಚಂದ್ರೇಗೌಡರ ಕಣ್ಮುಂದೆ ಸುಳಿ ಯಿತು. ಈಗ ಸ್ವಲ್ಪ ಹೆಚ್ಚು ಕಡಿಮೆಯಾದರೂ ಕೆಲಸ ಕೆಟ್ಟೀತು ಅಂತ ಅನಿಸಿ ತಮಗೆ ತಾವೇ ಸಮಾಧಾನ ಮಾಡಿಕೊಂಡರು. ಒಮ್ಮೆ ಏನಾದರೂ ಸರಿ ಈ ದುರಹಂಕಾರಿಗಳಿಗೆ ಬುದ್ಧಿ ಕಲಿಸಲೇಬೇಕು. ಇವರಲ್ಲದಿದ್ದರೆ ಇನ್ನೊಬ್ಬರು ರಾಜರಂತಾವರು ತಮ್ಮ ಮಗಳ ಸಂಬಂಧವನ್ನು ಕೋರಿ ಬಂದಾರು, ಅಂತ ಅನಿಸಿದರೆ, ಮತ್ತೊಮ್ಮೆ ಮದುವೆ ತಪ್ಪಿದರೆ, ಇಲ್ಲ ಸಲ್ಲದ ಕಟ್ಟುಕತೆಗಳು ಹಬ್ಬಿ, ಮಗಳಿಗೆ ಸಂಬಂಧ ಕುದುರುವುದು ಸಾಧ್ಯ ವಾಗದೇ ಹೋಗಬಹುದು. ಜೊತೆಗೆ ಬಸವೇಗೌಡರು ಊರಿಗೆ ಭಾರಿ ಕುಳ, ಅಕ್ಕ ಪಕ್ಕದ ಊರುಗಳಲ್ಲಿಯೂ ಅವರ ವರ್ಚಸ್ಸು ನಡೆಯುತ್ತೆ. ಒಂದು ವೇಳೆ ತಮ್ಮ ಮಗಳ ಭವಿಷ್ಯವನ್ನೇ ಹಾಳು ಮಾಡುವುದಕ್ಕೆ ಪಣ

ತೊಟ್ಟರೆ ?—ಎಂದು ತುಂಬಾ ರೀತಿಯಲ್ಲಿ ಮನಸ್ಸು ಆಲೋಚಿಸಿ ಒಂದು ನಿರ್ಧಾರಕ್ಕೆ ಬಂದು ಹೇಳಿದರು.

"ಬಸವೇಗೌಡರೇ, ಸ್ವಲ್ಪ ತಾಳ್ಮೆಯಿಂದ ಮಾತಾಡಿ. ಇಷ್ಟು ಸಣ್ಣ ವಿಷಯಕ್ಕೆ ಹೋರಾಡಬೇಕಿಲ್ಲ. ಒಂದು ನಿಮಿಷ ತಡೆಯಿರಿ, ನಮ್ಮನಿಯಾಕೇನ ಕೇಳಿ ಬರ್ತೀನಿ. ಅಲ್ಲೀವರೆಗೆ ಸ್ವಲ್ಪ ಸಮಾಧಾನ ವಾಗಿರಿ" ಎಂದು ಹೇಳಿ ಹೆಂಗಸರೆಲ್ಲ ಕೂತಿದ್ದ ಕೋಣೆಯ ಹತ್ತಿರ ಹೋದರು. ಒಂದು ದಂಡು ಹೆಂಗಸರು ಕೂತು ಗಿಜಿ ಗಿಜಿ ಮಾತಾಡುತ್ತಾ ಇದ್ದರು. ಅವರ ಮಧ್ಯೆ ಕುಳಿತು ಮಗಳಿಗೆ ಜಡೆ ಹೆಣೀತಿದ್ದ ಹೆಂಡ್ತೀನ ಹೇಗೆ ಕೂಗೋದೋ ಗೊತ್ತಾಗಲಿಲ್ಲ. ಆದರೆ ತುಂಬಾ ಹೊತ್ತು ತಡೆಯುವುದಕ್ಕೂ ಅವಕಾಶವಿಲ್ಲ. ತಮ್ಮ ತಮ್ಮ ಪುರಾಣಗಳನ್ನು ಹೇಳಿ ಕೊಂಡು ತಮಾಷೆ ಮಾಡುತ್ತಾ ನಗುತ್ತಾ ಇದ್ದ ಹೆಂಗಸರ ಕಣ್ಣಿಗೆ ಚಂದ್ರೇಗೌಡರು ಬಂದು ಬಾಗಿಲಲ್ಲಿ ನಿಂತಿದ್ದೂ ಗೊತ್ತಾಗಲಿಲ್ಲ. ಇನ್ನು ತಡಮಾಡಬಾರದೆಂದು, ಚಂದ್ರೇಗೌಡರು ಸಣ್ಣಗೆ ಕೆಮ್ಮಿದರು. ಗಂಡಸಿನ ಕೆಮ್ಮಿನ ಶಬ್ದ ಕೇಳಿ ಹೆಂಗಸರೆಲ್ಲಾ ಸ್ತಬ್ಧರಾಗಿ ಬಾಗಿಲತ್ತ ತಿರುಗಿ ನೋಡಿದರು. ಚಂದ್ರೇಗೌಡರು ಕಣ್ಣಿಗೆ ಬಿದ್ದದ್ದೇ ತಡ ಎಲ್ಲರೂ ಸೆರಗೆಳೆದು ಮೈ ತುಂಬಾ ಹೊದ್ದುಕೊಂಡು ಅಲ್ಲಿಂದ ಮೆಲ್ಲನೆ ಜಾರಿದರು. ಆದರೆ ಹೋಗುವವರು ಸುಮ್ಮನೆ ಹೋಗಲಿಲ್ಲ. ಗಂಡ ಬಂದದ್ದು ಯಾಕೋ ಎಂದು ಕುತೂಹಲದಿಂದ ಜಡೆ ಹೆಣೆಯುತ್ತಿದ್ದುದನ್ನೂ ಬಿಟ್ಟು ಎದ್ದು ನಿಂತ ಗೌರಮ್ಮನಿಗೆ,

"ಗೌರಕ್ಕ ಆದಷ್ಟು ಬೇಗ ಪ್ರಸ್ತದ ಸಿಹಿ ತಿನ್ನಿಸಿ ನಮಗೆಲ್ಲಾ. ಬರೋ ವರ್ಷಕ್ಕೆ ಅಜ್ಜೀ, ತಾತ ಆಗೀರಂತೆ"—ಅಂತ ಮುಸಿ ಮುಸಿ ನಗುತ್ತಾ ಹೊರಟರು.

ಗೌರಮ್ಮ ಅದಕ್ಕೆ ತೋರಿಸಿದ ಪ್ರತಿಕ್ರಿಯೆ ಎಂದರೆ,

"ಆಗಲೇಳ್ರಕ್ಕ ಶಿವ ಕೊಟ್ಟರೆ ಬೇಡಾನ್ನೋಕೆ ಆಗ್ತದ. ದೊಡ್ಡೋರು, ಬೀಗರು ಎಂಗೆ ನಿಶ್ಚಯಿಸಿದ್ರೆ ಅಂಗೆ—"ಅಂತ ಹೇಳುವಷ್ಟ ರಲ್ಲಿ ನಿಜವಾಗಿಯೂ ಗೌರಮ್ಮನ ಕಣ್ಣಲ್ಲಿ ಮೊಮ್ಮಗನ ಕಲ್ಪನೆ, ಸಂತೋಷ ಸಂಭ್ರಮಗಳನ್ನು ತುಂಬಿಸಿತು.

ನಿಂತು ಕೇಳುತ್ತಿದ್ದ ಚಂದ್ರೇಗೌಡರಿಗೆ, ಥೂ ಇವರಾ, ಇನ್ನೂ ಮದುವೆ ಆಗಾಕಿಲ್ಲ ಆಗ್ಲೇ ಮಗು ಯೋಚ್ನೆ ಮಾಡ್ತವೆ. ಇವಕ್ಕೆ ಪ್ರಸ್ತ, ಪ್ರಸ್ತ ಅನ್ನೋ ಗೀಳು ಬಿಟ್ಟರೆ ಬೇರೇನೂ ಇಲ್ವೇನೋ— ಅಂದುಕೊಂಡರು. ಆದರೆ ಹೆಂಡತಿ ಕಣ್ಣಲ್ಲಿ ತುಂಬಿದ್ದ ಸಂತೋಷವನ್ನು ಗಮನಿಸದೆ ಹೋಗಲಿಲ್ಲ. ಆಗಲೇ ಅವರಿಗೆ ಅನುಮಾನ, ಹೆಂಡತಿ ತಮ್ಮ ಮಾತಿಗೆ ಸಮ್ಮತಿ ಕೊಡೋದಿಲ್ಲ ಅನಿಸಿತು. ಇವರೆಲ್ಲಾ ಹಾಳಾದೋವು ಒಂದೇ ಜಾತಿ. ನಾನೊಬ್ಬನೇ ಸೋಲಬೇಕಾಗಿರೋದು. ಆ ಬಸವೇಗೌಡ ಶತಾಯ ಗತಾಯ, ಅಂದುಕೊಂಡಿದ್ದನ್ನು ನಡೆಸಿಯೇ ಬಿಡುತ್ತಾನೆ, ಅನ್ನೋದು ಮನಸ್ಸಿಗೆ ಗೊತ್ತಿತ್ತು. ಹೆಂಡತಿಯ ಅಭಿಪ್ರಾಯ ಕೇಳಿ ಬರ್ತೀನಿ ಅಂತ ಹೇಳಿ ಬಂದಿದ್ರು, ಆದು ಈಗಾಗಲೇ ಚಂದ್ರೇಗೌಡರಿಗೆ ಹೆಂಡತಿಯ ಅಭಿಪ್ರಾಯ ಸೂಕ್ಷ್ಮವಾಗಿ ತಿಳಿದು ಹೋಯ್ತು.

ಬಸವೇಗೌಡರಿಗೂ ತಮಗೂ ನಡೆದ ಮಾತುಕತೇನೆಲ್ಲ ವಿವರವಾಗಿ ಹೇಳಿದರು. ಅಲ್ಲಿದ್ದ ಮಗಳನ್ನು ಕೆಂಪನ ತಂಗಿ ಪುಟ್ಟೀ ಜೊತೇಲಿ ಬೇರೊಂದು ಕೋಣೆಗೆ ಕಳುಹಿಸಿಬಿಟ್ಟು ಮಾತಾಡೋವಷ್ಟು ಮುತುವರ್ಜಿ ವಹಿಸಿದ್ದರು ಚಿನ್ನೀಗೆ ಅದೆಲ್ಲಾ ಏನೂಂತ ತಿಳಿಯೋ ಸಂಭವ ಇಲ್ಲದೇ ಹೋದ್ರೂ ತಿಳೀತಿತ್ತೋ ಇಲ್ವೋ, ಬೇರೆ ಕಡೆ ಕಳುಹಿಸುವ ಎಚ್ಚರಿಕೆ ಮಾತ್ರ ತಗೊಂಡಿದ್ದರು ಚಂದ್ರೇಗೌಡರು.

ಗೌರಕ್ಕ ಗಂಡ ಹೇಳಿದ ಮಾತನ್ನೆಲ್ಲಾ ತಾಳ್ಮೆಯಿಂದ ಕೇಳಿದ್ಳು. ಗಂಡ ತನ್ನ ಅಭಿಪ್ರಾಯ ಕೇಳುತ್ತಿದ್ದಾನೇಂತ ಅನಿಸಿ ಒಂದು ಕ್ಷಣ ತಡವರಿಸಿದಳು. ಆದರೂ ಪರಿಸ್ಥಿತೀನ ಚಂದ್ರೇಗೌಡರಿಗಿಂತಲೂ ಚೆನ್ನಾಗಿ ಅರ್ಥಮಾಡಿಕೊಂಡಳು. ಈಗಲ್ಲದಿದ್ದರೆ ಇನ್ನು ಸ್ವಲ್ಪ ದಿವಸಕ್ಕಾದರೂ ಮಗಳನ್ನು ಕಳುಹಿಸಿಕೊಡಲೇ ಬೇಕು. ಇದು ವಾಸ್ತವ ಸತ್ಯ. ಬಸವೇಗೌಡರು ಅವಳ ದೃಷ್ಟಿಯಲ್ಲಿ ಭಾರೀ ಶ್ರೀಮಂತರು ತಾವಿರುವುದಕ್ಕಿಂತ ಹತ್ತು ಪಾಲು ಹೆಚ್ಚು ಆಸ್ತಿ ಪಾಸ್ತಿ, ಹೊಲಗದ್ದೆ, ಮನೆ ತುಂಬಾ ಆಳು ಕಾಳು- ಎಲ್ಲಾ ಇವೆ. ಮನೇ ನೋಡಿದರೆ ರಾಜರ ಮನೆ ಹಾಗಿದೆ. ಅಳಿಯ ರಾಮೇಗೌಡ ರಾಜಕುಮಾರನ ಥರಾ ಇದ್ದಾನೆ. ಜರಿ ಅಂಚಿನ ಪಂಚೆ, ರೇಶಿಮೆ ವಲ್ಲಿ, ಜರೀಪೇಟ, ಎಡಗೈನ ನಾಲ್ಕು ಬೆರಳುಗಳಿಗೂ

ವಜ್ರದುಂಗುರಗಳು ಬಲಗೈಲಿ ಉಂಗುರದ ಬೆರಳಿಗೆ ಬರೀ ಚಿನ್ನದಲ್ಲಿ ಮಾಡಿಸಿದ ನಕಾಶೆಯುಂಗುರ, ಕಿವಿಯಲ್ಲಿ ಚಿನ್ನದ ಕಡಕು–ಕತ್ತಿನಲ್ಲಿ ದಪ್ಪವಾಗಿ ಮಾಡಿಸಿದ ಚಿನ್ನದ ಸರ ಇವೆಲ್ಲಾ ನೋಡಿದ ಗೌರಕ್ಕನಿಗೆ ಕಣ್ಣು ತಿರುಗಿದಂತಾಯಿತು ದಿಗ್ಭ್ರಮೆಯಿಂದ. ಮಗಳು ಈ ಮನೆಗೆ ಸೊಸೆಯಾದರೆ ಎಂಥ ಪುಣ್ಯ, ಮಹಾರಾಣಿಯ ಹಾಗೆ ಆಳ್ತಾಳೆ. ದೇವರೇ ಈ ಸಂಬಂಧಾನ ಹೇಗಾದರೂ ಕುದುರಿಸು "ನಿನಗೆ ಲಕ್ಷ ದೀಪ" ಸೇವೆ ಮಾಡಿಸ್ತೀನಿ ಅಂತ ಹರಕೆ ಹೊತ್ತಿದ್ದಳು.

ಇಷ್ಟು ಉಚ್ಛ ಆಸೆಗಳನ್ನು ಮಗಳ ವಿಷಯದಲ್ಲಿ ಇಟ್ಟುಕೊಂಡಿದ್ದ. ಗೌರಮ್ಮ ಈ ಒಂದು ಸಣ್ಣ ಕಾರಣಕ್ಕಾಗಿ ಮದುವೆ ಮುರಿಯುವುದನ್ನು ಸಹಿಸುವುದಿಲ್ಲ. ಗಂಡನಿಗೆ ತಿಳಿಸಿ ಹೇಳಬೇಕು ಅಷ್ಟೆ! ಎಂದುಕೊಂಡಳು.

"ನೋಡಿ ಒಂದ್ಮಾತು ನಮ್ಮ ಮಗಳು ಚೆನ್ನಾಗಿ ಬದುಕೋದು ನಮಗೆ ಮುಖ್ಯ. ಏನು ಪುಣ್ಯ ಮಾಡಿದ್ವೋ ನಮಗೆ ಅನಾಯಾಸವಾಗಿ ಈ ಸಂಬಂಧ ಸಿಕ್ಕೈತಿ. ಉಚ್ಚುಚ್ಚಾಗಿ ಸಿಟ್ಟು ಮಾಡ್ಕೊಂಡು ಈ ಸಂಬಂಧಾನ ಆಳ್ಮಾಡಬೇಡಿ. ತಾಳಿ ಕಟ್ಟದ್ದಾಗೈತಿ. ಇನ್ನು ಚಿನ್ನಿ ಅವರಿಗೆ ಸೇರಿದ್ದು ಈಗ ಬ್ಯಾಡಾಂದ್ರೂ ಇನ್ನು ಸ್ವಲ್ಪ ದಿವ್ಸಕ್ಕಾದ್ರೂ ಈ ಕಾರ್ಯಾನ ಮಾಡಿ ಕೊಡ್ಲೇಬೇಕು. ಆದೂ ಅಲ್ಲದೆ "ಚಿನ್ನಿ"ಗೆ ಅಂಥ ಸಣ್ಣ ವಯಸ್ಸೇನೂ ಅಲ್ಲ. ಹನ್ನೆರಡು ವರ್ಷ ಆಗಯ್ತೆ. ಅರ್ಥ ಮಾಡ್ಕೋತಾಳೆ ಅಲ್ದೆ ಅಳಿಯಂದಿರು ಬರೋದು ಹೋಗೋದು ಇದ್ದೇ ಇರುತ್ತೆ. ನಾಳೆ ಏನಾರಾ ಹೆಚ್ಚು ಕಮ್ಮಿ ಆದ್ರೆ ಜನರ ಬಾಯಿ ಮುಚ್ಚೋಕಾಗುತ್ಯೆ. ಬೀಗರು ಏಳ್ದಂಗೆ ಕೇಳಿ ಮುಂದಿನ ವಾರ ಬೇಕಾರೆ ಮನೇಲೇ ಈ ಕೆಲ್ಸ ಮುಗಿಸಿ ಬಿಡಾನಾ. ಹೆಂಡತಿಯ ಮಾತನ್ನು ಕೇಳಿದ ಚಂದ್ರೇಗೌಡರಿಗೆ ಸರಿ ಎನಿಸಿತು. ಬಸವೇಗೌಡರು ಇವತ್ತೇ ಆಗ್ಬೇಕಂತ ಹೇಳ್ತಾರೆ. ಆದ್ರೂ ಪರವಾಯಿಲ್ಲ. ಮುಂದಿನ ವಾರ ಇಟ್ಕೊಂಡ್ರೆ ಆದೀತು. ಇದಕ್ಕೆ ಬೀಗರು ಒಪ್ಪಿಯೇ ಒಪ್ತಾರೆ. ಅನಿಸಿ ಸರಿ ಗೌರ ಈಗಲೇ ಬೀಗರಿಗೆ ಹೇಳಿ ಬರ್ತೀನಿ ನೀನು ಹೇಳೋಹು ಸರಿ ಇಷ್ಟು ಸಣ್ಣ ವಯಸ್ಸಿಗೇ ಮಕ್ಕಳ್ಹೆರೋ ಕಷ್ಟ ಯಾಕಂತ ನಾನು ಇದನ್ನು ಬೇಡಾಂದ್ಕೊಂಡೆ. ನೀನು ಹೇಳೋ ಹಾಗೇ ಮಾಡೋಣ.

ಈಗಲೇ ಬಸವೇಗೌಡರು ಮುಖ ಊದಿಸ್ಕೊಂಡನ್ರಿ. ಅವರಿಗೆ ಭಾಳ ಜಂಭ. ಸಿರಿವಂತಿಕೆ ದುರಭಿಮಾನ ಅವರ ನೆತ್ತಿಯ ಮೇಲೆ ಕುಂತಿದೆ! ಹೇಳುವಾಗ ದುಮುದುಮುಗುಡುತ್ತಿದ್ದರು.

ಗೌರಮ್ಮ ಗಂಡನ ವಿಚಾರವಾಗಿ ಬಹಳ ಹೆಮ್ಮೆ ತಳೆದಿದ್ದರು. ಈ ಸಂದರ್ಭದಲ್ಲಿ ತಮ್ಮ ಮದುವೆ ಪ್ರಸ್ತದ ದಿನ ಅವರು ಮಾಡಿದ ಚೇಷ್ಟೆ ನೆನಪಾಯಿತು. ಮುಗುಳ್ನಕ್ಕಳು. ತನಗೆ ಸಿಟ್ಟು ಬರ್ತಿದ್ರೆ ಹೆಂಡತಿ ನಗುತ್ತಿದ್ದುದು ಅವರಿಗೆ ಆಶ್ಚರ್ಯವಾಯಿತು.

"ಏನೇ ಅದು ಅಂಗೆ ನಗ್ತಾ ಇದ್ದೀಯ, ನೀನೆ "ಮದುವೆಣ್ಣು" ಅಂತ ಅಂದ್ಕೊಂಬಿಟ್ಟಿದ್ದೀಯಾ?

"ಸಾಕು ಸುಮ್ಮನಿರಿ ಅಂದ್ರೆ, ನೀವು ಇಂಗೆ ಮಾತಾಡೋದು ನೋಡಿದ್ರೆ ನಗು ಬರ್ದೆ ಇರುತ್ತ್ಯೆ? ಈಗ ನಿಮ್ಮ ಮಗಳ ಇಚಾರವಾಗಿ ತಲೆ ಕೆಡಿಸ್ಕೊಂಡ್ರಲ್ಲಾ? ನೀವು ನಂ ಜೊತೆ ಮಲಗಿದಾಗ ಏನು ವಯಸ್ಸಾಗಿತ್ತಂತ? ಈಗ ಚೆನ್ನಿಗಾಗಿರೋ ವಯುಸ್ಸಿಗಿಂತ ಇನ್ನೊಂದಾರು ತಿಂಗಳು ಜಾಸ್ತಿ ಇರಬಹುದು. ಅಷ್ಟೇ ತಾನೇ?

ಸರಿ ಸರಿ ನಿಂಗೆ ಮಾಡೋಕೆ ಬೇರೆ ಕೆಲಸ ಇಲ್ಲ. ಆಗಿನ ಕಾಲಕ್ಕೂ ಈಗಿನ ಕಾಲಕ್ಕೂ ಒಂದೇನಾ? ಏನು ಮಗಳು ಇನ್ನೂ ಸ್ವಲ್ಪ ದಿವ್ಸ ಮನೆಯಾಗೇ ಇರಲೀಂತ ಈಂಗೇಳ್ತೆ. ನನಗೇನು, ಈಗ್ಲೆ ವೋಗಿ ಏಳಿ ಬಂದ್ಬುಡ್ತೀನಿ–ಅಂತ ಬೀಗರಿದ್ದಲ್ಲಿಗೆ ಹೊರಟರು. ಚಂದ್ರೇಗೌಡರು ಮಗನ ಜೊತೆ ಏನೋ ಗಂಭೀರವಾಗಿ ಮಾತನಾಡುತ್ತಿದ್ದ ಬಸವೇಗೌಡರಿಗೆ ಮಗ ರಾಮೇಗೌಡನೇ, ಅಪ್ಪ ನೋಡು ಇಂದೆ ಅವರು ಬಂದವ್ರೆ ಅಂದ.

ತಿರುಗಿದ ಚಂದ್ರೇಗೌಡರು ಬಸವೇಗೌಡರನ್ನು ಸನ್ನೆಯಿಂದ ಕರೆದರು. ಈಗಲೇ ಬರ್ತೀನಿಂತ ಹೇಳಿ ಕೆಳಗಿದ್ದ ವಲ್ಲಿ ಕೊಡವಿ ಹೆಗಲ ಮೇಲೆ ಹಾಕಿಕೊಂಡು ಚಂದ್ರೇಗೌಡರನ್ನು ಹಿಂಬಾಲಿಸಿದರು.

"ನೋಡಿ ಬಸವೇಗೌಡರೇ, ನಮ್ಮಾಕೆ ಅಭಿಪ್ರಾಯಾನೂ ನೀವೇಳ್ದಂಗೆ ಆಯ್ತು. ಇನ್ನೇನು ಎಲ್ಲರಭಿಪ್ರಾಯ ಇದೇ ಇರೋದಾದ್ರೆ ನಾನ್ಯಾಕೆ ಬೇಡಾಂತೇಳ್ಲಿ? ಆದರೆ ನಮ್ಮಾಕೆ ಈ ಕಾರ್ಯಾನ ಮುಂದಿನ ವಾರ ಇಟ್ಕೊಳ್ಳಾನಾಂತ ಏಳ್ತಾಳೆ. ನೋಡಿ ಯೋಚ್ನೆ ಮಾಡಿ.

ಒಂದು ವಾರದಾಗೆ ಏನೂ ಆಗಾಕಿಲ್ಲ. ಮನೇಲೇ ಈ ಕಾರ್ಯ ಮುಗಿಸಿ ಡಾನ, ಆಗಬೌದ ?

ಬಸವೇಗೌಡರು ಯೋಚಿಸಿದರು. ಸದ್ಯ ಇಷ್ಟಕ್ಕಾದರೂ ನಿರ್ಧಾರ ಆಯ್ತಲ್ಲಾಂತ ಸಂತೋಷ. ಮದುವೆ ಮನೇಲಿ ಹಗರಣ ಆಗುತ್ತೇಂತ ಅನಿಸಿದ್ದು ಸಮಾಧಾನದಿಂದಲೇ ತೀರ್ಮಾನ ಆಯ್ತು.

ರಾತ್ರಿ ಹೆಣ್ಣು ಗಂಡಿಗೆ ಆರತಿಯಾಯ್ತು. ರಾಮೇಗೌಡ ಹಸಿದ ಕಣ್ಣುಗಳಿಂದ ಚೆನ್ನಿಯತ್ತ ನೋಡಿದ. ಆದರೆ ಚೆನ್ನಿಗೆ ಪಕ್ಕದಲ್ಲಿ ಕೂತ ರಾಮೇಗೌಡನಿಗಿಂತ ತಾನುಟ್ಟ ಸೀರೆ, ತಾನು ತೊಟ್ಟ ಒಡವೆ ಬಗ್ಗೆ ನೋಡಿಕೊಂಡು ಖುಷಿ ಪಡೋದೇ ಸಾಕಾಯ್ತು. ಎದುರುಗಡೆ ಕೂತ ಗೆಳತಿಯರು ಚೆನ್ನಿಯತ್ತ ನೋಡಿ ನೋಡಿ ನಗುತ್ತಿದ್ದರು. ಚೆನ್ನಿ ಸನ್ನೆಯಿಂದಲೇ ಗೆಳತಿಯರಿಗೆ ಏನೇನೋ ಹೇಳಲು ಪ್ರಯತ್ನಿಸಿದಳು. ಅವರ ಮುಂದೆ ತನಗೆ ದೊರೆಯುತ್ತಿದ್ದ ವಿಶೇಷ ಗಮನಕ್ಕೆ ಹೆಮ್ಮೆ ಪಟ್ಟಿದ್ದಳು.

o o o

ಮಾತುಕತೆ ನಡೆದಂತೆ ಮುಂದಿನವಾರ ಪ್ರಸ್ತದ ಕಾರ್ಯ. ಬಸವೇಗೌಡರು ಬಯಸಿದ್ದಂತೆ ಅವರ ಮನೆಯಲ್ಲೇ ಈ ಕಾರ್ಯ ಜರುಗಲಿತ್ತು. ಬಸವೇಗೌಡರು ಅರಮನೆಯಷ್ಟು ವಿಶಾಲವಾಗಿರೋ ಮನೆ ಸಾಲದೂಂತ ಮನೆಯಿಂದ ಒಂದೆರಡು ಕಿಲೋಮೀಟರ್ ದೂರದಲ್ಲಿದ್ದ ಮಾವಿನ ತೋಪಿನಲ್ಲಿ ದೊಡ್ಡ ಡೇರೆ ಹಾಕಿದ್ದರು. ಊರ ಮಂದೀನೆಲ್ಲಾ ಕರೆದಿದ್ದರು.

ಭರ್ಜರಿ ಊಟ ಆರು ತರದ ಸಿಹಿ, 5-6 ರೀತಿಯ ಕಾಯಿಪಲ್ಲೆ ಉಂಡವರು ಮೂರು ತಿಂಗಳು ಮರೆಯುವುದಕ್ಕೆ ಸಾಧ್ಯವಾಗುತ್ತಿರಲಿಲ್ಲ. ಬಂದವರೆಲ್ಲಾ ದಂಪತಿಗಳಿಗೆ ಏನಾದರೊಂದು ಉಡುಗೊರೆ ಕೊಟ್ಟೇ ಹೋದರು, ಬಂದ ಬಹುಮಾನಗಳು ಎರಡು ಕೋಣೆ ತುಂಬಾ ಆದವು. ದಂಪತಿಗಳ ಕೈಯಿಂದ ಬಸವೇಗೌಡರು, ಬಂದು ಆಶೀರ್ವಾದ ಮಾಡಿದವರಿಗೆಲ್ಲಾ ಒಂದೊಂದು ಜೊತೆ ಪಂಚೆ ಕೊಡಿಸಿದರು. ಹೆಂಗಸರಿಗೆ ಎರಡೆರಡು ರವಿಕೆ ಕಣ ಕೊಡಿಸಿದರು. ಬಂದವರೆಲ್ಲ ಕಂಠಪೂರ್ತಿ ತಿಂದು ತೃಪ್ತಿಯಿಂದ ಹರಸಿ ಹೊರಟರು.

ಸಂಭ್ರಮದ ಸದ್ದುಗದ್ದಲ ನಿಂತು ತಣ್ಣಗಾಗುವುದಕ್ಕೆ ರಾತ್ರಿ ಹತ್ತುಗಂಟೆ ದಾಟಿತ್ತು. ಭಟ್ಟರು ಪ್ರಸ್ತದ ಮುಹೂರ್ತ ಹತ್ತಿರ ಬರುತ್ತಿದೆಯೆಂದು ಆತುರಪಡಿಸಿದರು.

ಗೌರಕ್ಕನಿಗೆ ಆ ದೊಡ್ಡ ಬಂಗಲೆ ಮನೆಯಲ್ಲಿ ಎಷ್ಟು ಓಡಾಡಿದರೂ ತೃಪ್ತಿಯಿಲ್ಲ. ಶ್ರೀಮಂತ ಅಳಿಯ ಸಿಕ್ಕಿರುವುದು ಅವಳಿಗೆ ಸ್ವರ್ಗ ಮೂರೇ ಗೇಣು. ನೆರೆ ಹೊರೆಯವರಿಗೆ, ಮದುವೆಗೆ ಬಂದವರಿಗೆ ಅಳಿಯಂದಿರ ಶ್ರೀಮಂತಿಕೆ, ಗುಣ ಹೊಗಳುವುದಕ್ಕೆಲ್ಲ ಬಿಡುವೇ ಇಲ್ಲ ದಾಗಿತ್ತು.

ಕೋಣೆಯನ್ನು ಸಜ್ಜುಗೊಳಿಸಿ ದಂಪತಿಗಳನ್ನು ಒಳಗೆ ಕರೆದೊಯ್ದು ಕೂಡಿಸಿದರು. ಮುತ್ತೈದೆಯುವರಿಗೆ ತಾಂಬೂಲ ಕೊಡಿಸಿದ ಮೇಲೆ ಹೂವಿನ ಚೆಂಡಾಟ ಆಡಿಸಿದರು. ಚೆನ್ನಿ ಗಂಡನಿಗೆ ಒಂದಾಡು ಏಳು ಎಂದು ಯಾರೋ ನೆರೆದ ಮಂದಿಯಲ್ಲಿ ಕೂಗಿ ಹೇಳಿದರು. ಹೌದು ಹೌದು ಚಿನ್ನಿ ಹಾಡು ಹೇಳಲೇಬೇಕು ಎಂದು ಸಾಮೂಹಿಕವಾಗಿ ಕೂಗಿದರು. ಚಿನ್ನಿ ಇದೆಲ್ಲಾ ಏನೂ ಅರ್ಥವಾಗದಂತೆ ಬೆಕ್ಕಸ ಬೆರಗಾಗಿ ಕೂತಿದ್ದಾಳೆ. ಚಿನ್ನಿಗೆ ಹಾಡು ಹೇಳೋದೂಂದ್ರೆ ಬಹಳ ಪ್ರೀತಿ. ತನಗೆ ಹಾಡು ಹೇಳುವುದಕ್ಕೆ ಹೇಳಿದ್ದೇ ಸಾಕು, "ಅಮ್ಮ ಆಡು ಏಳ್ಲೇನೆ?"—ರಾಗ ಎಳೆಯುತ್ತಾ ಕೇಳಿದಳು. ಹೆಂಡತಿಯ ಬಾಯಿಂದ ಹೊರಟ ಮಾತನ್ನು ಕೇಳಿ ರಾಮೇಗೌಡರು ಮೆಲ್ಲನೆ ನಕ್ಕರು. ರಾಮೇಗೌಡನ ಗೆಳೆಯರ ದಂಡು ಒಂದು ಬಂದಿತ್ತು. ಕೋಣೆ ಹುಗಿಸುವುದಕ್ಕೆ ಮುಂಚೆ ಪೋಲಿ ಪೋಲಿಯಾಗಿ ಮಾತಾಡಿ ಚುಡಾಯಿಸಿ ರಾಮೇಗೌಡನನ್ನು ಕಳಿಸಿದ್ದರು.

ಎಷ್ಟು ಹೊತ್ತಾದರೂ ಈ ಹೆಂಗಸರ ಹಾವಳಿ ಮುಗಿಯುವುದಿಲ್ಲ- ಹಾಳಾದವ್ರು ಇನ್ನಾದರೂ ನಮ್ಮಿಬ್ಬರನ್ನ ಏಕಾಂತವಾಗಿ ಬಿಟ್ಟು ಹೋಗ ಬಾರದೆ ಬೇಗ"—ಎಂದು ಆಲೋಚಿಸುತ್ತಿತ್ತು, ರಾಮೇಗೌಡನ ಮನಸ್ಸು.

ಅಷ್ಟರಲ್ಲಿ ಬಸವೇಗೌಡರು ಬಂದು ಎಲ್ಲರನ್ನೂ ಮೆಲ್ಲಗೆ ಮಾತಾಡಿ ಸಾಗಿಸಿದರು. ಅಲ್ಲಿಂದ ಎಲ್ಲಾ ಹೊರಟ ಮೇಲೆ, "ಮಗಾ ಸ್ವಲ್ಪ

ಜಾಗ್ರತೆ ವಹಿಸು, ಎಚ್ಚ್ಚ ಕಮ್ಮಿ ನಡಕೊಂಡೀಯ ? ಎಂದು ಪಿಸುಗುಟ್ಟಿ ಅಲ್ಲಿಂದ ಕಾಲ್ತೆಗೆದರು. ಎರಡೇ ಎರಡು ಕ್ಷಣ ಸುಮ್ಮನಿದ್ದ ರಾಮೇಗೌಡ ರಿಗೆ ಚಿನ್ನಿ ಮಂಚ ಇಳಿದು ಹೊರಡುವ ಪ್ರಯತ್ನದಲ್ಲಿದ್ದದ್ದು ಕಣ್ಣಿಗೆ ಬಿತ್ತು. ರಾಮೇಗೌಡ ಎದ್ದ. ಎದ್ದವನೇ ಬಾಗಿಲ ಬಳಿ ಬಂದಿದ್ದ. ಚಿನ್ನಿಯ ರಟ್ಟೆ ಹಿಡಿದು ಹಿಂದಕ್ಕೆ ಎಳೆದು ಚಿಲಕ ಹಾಕಿದ. ಚಿನ್ನಿಯ ಎದೆ ಹೊಡೆದುಕೊಳ್ಳತೊಡಗಿತು. ಮೈ ಬೆವರಿತು. ತುಟಿ ಅದುರ ತೊಡಗಿತು. ದೈನ್ಯವಾಗಿ ರಾಮೇಗೌಡರತ್ತ ನೋಡುತ್ತಾ, ಬಾಗಿಲ ತೆಗೀರಿ ನಾ ಹೋಗ್ತೀನಿ, ನಮ್ಮಮ್ಮನ ತಾವ ಮಲಕ್ಕೊತೀನಿ

ನಿಮ್ಮಮ್ಮನ ತಾವ ಮಲಗೋಕ್ಕೋಸ್ಕರ ಅಲ್ಲ, ನಿನ್ನ ಇಲ್ಲಿ ಬಿಟ್ಟರೋದು. ಇವತ್ತು ನಂತಾವ ಮಲಕ್ಕೋಬೇಕು. ತಿಳೀತಾ. ಸುಮ್ನೆ ಗಲಾಟೆ ಮಾಡ್ಬೇಡ, ಹತ್ತು ಮಂಚಾನ.

ಈ ಮಾತು ಕೇಳಿದ ಚಿನ್ನಿ ರಾಮೇಗೌಡನತ್ತ ನೋಡಿದಳು. ಇಲ್ಲೀವರೆಗೆ ಅವನ ಮುಖದಲ್ಲಿದ್ದ ಸೌಮ್ಯತೆ ಮಾಯವಾಗಿ ಭೀತಿ ಹುಟ್ಟಿಸು ವಂತ ರೌದ್ರತೆ ತಲೆದೋರಿತು. ಕೆಂಪನೆಯ ಕಣ್ಣು ಸೊಂಪಾಗಿ ಬೆಳೆಸಿ ಅಚ್ಚುಕಟ್ಟಾಗಿ ಕತ್ತರಿಸಿದ ಮೀಸೆ ನೋಡುತ್ತಿದ್ದಂತೆ ಚಿನ್ನಿಯ ಭೀತಿ ಹೆಚ್ಚಾಗತೊಡಗಿತು. ಅನಿಷ್ಟದ ಕಲ್ಪನೆಯಿಂದ ಅವಳ ಮನಸ್ಸು ಕಂಪಿಸಿತು. ಹಸಿದ ಕಣ್ಣುಗಳಿಂದ ರಾಮೇಗೌಡ ಬೆಳ್ಳನೆಯ ಬೊಂಬೆ ಹಾಗಿರುವ ಚಿನ್ನಿಯ ಎಳೆಯ ಆ ಅಂಗಾಂಗಗಳನ್ನು ನೋಡತೊಡಗಿದ್ದ. ಬೆದರಿದ ಚಿನ್ನಿ ಸೆರಗನ್ನು ಪೂರ್ತಿಯಾಗಿ ಎಳೆದುಕೊಂಡು ಎದೆಯ ಭಾಗ ವನ್ನು ಮುಚ್ಚಿಕೊಂಡಳು. ಹತ್ತಿರ ಬಂದ ರಾಮೇಗೌಡ ಮೊದಲು ನೆಲ್ಲನೆ ಕೈ ಹಾಕಿದ. ಕೈ ಬಿದ್ದದ್ದಕ್ಕೆ ಮತ್ತಷ್ಟು ಮುದುಡಿಕೊಂಡು ಬಾಗಿಲಿನ ಕಡೆ ಓಡಿದಳು. ಆದರೆ ರಾಮೇಗೌಡನ ಸುದೀರ್ಘ ಬಲಿಷ್ಠ ತೋಳುಗಳು ಕಬಂಧ ಕೈಗಳಂತೆ ಮುಂದಕ್ಕೆ ಹರಿದು ಚಿನ್ನಿಯನ್ನು ಎಳೆದವು. ರಾಕ್ಷಸನ ಕೈಯೊಳಗೆ ಪುಟ್ಟ ಮೊಲದಂತೆ, ರಾಮೇಗೌಡನ ಕೈಯೊಳಗೆ ಚಿನ್ನಿ ಸೆರೆಯಾದಳು. ಅನಾಮತ್ತಾಗಿ ಎತ್ತಿಕೊಂಡು

ಮಂಚದ ಮೇಲೆ ಮಲಗಿಸಿದ. ಅವನ ಬಿಗಿ ಬಂಧದೊಳಗೆ ಚಿನ್ನಿಗೆ ಉಸಿರು ಕಟ್ಟಿ ಸಾಯುವಂತೆ ಅನಿಸಿತು.

ಇಷ್ಟು ದಿವಸ ಮದುವೆಯ ಸಂಭ್ರಮವನ್ನು ಅನುಭವಿಸಿದ್ದ ಚಿನ್ನಿಗೆ, ಮದುವೆಯ ಸಂಭ್ರಮದ ಸಮಾಪ್ತಿ ಈ ರೀತಿಯಲ್ಲಿ ಕೊನೆಯಾಗುವುದೆಂದು ನಿರೀಕ್ಷಿಸಿರಲಿಲ್ಲ. ಅಪ್ಪ ಅಮ್ಮನ ನೆನಪಿನಿಂದ ಬಿಕ್ಕಿ ಬಿಕ್ಕಿ ಅಳತೊಡಗಿದಳು. ರಾಮೇಗೌಡನಿಗೆ ಹೆಂಡತಿ ಅಳುತ್ತಿರುವುದರಿಂದ ಸಮಾಧಾನ ಮಾಡಬೇಕೆನ್ನಿಸುವುದಕ್ಕಿಂತ ಮತ್ತಷ್ಟು ಸಿಟ್ಟು ಬಂತು. ಚಿನ್ನಿಯ ಸೆರಗನ್ನು ಹಿಡಿದೆಳೆದ. ಚಿನ್ನಿ ಬಿಕ್ಕಿ ಬಿಕ್ಕಿ ಅಳುತ್ತಿದ್ದರೂ ಅದಕ್ಕೆ ಅವಕಾಶ ಕೊಡದೆ ಗಟ್ಟಿಯಾಗಿ ಸೆರಗನ್ನು ಹಿಡಿದುಕೊಂಡು ತನ್ನೆಡೆಗೆ ಜಗ್ಗಿದಳು. ರಾಮೇಗೌಡನ ತಾಳ್ಮೆ ಮುರಿಯಿತು. ಎರಡು ಕೈಗಳಿಂದಲೂ ಚಿನ್ನಿಯ ಕೈಗಳನ್ನು ಬಿಡಿಸಿ ವಿವಸ್ತ್ರಗೊಳಿಸಿದ. ಚಿನ್ನಿ ಚಿಟ್ಟನೆ ಚೀರಿದಳು. ಅದೇ ಹೊತ್ತಿಗೆ ಗೌರಕ್ಕ ನಿದ್ದೆಯಲ್ಲಿ ಬೆಚ್ಚಿದಳು ಕೂಗಲು ಆಗದಂತೆ ಚಿನ್ನಿಯ ಕುಪ್ಪಸವನ್ನೇ ಬಾಯಿಗೆ ತುರುಕಿದ. ಪ್ರಜ್ಞೆಯಿಲ್ಲದೆ ಬಿದ್ದಿದ್ದ ಚಿನ್ನಿಗೆ ಎಚ್ಚರವಾದಾಗ ಮೈ ಮೇಲೆಲ್ಲಾ ಬಿದ್ದ ಗುರುತುಗಳನ್ನು ನೋಡಿದಾಗ ಅಳು ತಡೆಯಲಾಗಲಿಲ್ಲ. ಪಕ್ಕದಲ್ಲಿ ರಾಮೇಗೌಡ ಆರಾಮವಾಗಿ ಮಲಗಿದ್ದಾನೆ. ಚಿನ್ನಿಗೆ ಕತ್ತು ಹಿಸುಕಿ ಬಿಡೋಣವೇ ಎನ್ನುವಷ್ಟು ಸಿಟ್ಟು ಬಂತು. ಆದರೆ ರಾಮೇಗೌಡ ತನಗಿಂತ ಬಲಿಷ್ಟ ಎನ್ನುವುದರ ಅನುಭವವಾಗಿದ್ದರಿಂದ ಹಲ್ಲು ಕಚ್ಚಿಕೊಂಡು ಎದ್ದು, ಸೀರೆ ಸರಿ ಮಾಡಿಕೊಂಡು ದೂರ ನೆಲದ ಮೇಲೆ ಕುಳಿತು ಬೆಳಗಾಗುವುದನ್ನೇ ಹಾರೈಸ ತೊಡಗಿದಳು.

* * *

ಚಿನ್ನಿ ಬಸವೇಗೌಡರ ಮನೆ ತುಂಬಿದಳು ಆದರೆ ಉಡಿ ತುಂಬಿರಲಿಲ್ಲ ರಾಮೇಗೌಡನ ನಡತೆ ಮದುವೆಯಾಗಿ ಮಡದಿ ಮನೆಗೆ ಬಂದರೆ ಸರಿಹೋದೀತೆಂದು ಭಾವಿಸಿದ್ದ ಬಸವೇಗೌಡರಿಗೆ ಈಗ ಅವನ ವರ್ತನೆಯಿಂದ ಮತ್ತಷ್ಟು ಚಿಂತೆಗಿಟ್ಟುಕೊಂಡಿತು. ಪಟ್ಟಣದಲ್ಲಿ ಓದಿ ಬರಲೀಂತ

ಆಸೆ ಪಟ್ಟು ಕಳುಹಿಸಿದರೆ ರಾಮೇಗೌಡ ಕಲಿತು ಬಂದದ್ದೇ ಬೇರೆ. ಹೆಂಗಸರ ವಿಷಯದಲ್ಲಿ ಪ್ರವೀಣನಾದ. ಪೇಟೆಯಲ್ಲಿ ದಿನಕ್ಕೊಂದು ಹೆಣ್ಣಿನ ರುಚಿ ಕಂಡ ರಾಮೇಗೌಡನಿಗೆ ಹಳ್ಳಿಯ ವಾತಾವರಣ ಒಗ್ಗಲಿಲ್ಲ. ಮೊದಲ ರಾತ್ರಿಯ ಅನುಭವದಿಂದ ಹೆಂಡತಿಯ ವಿಷಯದಲ್ಲಿ ಅನಾಸಕ್ತನಾದ. ಚಿನ್ನಮ್ಮನೂ ಆದಷ್ಟೂ ರಾಮೇಗೌಡನಿಂದ ತಪ್ಪಿಸಿಕೊಂಡೇ ತಿರುಗುತ್ತಿದ್ದಳು.

ರಂಗು ಹಚ್ಚಿದ ತುಟಿಗಳ ಮೇಲೆ ಮುಗುಳು ನಗೆ ತಂದುಕೊಂಡು ರಾಮೇಗೌಡನ ಇಂಗಿತವರಿತು ಸ್ವಾಗತಿಸುತ್ತಿದ್ದ ಲಿಲ್ಲಿ, ಪುತಳಿ, ಜಾನಕಿ ಇವರ ನೆನಪಾಯಿತು. ವೃತ್ತಿಯಲ್ಲಿ ಪಳಗಿದ ಇವರೆಲ್ಲ ರಾಮೇಗೌಡನನ್ನು ಖುಷಿಪಡಿಸುತ್ತಿದ್ದರು.

ಇತ್ತೀಚೆಗೆ ಮನೆ ಊಳಿಗಕ್ಕೂ, ಗದ್ದೇಲಿ ಕೆಲಸ ಮಾಡುವುದಕ್ಕೂ ಒಂದೆರಡು ಹೆಣ್ಣಾಳುಗಳು ಬಂದಿದ್ದರು. ಇವರಲ್ಲಿ ಚೆಲುವಿ ರಾಮೇಗೌಡನನ್ನು ನಿರಾಯಾಸವಾಗಿ ಆಕರ್ಷಿಸಿದಳು. ಕಸೆಗಚ್ಚೆ ಹಾಕಿ ಬಿಗಿಯಾಗಿ ಗಂಟು ಹಾಕಿದ ಕುಪ್ಪುಸದೊಳಗಿಂದ ಹೊರಗೆ ಚೆಲ್ಲುತ್ತಿದ್ದ ಅವಳೆದೆಯ ಸೌಂದರ್ಯ, ಎಲೆಯಡಿಕೆ ಹಾಕುತ್ತಿದ್ದುದರಿಂದ ಬಣ್ಣಗಟ್ಟಿದ ತುಟಿ, ಸದಾ ಸುಳಿಯುತ್ತಿದ್ದ ತುಂಟನಗೆ, ಆಸೆಗಳನ್ನು ಹೊತ್ತ ಬೊಗಸೆಗಣ್ಣುಗಳು, ಇವಿಷ್ಟೂ ಗೌಡನನ್ನು ಆಕರ್ಷಿಸಲು ಸಾಕಾಗಿತ್ತು.

ಬತ್ತದ ಗದ್ದೇಲಿ ಸಸಿ ನೆಡ್ತಾ ಯಾವುದೋ ಒಂದು ಹಾಡನ್ನು ಗುಂಯ್ ಗುಡುತ್ತಿದ್ದಳು. ಕಾಳೇಗೌಡರ ಮನೆಗೆ ಹೋಗಬೇಕಾದರೆ ಆ ಗದ್ದೇನ ಹಾದು ಹೋಗ್ಬೇಕಿತ್ತು. ರಾಮೇಗೌಡ, ಕಾಳೇಗೌಡನ ಮಗ ಶಂಕರನ್ನ ಭೇಟಿಯಾಗಬೇಕಂತ ಆ ಕಡೇನೇ ಹೊರಟ. ಬತ್ತದ ಗದ್ದೆಯಿಂದ ಹಾಡಿನ ದನಿ ಕೇಳಿದ. ರಾಮೇಗೌಡ ಸ್ವಲ್ಪ ಹೊತ್ತು ಹಾಗೇ ನಿಂತು ಕೇಳಿದ. ತಮ್ಮ ಗದ್ದೆಯಿಂದಲೆ ಆ ಹಾಡು ಹೊರಟಿದೆ ಅನ್ನೋದೇನೋ ತಿಳೀತು. ಆದರೆ ಹಾಡಿದ್ದಾ್ಯರು ಗೊತ್ತಾಗಲಿಲ್ಲ. ಎಷ್ಟೋ ಮಂದಿ ಕೆಲಸ ಮಾಡ್ತಿದ್ರು. ಅವರಲ್ಲಿ ಯಾರಿರಬಹುದೂಂತ ಕಣ್ಣು ಹುಡುಕಾಡಿತು. ಅಷ್ಟರಲ್ಲಿ ಹಿಂದಿನಿಂದ 'ಬುದ್ಧಿಯವ್ರೆ' ಅನ್ನೋ ಕೂಗು ಕೇಳಿ ಹಿಂದೆ ತಿರುಗಿದರು ಒಂದು ಕ್ಷಣ ಅವನೆದುರು ನಿಂತ ಹೆಣ್ಣನ್ನು

ನೋಡಿ ಸ್ತಬ್ಧರಾದರು. ಸರಸರನೆ ಕಣ್ಣು ಹರಿದಾಡಿತು. ಗಂಟುಬಿಗಿದ ಕುಪ್ಪಸದ ಮರೆಯಿಂದ ಇಣುಕುತ್ತಿದ್ದ ಅವಳ ಮೊಲೆಗಳು ಸೀರೆಯ ಸೆರಗನ್ನು ಮಧ್ಯದಿಂದ ಎಳೆದು ಸೊಂಟಕ್ಕೆ ಸಿಕ್ಕಿಸಿದ್ದರಿಂದ ಮತ್ತಷ್ಟು ಸ್ಪಷ್ಟವಾಗಿ ಕಂಡಿತು. ರಾಮೇಗೌಡರು ಪುಲಕಿತರಾದರು. ಕ್ಷಣ ಮಾತ್ರದಲ್ಲಿ ಕಾಮನೆಗಳು ಕೆರಳಿದವು. ಜೊಲ್ಲು ಸುರಿಸಿದರು. ಇಂಥ ಹೆಣ್ಣು ಊರಲ್ಲಿದ್ದೂ ತಮ್ಮ ಕಣ್ಣಿಗೆ ಇಷ್ಟು ದಿವಸ ಬೀಳದಿದ್ದುದಕ್ಕೆ ಶಪಿಸಿದರು.

ಬಿಟ್ಟ ಬಾಯಿ, ಬಿಟ್ಟ ಕಣ್ಣಿಂದ ನೋಡುತ್ತಿದ್ದ ರಾಮೇಗೌಡರ ಅವಸ್ಥೆ ನೋಡಿ ಚೆಲುವಿಗೆ ನಗು ತಡೆಯಲಾಗಲಿಲ್ಲ. 'ಬಿದ್ದ ಬುಟ್ಟಗೆ ಗೌಡ' ಎಂದುಕೊಂಡಳು ಮನಸ್ಸಿನಲ್ಲಿ ಕೆಣಕುವ, ಆಸೆಯಾಯ್ತು ಕೇಳಿದಳು.

ಬುದ್ಧಿ ಗೌಡರೇ, ಬಾಯೊಳಗೆ ನೊಣ ಓದೀತು, ಏನನ್ನ ಅಂಗೆ ಕಣ್‌ಕಣ್‌ಬಿಟ್ಟು ನೋಡ್ತಿದ್ದೀರಿ. ಇತ್ಲಾಗೇನೂ ಇಲ್ವಲ್ಲ—ಎಂದು ಕಿಸಿ ಕಿಸಿ ನಕ್ಕಳು.

'ಅಯ್ತೀ ಹೆಣ್ಣೇ ನಿನ್ನ ಕಣ್ಣಿಗೆ ಕಾಣೊಲ್ಲ ಅದು ನಮಗೆ ಮಾತ್ರ ಕಾಣುತ್ತೆ' ಹುಸಿನಕ್ಕು ಉತ್ತರಿಸಿದ. ಅಂಜನ ಹಾಕ್ಕೊಂಡಿವ್ರೇನೋ ? ನಿಮಗೆ ಕಾಣೋದು ಎಂಗೈತೆ, ಇವರಿಸ್ತೀರಾ?' ಎಂದು ಮೈ ಕುಲುಕುತ್ತ ಕೇಳಿದಳು.

ಓ ಅದಕ್ಕೇನಂತೆ, ಆದರೆ ಇರೋತಾವ ಕಾಣೋದಿಲ್ಲ.

ನಾಕರೆದೆಡೆಗೆ ಬಂದರೆ ಇನ್ನೂ ಏನೇನೋ ಭಾಳ ತೋರಿಸ್ತೀನಿ. ಬರ್ತೀಯಾ? ತುಂಟ ನಗೆ ನಗುತ್ತಾ ಕೇಳಿದ.

'ಓಗಿ ಬುದ್ಧಿ, ಚಾಷ್ಟೆ ಮಾಡ್ತೀರ' ನಾ ನಿಂ ಜೊತೆ ಬಂದ್ರೆ ನಿಜವಾಗಿ ನೀವು ನೋಡಿದ್ದೆಲ್ಲ ನಂಗೂ ತೋರಿಸ್ತೀರಾ?–ಕೇಳಿದ ಧನಿಯಲ್ಲಿ ತುಂಟ ಬೇಡಿಕೆಯಿತ್ತು.

'ನಂ ಜೊತೆ ಬರೋಕೆ ನಿನಗೆ ಹೆದರಿಕೆ ಅಲ್ಲ, ನಾ ಗಂಡಸು, ನೀ ಹೆಂಗಸು !'

"ಅದೇನಾಗ್ತತು, ಬುದ್ಧಿ–ನೀವು ನಮ್ಮ ಧಣೀರು, ಧಣೀರು ಕರೆದರೆ ಹೋಗಾಕೆ ಯಾಕೆ ಎದರಿಕೆ ಆಗುತ್ತೆ ನೀವೇ ಏಳಿ."

"ಏನಂದೆ? ನಾನು ನಿಮ್ಮ ಧಣೀರ?", ಆಶ್ಚರ್ಯವಿತ್ತು ಪ್ರಶ್ನೆಯಲ್ಲಿ.

"ಹೌದು ಬುದ್ಧಿ ಧಣೀರಾದ ನಿಮಗೇ ನಾವು ಯಾರಂತ ಗೊತ್ತಾಗಲಿಲ್ವಾ? ಹೊಸದಾಗಿ ಬಂದು ಸೇರಿದ ಆಳುಗಳು."

"ಹುಂ ಸರಿ ಹಂಗಾರ ನಾಳೆಯಿಂದ ಈ ಹೊಲದ ಕೆಲಸ ನಾನು ನೋಡ್ಕೊಕೀನಿ ಮಧ್ಯಾಹ್ನ ಮನೀಂದ ಊಟಾನ ಇಲ್ಲಿಗೇ ತಂದ್ಬಿಡು" ಎಂದ.

"ಬುದ್ಧೀ ಇದೆನ್ಮಾತು? ನಾನು ನಿಮಗೆ ಅನ್ನ ತಗಂಬರೋದಾ?" ಕಣ್ಣು ಕೆಕ್ಕರಿಸಿ ಕೇಳಿದಳು

"ಯೇಳಿದಷ್ಟು ಕೇಳು"—ಎಂದವನೇ ಅಲ್ಲಿಂದ ಕಾಳೇಗೌಡನ ಮನೆಗೆ ಹೋಗೋದು ಮರೆತು ಮನೆಗೆ ಮರಳಿದ.

ಮಗ ಇವೊತ್ತು ಮನೇಲಿರುವುದನ್ನು ನೋಡಿದ ಬಸವೇಗೌಡನಿಗೆ ಆಶ್ಚರ್ಯವಾಯಿತು. ಒಳಗೆ ಬರುತ್ತಿದ್ದಂತೆ ತಂದೆ ಮಗನನ್ನು ಪ್ರಶ್ನಿಸಿದ.

ರಾಮಣ್ಣ ಯಾಕೆ ಇವೊತ್ತು ಎಲ್ಲೂ ಓಗಿಲ್ವೇನು, ಯಾರೂ ಜೊತೆ ಸಿಕ್ಕಲಿಲ್ವಾ? ಯಾಕೆ ಒಂಥರಾ ಇದ್ದಿ? ಏನಾಯ್ತು ರಾಮಣ್ಣ? ಬಿಸಿಲಲ್ಲಿ ಸುತ್ತಾಡಿ ಬಂದಿದ್ದೀಂತ ಕಾಣುತ್ತೆ. ಇರು ಈಗಲೇ ಚಿನ್ನವ್ವನಿಗೆ ಹೇಳಿ ಪಾನಕ ತರಿಸ್ತೀನಿ" ಎಂದು 'ಚಿನ್ನವ್ವ' 'ಚಿನ್ನವ್ವ' ಎಂದು ಕೂಗಿದ. ದೇವರ ಮನೆಯಾಗೆ ಸಾಮಾನು ಒರಸುತ್ತ ಕೂತಿದ್ದ. 'ಚಿನ್ನಮ್ಮ' ಮಾವನವರ ಧ್ವನಿ ಕೇಳಿ ಎದ್ದು ಓಡಿ ಬಂದಿದ್ದಳು.

'ಕರೆದ್ರಾ ಮಾವಯ್ಯ?'

"ಔದಮ್ಮ ನೋಡು, ನಿನ್ನ ಗೌಡನಿಗೆ ಬಾಯಾರಿಕೆ ಆಗಯ್ತೆ, ಒಂದು ಚೊಂಬಿನಾಗೆ ಪಾನಕ ತಂದು ಕೊಡವ್ವ.

ಮಾವನ ಮಾತು ಕೇಳಿ, ತಲೆ ತುಂಬಾ ಹೊದ್ದುಕೊಂಡಿದ್ದ ಸೆರಗನ್ನು ಸರಿಸಿ ಗಂಡನತ್ತ ನೋಡಿದಳು. ಆದರೆ ಗಂಡ ತನ್ನ ಕಡೆ ತಿರುಗಲೇ ಇಲ್ಲ. ಬೀದಿ ಕಡೆಗೆ ಮುಖ ಮಾಡಿ ನೋಡುತ್ತಿದ್ದ. ಕಣ್ಣು ಹನಿ ತುಂಬಿತು. ತುಂಬು ಪ್ರಾಯದ ಮೈ. ಮನಸಿನೊಳಗೆ ಮಾಗದ

ಬಯಕೆಗಳು ಕೆರಳಿದ್ದುವು. ಮದುವೆಯ ಹೊಸದರಲ್ಲಿ ಹುಡುಗತನ. ಅರ್ಥವಾಗದ ಬಯಕೆಗಳು. ಆದರೆ ವರ್ಷ ಕಳೆದಂತೆ ಅರಳಿದ್ದ ಯೌವನ ಕಾಮನೆಗಳ ಕಾವಿನಲ್ಲಿ ಚಡಪಡಿಸುತ್ತಿತ್ತು. ಗೌಡನ ಸಹವಾಸಕ್ಕಾಗಿ ಹಂಬಲಿಸುತ್ತಿತ್ತು. ಒಂದು ಸಲ ಗೌಡ ಅವಕಾಶ ಕೊಟ್ಟಿದ್ದರೂ ಸಾಕಾಗಿತ್ತು. ಹೆಣ್ತನವನ್ನು ಸಾಬೀತು ಮಾಡಿ ಬಾಡಿದ ಚಲುವಿನ ಸೆರೆಯಲ್ಲಿ ಇಡ ಬಹುದಾಗಿತ್ತು. ಮದುವೆಯಾದಾಗ ಅರ್ಥವಾಗದ ಭಾವನೆಗಳು ಈಗ ಹಂಬಲ ವಾಗಿವೆ. ಗೌಡ ಕಣ್ಣಿಗೆ ಬಿದ್ದ ಕ್ಷಣ ಅದುಮಿಟ್ಟ ಅವಳ ಆಕಾಂಕ್ಷೆಗಳು ಗರಿ ಬಿಚ್ಚಿದುವು. ಸಣ್ಣದಾಗಿ ಒಳಗೊಳಗೇ ನೆನಪಿಸಿಂದ ಪುಳಕ. ಆಸೆ ಕಣ್ಣುಗಳಿಂದ ನೋಡಿದ್ದ ಅವಳಿಗೆ ಕಂಡದ್ದು ಗೌಡನ ಔದಾಸೀನ. ಮನಸ್ಸು ಮುಲುಗಿತು ಒಂದು ಮಾತು ಧೈರ್ಯವಾಗಿ ಕೇಳೋಣವೆನಿಸಿತು. ಆದರೆ ಮಾವನವರು ಎದುರು ಇರುವುದು ಗಮನಕ್ಕೆ ಬಂದು ಸುಮ್ಮನೆ ತಂದರೆ ಚೊಂಬು, ಲೋಟಗಳನ್ನು ಇಟ್ಟಳು.

ಮಗ ಸೊಸೆಯರ ವಿಷಯ ತಿಳಿದ ಬಸವೇಗೌಡರು ಇಬ್ಬರ ನಡುವಿನ ಬಿರುಕನ್ನು ಬೆಸೆಯಲು ಪ್ರಯತ್ನಿಸಿ ಸೋತರು. ಪಾಪ ! ಚಿನ್ನಿಯದು ತಪ್ಪಿಲ್ಲ ಆದರೂ ಹಾಳಾಗುವುದು ಅವಳ ಬದುಕೇ. ಗಂಡಸಿಗೇನು ನೂರು ಕಡೆ ಹೋಗಿ ತೀಟೆ ತೀರಿಸಿಕೊಳ್ಳುತ್ತಾನೆ. ಅದರಲ್ಲೂ ಮಗನ ವ್ಯವಹಾರದ ವಿಚಾರ ತಿಳಿಯದ್ದೇನೂ ಅಲ್ಲ.

ಸುಮ್ಮನೆ ನಿಂತ ಸೊಸೆಗೆ ಮಾವ ಹೇಳಿದ.

"ಬಗ್ಗಿಸಿ ಗಂಡನಿಗೆ ಕೊಡವ್ವ"

ಅಷ್ಟರಲ್ಲಿ ರಾಮೇಗೌಡ ಕತ್ತರಿಸಿ ಹೇಳಿದ.

ನಾನೇ ಬಗ್ಗಿಸ್ಕೊತೇನೆ ಬಿಡಪ್ಪ— ಎಂದು ಚೊಂಬಿನಲ್ಲಿದ್ದ ಪಾನಕವನ್ನು ಲೋಟಕ್ಕೆ ಬಗ್ಗಿಸಿಕೊಂಡು ಗಟಗಟನೆ ಕುಡಿದು ಎದ್ದ. ಹೊರಡುವ ಪ್ರಯತ್ನದಲ್ಲಿದ್ದ ಗೌಡ ಮಗನನ್ನು ತಡೆದು ನಿಲ್ಲಿಸಿ, ಸೊಸೆಯನ್ನು ಒಳಕ್ಕೆ ಹೊಗೆಂದು ಸನ್ನೆ ಮಾಡಿದ.

ಅಪ್ಪನ ಜೊತೆಗೂ ಹೆಚ್ಚು ಮಾತಾಡದೆ ಇರುತ್ತಿದ್ದ ಮಗನಿಗೆ ಅಪ್ಪನ ಜೊತೆ ವಾದ ಮಾಡೋ ಇಷ್ಟವಿರಲಿಲ್ಲ. ತನ್ನನ್ನು ಉಳಿಸಿ

ಕೊಂಡದ್ದರ ಕಾರಣ ಸೂಕ್ಷ್ಮವಾಗಿ ಅರ್ಥವಾಯಿತು. ಮಾಮೂಲಿನಂತೆ ಈ ದಿನವೂ ಉಪದೇಶಕ್ಕೇ ಇರಬಹುದೆಂದು ಊಹಿಸಿದ.

"ಮಗಾನೋಡು, ನನಗೂ ವಯಸ್ಸಾಯಿತು. ಇನ್ನೇಟು ದಿವ್ಸಾಂತ ಬದುಕಿರ್ತೀನಿ, ಮಗ ಸೊಸಿ ಚಂದಾಗಿ ಒಂದಾಗಿ ಬಾಳೋದ್ನ ನೋಡ್ಬೇಕಂತ ಕಾದು ಕಾದು ಸಾಕಾಯ್ತು. ಒಬ್ಬ ಮೊಮ್ಮಗ ಈ ಅರಮನೇ ತುಂಬಾ ಓಡಾಡ್ತಾನೆ, ತಾತ, ತಾತ ಅಂತ ಪ್ರೀತಿಯಿಂದ ಕರೀತಾನೆ, ನನ್ನ ಸಂಜೆ ಬದುಕಿನಲ್ಲಿ ಬರುವ ಕತ್ತಲ್ನ ಬೆಳಗತಾನೇಂತ ಏಟೊಂದು ಆಸೆ ಇಟಗೊಂಡಿದ್ದೆ. ಆದರೆ ನಿನ್ನ ಯವಾರ ನಿನ್ನ ಬುದ್ಧಿ ಮೊದಲಿನಾಗೇ ಇದೆ ನಿನ್ನ ಯೆಂಡ್ತಿ ಹರೆಯದ ಈ ವಯಸಿನಾಗೇ ಏಟು ನೋವು ತಿಂದಿದ್ದಾಳೋ ಯಾರಿಗ್ಗೊತ್ತು! ಎರವರ ಎಣ್ಣ ಮಗೀನ ಕರಕೊಂಬಂದು ಈಂಗ ಬಾಡಿಸೋದು ನ್ಯಾಯ ಅಲ್ಲ. ಕೊರಗಿ ಕೊರಗಿ ಬಡವಾಗ್ಬಿಟ್ಟಿದ್ದಾಳೆ. ನೀನು ಅನಳ್ನ ಈಂಗ ಸಾಯಿಸೋದು ನಿಂದು ಧರ್ಮ ಅಲ್ಲ. ದ್ಯಾವರು, ದಿಂಡ್ರು ಅನ್ನೋ ಭಯ ಇಲ್ಲ ನಿನಗ. ರಾಮಣ್ಣ ಅಪ್ಪನಾಗಿ ನಿನ್ನ ಸಾನೇನೂ ಕೇಳ್ಕೊಳ್ಳಾಕಿಲ್ಲ, ಆ ಮಗೀಗೆ ಜೀವ ಕೊಡು. ಬದುಕೋಕ ಆಸೆ ಕೊಡು," ಎಂದು ಬೇಡಿದ. ಬಸವೇ ಗೌಡನ ದೈನ್ಯ ಮುಖ ಯಾರನ್ನಾದರೂ ಕರಗುವಂತೆ ಮಾಡುತ್ತಿತ್ತು. ಆದರೆ ರಾಮೇಗೌಡ ಮಾತ್ರ ಹಾಂ, ಹುಂ ಅನ್ನದೆ ಅಪ್ಪನ ಮಾತಿಗೆ ಕಿವಿ ಕೊಡದೆ ಸರಕ್ಕನೆ ಅಲ್ಲಿಂದ ತಿರುಗಿ ನಡೆದ.

ಮಗನ ಈ ಉದ್ಧಟತನ ಮುದಿ ಕಣ್ಣುಗಳಲ್ಲಿ ಕಂಬನಿ ತುಂಬಿತು. ಮಗನ ಯೋಚನೆಯಿಂದಾಗಿ ತೀರಾ ಕೃಶವಾಗಿ ಬಿಟ್ಟಿದ್ದರು ಮೊದಲಿನ ದರ್ಪವಾಗಲೀ, ಅಹಂ ಆಗಲಿ ಬಸವೇಗೌಡರಲ್ಲಿ ಉಳಿದಿರಲಿಲ್ಲ. ಮಗ ಎಂದಿಗಾದರೂ ದಾರಿಗೆ ಬಂದಾನೆಂಬ ಆಸೆ ಸಂಪೂರ್ಣವಾಗಿ ಸೀದು ಹೋಯಿತು. ಮಗ ಹೊರಟ ದಿಕ್ಕನ್ನೇ ನಿಟ್ಟಿಸುತ್ತಾ ಕುಳಿತರು.

* * *

ಊಟಕ್ಕೆ ಅಪ್ಪ ಮಗ ಇಬ್ಬರೂ ಒಟ್ಟಿಗೆ ಕೂತಿದ್ದರು. ಮಾಮೂಲಿನಂತೆ ಚಿನ್ನಮ್ಮ ಮೌನವಾಗಿ ಬಡಿಸುತ್ತಿದ್ದಳು. ಸ್ವಲ್ಪ ಹೊತ್ತು ಯಾರೂ ಮಾತಾಡಲಿಲ್ಲ. ಆದರೆ ಮಗನ ಮುಖದಲ್ಲಿ ಈ ದಿನ

ಬಹಳ ಗೆಲುವಿದ್ದ ಹಾಗಿತ್ತು. ಬಸವೇಗೌಡರು ಮೆಲ್ಲನೆ ನಕ್ಕರು ಮಾವ ನಕ್ಕಿದ್ದನ್ನು ತನ್ನ ಗೌಡನ ಮುಖದಲ್ಲಿ ಗೆಲುವಿದ್ದುದ್ದನ್ನು ಗಮನಿಸಿದಳು. ದೇವರೇ ನನ್ನ ಗೌಡ ನನ್ನವರಾಗಲಿ ಎಂದು ಬೇಡಿ ಕೊಂಡಳು. 'ಕರಿಯಮ್ಮ' ದೇವರಿಗೆ ತನ್ನ ಗಂಡ ಸರಿಹೋಗಿ ನನ್ನ ಹತ್ತಿರ ಬಂದರೆ ಸೀರೆ ಕುಪ್ಪಸ ಕೊಡುವುದಾಗಿ ಹರಕೆ ಹೊತ್ತಳು.

ಊಟ ಮಾಡುತ್ತಲೇ ಮಗ ಗೌಡ ಮಾತು ತೆಗೆದ.

'ಅಪ್ಪ, ಇನ್ಮೇಲೆ ನಾನಿಲ್ಲಿ ಇದ್ದುಕೊಂಡೇ ಹೊಲಗದ್ದೆ ವ್ಯಾಪಾರ ನೋಡ್ಕೊಳ್ತೀನಿ, ಅದರ ಬಗ್ಗೆ ನೀವೇನೂ ಯೋಚನೆ ಮಾಡ್ಬೇಡಿ ಎಂದ.

ಬಸವೇಗೌಡರು ಮುಖ ಎತ್ತಿ ಮಗನನ್ನು ನೋಡಿದರು. ತಮ್ಮ ಕಿವಿಗಳನ್ನು ತಾವೇ ನಂಬಲಾಗಲಿಲ್ಲ. ಮಗ ಹೇಳುತ್ತಿರುವ ಮಾತು ನಿಜವೇನೋ ಎಂದು, ಅವನ ಮುಖ ನೋಡಿದರು. ಹೌದು ಗೌಡನ ಮಾತಿನಲ್ಲಿ ಪ್ರಾಮಾಣಿಕತೆ ಇತ್ತು. ಮಾತು ಕೇಳಿ ಆಶ್ಚರ್ಯವಾದರೂ ಇದ್ದಕ್ಕಿದ್ದಂತೆ ಈ ಮಾರ್ಪಾಟು ಸಂಶಯಪಡುವಂತಾಗಿಸಿತ್ತು. "ಇದು ಚಿನ್ನಮ್ಮನ ಪುಣ್ಯವೇ ಇಲ್ಲ ನನ್ನ ಪುಣ್ಯವೇ ?" ಎಂದು ಆಲೋಚಿಸಿದರು. ಏನೇ ಆದರೂ ಈ ದಿನ ಮಗನಾಡಿದ ಮಾತು ನಿಜವೇ ಆಗಿತ್ತು. ಮನಸ್ಸಿಗೆ ತುಂಬಾ ಉಲ್ಲಾಸವಾಯಿತು. ಮತ್ತಷ್ಟು ಊಟ ಮಾಡ ಬೇಕೆನ್ನಿಸಿತು. "ಚಿನ್ನವ್ವ"ನನ್ನು ಕರೆದು ಇನ್ನೂ ಕೊಂಚ ಅನ್ನವನ್ನು ಬಡಿಸಿಕೊಂಡರು.

ಇಷ್ಟಕ್ಕೇ ಬಸವೇಗೌಡರು ಸುಮ್ಮನಾದರು. ಇನ್ನು ಕೆಣಕುವುದ ರಿಂದ ಕೆಡುತ್ತೆ ಅಂತ ಅನ್ನಿಸಿ ಹೊಟ್ಟೆ ತುಂಬಾ ಊಟ ಮಾಡಿ ಕೈ ತೊಳೆದು ಎದ್ದರು.

ಶುಕ್ರವಾರ ಚಿನ್ನಮ್ಮನಿಗೆ ಐದು ನೀರು. ಮುಸುಕು ಬೆಳಕಿನಲ್ಲಿ ಬೇಗ ಎದ್ದು ಸ್ನಾನ ಮಾಡಿದಳು. ಪೂಜೆ ಮಾಡುವ ಹಾಗಿರಲಿಲ್ಲ. ತನ್ನ ಗೌಡನನ್ನಾದರೂ ವಿಚಾರಿಸಿ ಬರೋಣವೆಂದು ಮಹಡಿ ಮೆಟ್ಟಲು ಹತ್ತಿದಳು. ಮೆಟ್ಟಲ ಮೇಲೇ ಬಾಡಿದ ಮಲ್ಲಿಗೆ ಹೂ ಚೆಲ್ಲಿತ್ತು. ಚಿನ್ನಮ ನಿಗೆ ಏನೋ ಕಸಿವಿಸಿಯಾಯಿತು. ಅಷ್ಟರಲ್ಲಿ ಯಾರದೋ ಹೆಜ್ಜೆ ಸಪ್ಪಳ,

ವ್ಯಕ್ತಿಯೊಂದು ಮೆಲ್ಲನೆ ಬಾಗಿಲು ತೆರೆದುಕೊಂಡು ದಡ ದಡ ಓಡಿದ ಶಬ್ದವಾಯಿತು. ಮಹಡಿ ಇಳಿಯುವುದಕ್ಕೆ ಬೇರೊಂದು ದಾರಿ ಬೀದಿಯ ಕಡೆಯಿಂದ ಇತ್ತು. ಇನ್ನೂ ಅಷ್ಟಾಗಿ ಬೆಳಕಾಗಿರಲಿಲ್ಲ. ಇದೆಲ್ಲ ಏನೆಂದು ಯೋಚಿಸುತ್ತಿರುವಷ್ಟರಲ್ಲಿ ಜೋರಾಗಿ ಬೀದಿ ಬಾಗಿಲ ಸಪ್ಪಳ ವಾಯಿತು. ಮೆಟ್ಟಲೇರಿ ಗೌಡನ ಕೋಣೆಗೆ ಹೋಗಲಿಲ್ಲ. ಬದಲಾಗಿ ಬೀದಿ ಬಾಗಿಲು ತೆಗೆಯಲು ಬಂದಳು.

ಬಾಗಿಲಲ್ಲಿ ನಿಂತಿದ್ದು ಚೆಲುವಿ. "ಚೆಲುವಿ ಯಾಕೆ ಇಷ್ಟು ಬೇಗ ಬಂದಿದ್ದಾಳೆ" ಎಂದು ಮನಸ್ಸು ಪ್ರಶ್ನಿಸಿತು. ಕೇಳಿಯೇ ಬಿಡೋಣ ವೆನಿಸಿ,

"ಇದೇನ್ ಚೆಲುವಿ, ಮುಂಜಾವಿನಾಗೇ ಬಂದು ಬಿಟ್ಟೆದ್ದಿ ? ಅಲ್ದೆ ಇವತ್ತು ಆದರೆ ಬರ್ತೀನಿ ಇಲ್ಲಾಂದ್ರೆ ಇಲ್ಲ ಹೊಟ್ಟೆ ನೋಯ್ತಿದೆ ಅಂತ ಹೇಳಿದ್ದೆ !" ಕುತೂಹಲದಿಂದ ಕೇಳಿದ ಪ್ರಶ್ನೆಯಾಗಿತ್ತು.

"ಏಳಿದ್ದೇನೋ ನಿಜ ಅವ್ವಾವ್ರೆ, ಹೊಟ್ಟೆ ನೋವು ಸ್ವಲ್ಪ ಕಮ್ಮಿ ಯಾಯ್ತು. ಭರಮಣ್ಣ ಔಷಧಿ ಕೊಟ್ಟ, ತಗೊಂಡೆ ಜೊತೆಗೆ ಬುದ್ದೀವ್ರು ಇವತ್ತು ಒಲ್ದಾಗೆ ತುಂಬ ಕೆಲ್ಸ ಐತೆ, ನೀ ಬ್ಯಾಗ ಬಂದು ಗೌಡತಿಗೆ ಏನೇನ್ಬೇಕೋ ಕೆಲಸ ಎಲ್ಲ ಮಾಡಿ ಕೊಟ್ಬಿಟ್ಟು ಒಲಕ್ಕೆ ಬಂದ್ಬುಡಂತ ಏಳಿದ್ರು.

ಚಿನ್ನಮ್ಮ ಚೆಲುವಿಯನ್ನು ನೋಡಿದಳು. ನಿಜವಾಗಿ ಚೆಲುವೀನೇ. ಅವಳ ಮೈ ಮನಸ್ಸಿನ ತುಂಬಾ ಉತ್ಸಾಹ ಉಕ್ಕಿ ಹರೀತಿರೋ ಹಾಗಿತ್ತು. ಚಿನ್ನಮ್ಮನಿಗೆ ತನ್ನೊಂದಿಗಿನ ಪ್ರತಿಸ್ಪರ್ಧಿ ಎನಿಸಿತು. ದಿನಾ ಕೆಲಸಕ್ಕೆ ಬರುತ್ತಿದ್ದ ಚೆಲುವಿಯನ್ನು ಈಗ ಮತ್ತೆ ಮತ್ತೆ ನೋಡಿದಳು. ಎಂದೂ ನೋಡದಿರುವವಳಂತೆ ನೋಡಿದಳು. ಇವತ್ತು ಹಿಂದೆ ಎಂದೂ ಕಾಣದ ಚೆಲುವು ಚೆಲುವಿಯ ಮೈಯಿಂದ ತೊಟ್ಟಿಕ್ಕುತ್ತಿರುವಂತೆ ತೋರಿತು. ಕಣ್ಣು, ತುಟಿಗಳು, ಮೈ ಮಾಟದಲ್ಲಿ ಬಲವತ್ತರ ಆಕರ್ಷಣೆಯಿದೆ. "ನಮ್ಮಿಬ್ಬರ ನಡುವಿನ ಬಿರುಕಿಗೆ ಇವಳೂ ಏಕೆ ಕಾರಣವಿರಬಾರದು" ಎಂದು ಯೋಚಿಸಿದಳು.

ಶಾಮಣ್ಣನ ಹೆಂಡತಿ ಮೊನ್ನೆ ಬಾಳೆಲೆ ಕೇಳೋಕೆ ಬಂದಿದ್ದಾಗ, ಕೆರೆಯಾಚೆಗಿನ ಮಾವಿನ ತೋಪಿನಲ್ಲಿ ದಟ್ಟ ಮರಗಳ ನಡುವೆ ತನ್ನ ಗೌಡ ಮತ್ತು ಈ ಚೆಲುವಿಯನ್ನು ಕಂಡಂತಾಯಿತೆಂದು ಹೇಳಿದ್ದು ನಿಜವಿರ ಬಹುದೇ ? ಸ್ವಲ್ಪ ಹೊತ್ತಿಗೆ ಮುಂಚೆ ಗೌಡನ ಕೋಣೆಯ ಕಡೆಯಿಂದ ಸುಳಿದಂತಾದ ಆಕಾರ ಚೆಲುವಿಯದೇ ಏಕಿರಬಾರದು ? ಆ ಮಲ್ಲಿಗೆ ? ಹೌದು ನಿಸ್ಸಂಶಯವಾಗಿ ಚೆಲುವಿಯೇ" ಎಂದು ಮನಸ್ಸು ಕೂಗಿ ಹೇಳಿತು ಇಷ್ಟು ನಸುಕಿನಲ್ಲಿ ಬಂದಿರುವ ಕಾರಣ ಅದೇ ಇರಬಹುದೇ, ಗೌಡನ ಬಳಿ ಮಲಗಿದ್ದು ಎದ್ದು ಬಂದಿರಬೇಕು" ಎನಿಸಿತು.

ಎಷ್ಟು ಯೋಚಿಸಿದರೂ ಈ ಚೆಲುವಿಯೇ ತನ್ನ ಪ್ರತಿದ್ವಂಧಿ ಎಂಬುದು ನಿಶ್ಚಿತವಾಗತೊಡಗಿತು. ಆದರೆ ಇದರಿಂದ ಮಾಡುವುದಾದರೂ ಏನು ? ಗಟ್ಟಿಯಾಗಿ ಹೇಳುವ ಹಾಗಿಲ್ಲ. ಗೌಡನಿಗೆ ಅವಳು ಸತ್ತಂತೆಯೇ. ಇವಳನ್ನು ಕೆಲಸದಿಂದ ಬಿಡಿಸಿದರೆ ಹೇಗೆ ?—ಎಂದು ವಿವೇಕದ ಆಲೋಚನೆ ಹೊಳೀತು. ಆಲೋಚನೆ ಒಳ್ಳೇದಾದ್ರೂ ಕಾರ್ಯಗತ ಮಾಡುವುದಕ್ಕೆ ಸಾಧ್ಯವಿಲ್ಲವಾಗಿತ್ತು. ಇದರಿಂದ ಗೌಡನ ಮನಸ್ಸು ಮತ್ತಷ್ಟು ಕೆಡಬಹುದು. ಇದಕ್ಕಿಂತ ಪ್ರಯತ್ನಪಟ್ಟು ಗೌಡನನ್ನು ಒಲಿಸಿಕೊಳ್ಳ ಬೇಕು. ಮೇಲೆ ಬಿದ್ದಾದರೂ ತಾನು ಹೆಣ್ಣು, ಅವನನ್ನು ಸಂತೋಷ ಪಡಿಸಬಲ್ಲೆ ? ಅನ್ನುವುದನ್ನು ತೋರಿಸಿಕೊಡಬೇಕು. ಆಗೇನಾದರೂ ಸರಿಹೋದೀತು, ಎಂದು ಅಂದುಕೊಂಡು ಚೆಲುವಿ ಇನ್ನೂ ಹಾಗೇ ನಿಂತಿರುವು ದನ್ನು ನೋಡಿದಳು.

ಚೆಲುವಿ, ನೀನು ಈಗ ಮನೆಗೆ ಹೋಗು, ಸದ್ಯಕ್ಕೆ ನಿನಗೇನೂ ಕೆಲಸವಿಲ್ಲ, ಬೇಕಾದೆ ಏಳಿ ಕಳಿಸ್ತೀನೆ—ಎಂದಳು. ಚೆಲುವಿ ಚಿನ್ನಮ್ಮನ ಮಾತಿಗೆ ಹುಂಗುಟ್ಟಿ ಹೊರಟು ಹೋದಳು.

ಒಂದೆರೆಡು ತಿಂಗಳಾದ ಮೇಲೆ ಚೆಲುವಿ ಕೆಲಸಕ್ಕೆ ಬರೋದನ್ನ ನಿಲ್ಲಿಸಿದಳು. ಮೈಗೆ ಅಲಸ್ಯ ಅಂತ ಹೇಳಿ ಬಿಟ್ಟಳು. ಆದರೆ ಚೆಲುವಿ ಯಲ್ಲಿ ಆಗುತ್ತಿದ್ದ ಪರಿವರ್ತನೆ ಉಳಿದವರೆಲ್ಲ ಗಮನಿಸಿದರು. ಜೊತೆ ಆಳುಗಳು ಬೇರೆಯವರ ಗದ್ದೆ ಮನೆ ಆಳುಗಳಿಗೆಲ್ಲ ಕಿವಿಯಿಂದ ಕಿವಿಗೆ ಬಿದ್ದು ಗೌಡರ ಮತ್ತು ಚೆಲುವಿಯ ವಿಷಯ ಪುಕಾರಾಯಿತು.

ಹರುಕು ಮುರುಕು ಸೀರೆ ಉಡುತ್ತಿದ್ದ ಚೆಲುವಿ ಈಗ ಚೆನ್ನಾಗಿರುವ ಸೀರೆ ಉಡುವುದಿರಲಿ ಅಲ್ಪ ಸ್ವಲ್ಪ ಚಿನ್ನದ ಒಡವೆಗಳೂ ಮೈ ಅಲಂಕರಿಸಿದ್ದುವು ಎಲ್ಲಕ್ಕಿಂತ ಚೆನ್ನಾಗಿ ಕಂಡದ್ದು ಕೆಂಪಿನ ಓಲೆ ಚಿನ್ನಮ್ಮನ ಕಿವಿಯಲ್ಲಿ ನೋಡಿದ್ದವರಿಗೆ ಗುರುತು ಹಚ್ಚುವುದು ಕಷ್ಟವೇನೂ ಆಗಲಿಲ್ಲ. ಚೆಲುವಿ ಕಿವಿಗೆ ಬಂದದ್ದು ಹೀಗೆ,

ಚಿನ್ನಮ್ಮನ ಕಿವಿಯ ಓಲೆಯನ್ನು ನೋಡಿದಾಗಿನಿಂದಲೂ ಚೆಲುವಿಯ ಕಣ್ಣು ಕರುಬುತ್ತಿತ್ತು. ತುಂಬಾ ಚೆನ್ನಾಗಿದೆಯೆಂದು ಅದನ್ನು ಮೆಚ್ಚಿದ್ದಳು. ಆ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಕ್ಕೆ "ಚಿನ್ನಮ್ಮ", ನಿನ್ನ ಗಂಡನ್ನ ಕೇಳಿ ಮಾಡಿಸಿಕೋ ಎಂದು ಹೇಳಿದ್ದಳು. ಆ ಪ್ರಸಂಗ ಅಷ್ಟಕ್ಕೇ ಮುಗಿಯಿತು. ಕೆಂಪಿನ ಓಲೆ ಅತ್ತೆಯವರದು, ಎಂದೋ ಒಮ್ಮೆ ಹಾಕಿಕೊಂಡು ತೆಗೆದಿರುಸುತ್ತಿದ್ದಳು. ಆದರೆ ಈ ಒಂದು ತಿಂಗಳಿಂದ ಆ ಓಲೆ ಕಾಣಲಿಲ್ಲ. ಹುಡುಕಾಡಿವರೆ ಸಿಕ್ಕಲಿಲ್ಲ. ಚಿನ್ನಮ್ಮನಿಗೆ ನೆಮ್ಮದಿಯಿಲ್ಲದೆ ಹೋಯಿತು. ಬಸವೇಗೌಡರಿಗೆ ಓಲೆ ಹೋದದ್ದು ಬಾಧೆಯಿಲ್ಲ. ಹೆಂಡತಿಯ ನೆನಪಿಗೆ ಉಳಿದಿದ್ದುದು ಅದು ಒಂದೇ. ಮೊಟ್ಟ ಮೊದಲ ಬಾರಿ ಮಡದಿಗೆ ಮಾಡಿಸಿಕೊಟ್ಟ ಪ್ರೀತಿಯ ಕಾಣಿಕೆ. ಅದಕ್ಕೇ ಅವರಿಗೆ ಅಷ್ಟು ನೋವಾದ್ದು. ಆದರೆ ಆ ನೋವಿನಲ್ಲಿ ರಾಮೇಗೌಡ ಬೇರೆಯಾಗಿಯೇ ಉಳಿದ. ಬರೀ ಒಂದು ಜೊತೆ ಓಲೆಗೆ ಏನೋ ಮುಳುಗಿ ಹೋದಂಗೆ ಆಡುತ್ತಿದ್ದೀರಿಂತ ಪರೋಕ್ಷವಾಗಿ ಬೈದು ಹೋಗಿದ್ದ, ಆದರೆ ಆಮೇಲೆ ಊರವರಿಂದ ಕೇಳಿದ ಗುಸು ಗುಸು ಮಾತು. ಈಗ ನೋಡಿದರೆ ಧೈರ್ಯವಾಗಿ ಚೆಲುವಿ ಅದನ್ನು ಹಾಕಿಕೊಂಡು ಚಿಕ್ಕ ಧಣೀರು ಕೊಡಿಸಿಕೊಟ್ಟರು ಅನ್ನೋದನ್ನೂ ಪ್ರಚಾರ ಮಾಡೋದಿಕ್ಕೆ ಶುರು ಮಾಡಿದ್ದಳು. ಗೌಡನ ಕೇಳಿದ್ದಕ್ಕೆ, ಹೌದು ಕೊಟ್ಟೆ ನನ್ನ ಅಮ್ಮನ ವಸ್ತು ನಾನು ಯಾರಿಗಾದರೂ ಕೊಡ್ತೇನೆ, ನೀನ್ಯಾರು ಕೇಳೋಕೆ ಅಂತ ಬಾಯಿ ಬಡಿದಿದ್ದ. ಹೀಗಾಗಿ ತಿಳಿದೂ ತಿಳಿದೂ ಚಿನ್ನಮ್ಮ ಸುಮ್ಮನೆ ಬಾಯಿಗೆ ಬೀಗ ಹಾಕಿಕೊಂಡಿದ್ದಳು

ಗೌಡನಿಗೆ ಚೆಲುವಿ ತನ್ನ ಬಸಿರಿನ ವಿಷಯ ಹೇಳಿದಾಗ ಬೆಚ್ಚಿಬಿದ್ದ. ಗೌಡನಿಗೆ ಅನಿಸಿತ್ತು, ಈ ಚೆಲುವಿ ಭಾಳ ಸಲುಗೆ ತಗೋತಿದ್ದಾಳೇಂತ.

ನೇರಾಗೇ ಇದು ರಾಮೇಗೌಡನ ಮಗ ಅಂತ ಬೇಕು ಬೇಕಂತ್ಲೆ ಡಂಗೂರ ಸಾರಿಕೊಂಡು ಬರ್ತಾಳೆ. ಆಳುಗಳ ಜೊತೆಯಲ್ಲಿ ಚೆಲುವಿಯು ಅಂತಸ್ತು ಬೆಳೆದಿತ್ತು. ರಾಮಣ್ಣಗೌಡರು ಮಡಿಕೊಂಡವ್ರೆ" ಅನ್ನೋದು ಎಲ್ಲರಿಗೂ ಗೊತ್ತಿತ್ತು. ಚೆಲುವಿಯು ತಲೇನೆ ನಿಲ್ಲುತ್ತಿರಲಿಲ್ಲ. ಉಳಿದ ಆಳುಗಳ ಮೇಲೆ ದರ್ಪ ಚಲಾಯಿಸುವುದಕ್ಕೂ ಪ್ರಯತ್ನಿಸಿದಳು. ಕೆಲಸಕ್ಕೆ ಎಷ್ಟೋ ದಿವಸದಿಂದ ಬಂದಿರಲಿಲ್ಲ. ಚೆಲುವಿ ಹಟ್ಟಿ ಪಕ್ಕದಲ್ಲಿರುವವರು ಗುಟ್ಟಾಗಿ ಪಿಸುಗುಟ್ಟಿದರು, ಚೆಲುವಿ ನೋವು ತಿಂತಿದ್ದಾಳೆ" ಅಂತ. ಎಲ್ಲರೂ ಊಹಿಸಿದ್ದ ವಿಷಯವಾದ್ದರಿಂದ ಯಾರೂ ಆಶ್ಚರ್ಯ ಪಡಲಿಲ್ಲ.

ರಾತ್ರಿ ಗುಟ್ಟಾಗಿ ಗೌಡ ಎದ್ದು ಚೆಲುವಿ ಮನೆಗೆ ಹೋದ. ಹಟ್ಟಿ ತುಂಬಾ ಜನ ತುಂಬಿದ್ದರು. ಎಲ್ಲಾ ನೋಡ್ತಾರೇಂತ ಅಲ್ಲಿಂದ ಮತ್ತೆ ಕಾಲ್ತೆಗೆದು ಕೆರೆ ಏರಿ ಉದ್ದಕ್ಕೂ ನಡೆದುಕೊಂಡು ಹೋಗಿ ಹನುಮಂತ ರಾಯನ ಗುಡಿ ಜಗುಲಿ ಮೇಲೆ ಕೂತ.

ಯಾವೊತ್ತೂ ಗೌಡನ ಮನಸ್ಸು "ಚಿನ್ನಮ್ಮ"ನ ವಿಚಾರ ಯೋಚಿಸಿರಲಿಲ್ಲ. ಇವತ್ತು "ಚಿನ್ನಮ್ಮ" ಗೌಡರ ಕಣ್ಣಲ್ಲಿ ನಿಂತಳು. ಮನಸ್ಸಿನೊಳಗೆ ಇಳಿದಳು. ಕತ್ತು ಹಿಸುಕಿ ಎಸೆದ ಭಾವನೆಗಳನ್ನು ಬದುಕಿಸಿದಳು. ಅರಿವಿಲ್ಲದೆ ಗೌಡನ ಬಾಯಿಂದ "ಚಿನ್ನಿ" "ಚಿನ್ನಿ" ಅನ್ನುವ ಎರಡು ಮಾತು ಹೊರಟಿತು. ಚೆಲುವಿ ಚಿನ್ನಿ ಮನಸ್ಸಿನಲ್ಲಿ ಇಬ್ಬರೂ ಸುಳಿದಾಡಿದರು.

ಎತ್ತಿನ ಗಾಡಿ ಸದ್ದಾಯಿತು. ಗೌಡನ ಆಲೋಚನೆಗಳು ಮುಗಿದಿರಲಿಲ್ಲ. ಎತ್ತಿನಗಾಡಿ ಹತ್ತಿರ ಬಂತು. ಗಾಡಿಗೆ ತಗುಲಿಸಿದ್ದ ಲಾಟೀನ್ ದೀಪದ ಬೆಳಕು ಸ್ವಲ್ಪವಾಗಿ ಗೌಡನ ಮೇಲೆ ಬಿತ್ತು. ಭರಮಣ್ಣ ಆ ಬೆಳಕಿನಲ್ಲಿ ಅಷ್ಟು ಹೊತ್ತಿನಲ್ಲಿ ಕಟ್ಟೆಯ ಮೇಲೆ ಕೂತಿರುವ ವ್ಯಕ್ತಿ ಯಾರೆಂದು ಬಗ್ಗಿ ಗಮನಿಸಿ ನೋಡಿದ ಗೌಡ, ಊರ ಧಣಿ ಬಸವೇಗೌಡರ ಮಗ ರಾಮೇಗೌಡರು. ಗಾಡಿಯಿಂದಲೇ ಕೂಗಿದ "ಚಿಕ್ಕ ಧಣೀರ" !

ಕೂಗಿನಿಂದ ಎಚ್ಚೆತ್ತವನಾಗಿ ಕೇಳಿದ—ಯಾರದು ?

"ನಾನು ಭರಮಣ್ಣ, ಪ್ಯಾಟೆಯಿಂದ ಸಾಮಾನ ತರಬೇಕಿತ್ತ. ತಡವಾಗೋಯ್ತು. ಧಣೇರೆ ಇದೇನು ನೀವೊಬ್ಬರೇ ಇಲ್ಲಿ, ಇಷ್ಟ ಪೊತ್ತಿನಾಗೆ ಬಂದು ಕುಂತೀರಿ" ವೈಗೆ ಚಂದಾಕಿಲ್ವ ?

ಗೌಡನಿಗೆ ಏನುತ್ತರ ಕೊಡವುದೆಂದು ತೋಚಲಿಲ್ಲ. ಆದರೂ ಏನಾದರೂ "ಹೇಳ್ಬೇಕಲ್ಲ" ಅಂದುಕೊಂಡು,

ಅಂಥದ್ದೇನೂ ಇಲ್ಲ ಭರಮ. ಯಾಕೋ ಸರಿಯಾಗಿ ಸಿದ್ದ ಬರಲಿಲ್ಲ. ಹಾಗೇ ದಾರಿಗುಂಟ ನಡೀತಾ ಬಂದೆ, ಕಾಲು ಸೋತಿತು ಅದಕ್ಕೆ ಹಾಗೇ ಇಲ್ಲಿ ಸ್ವಲ್ಪ ಹೊತ್ತು ಕೂತುಕೊಂಡೆ" ಅಂತ ಹೇಳಿದ.

ಆದರೆ ಆ ಮಾತು ಅಷ್ಟು ಸಮಾಧಾನಕರವಾಗಿರಲಿಲ್ಲ. ಭರಮನಿಗೆ ಸಂದೇಹ ಬಂತು ತೋರಿಸಿಕೊಳ್ಳಲಿಲ್ಲ.

"ಬನ್ನಿ ಧಣೇರೆ ಮನೆತಾವ ಇಳಿಸಿ ಓಯ್ತೀನೆ" ಅಂದ. ಗೌಡ ಪ್ರತಿ ಆಡಲಿಲ್ಲ. ಸುಮ್ಮನೆ ಎದ್ದು ಬಂದು. "ಹಾಗೆ ಮಾಡು ಭರಮ, ಮನೇತಾವ ಇಳಿಸಿ ಹೋಗು" ಗಾಡಿ ಹೊರಟಿತು. ರಾತ್ರಿಯ ಮೌನ ವನ್ನು ಕದಡಿದ ಸದ್ದೆಂದರೆ ಕೊರಳಿಗೇ ಕಟ್ಟಿದ್ದ ಗೆಜ್ಜೆ, ಗಂಟೆ ಶಬ್ದ ದಾರಿಯಲ್ಲಿ ಯಾರೂ ಮಾತಾಡಲಿಲ್ಲ.

ಭರಮನಿಗೂ ಗೌಡ, ಚೆಲುವಿಯ ವಿಷಯ ತಿಳಿದಿತ್ತು. ಹೆಂಡತಿ ಗಂಗಿ ಭರಮನಿಗೆ ಸುದ್ಧಿ ಮುಟ್ಟಿಸಿದ್ದಳು. ಚೆಲುವಿಗೆ ಒಂದೆರೆಡು ದಿವ್ಸದಾಗೆ ಮಗು ಉಟ್ಟತೈತೆ, ಅಂತ ಹೇಳಿದ್ದಳು. ಅದರ ಪ್ರಕಾರ ಇವತ್ತು ಆಗಿದ್ದರೂ ಆಗಿರಬಹುದು ಚೆಲುವಿ ಹಟ್ಟಿಗೆ ಈ ಹನುಮಂತ ರಾಯನ ಗುಡಿ, ಹತ್ತಿರವೂ ಇತ್ತು. ಭರಮ ಲೆಕ್ಕಾಚಾರ ಹಾಕಿದ.

ಮನೆ ಬಂತು, ಗೌಡ ಭರಮನಿಗೆ ನಿಲ್ಲಿಸುವುದಕ್ಕೆ ಹೇಳಿದ. ಗೌಡ ಇಳಿದು ಭರಮನಿಗೆ ನಾಳೆ ಬೆಳಗ್ಗೆ ಬಂದು ನೋಡುವುದಕ್ಕೆ ಹೇಳಿ; ಅಂಗಳ ದಾಟಿ ಒಳಗೆ ಹೋದ. ಹಿತ್ತಲಿನಿಂದ ಹತ್ತಿ ಒಳಗೆ ಹೋಗೋಣವೆಂದೆನ್ನಿ ಸಿತು. ಮರುಕ್ಷಣದಲ್ಲಿಯೇ ತನ್ನಂಥವನು ಕಳ್ಳತನದಿಂದ ಹೋಗುವುದು ಅಪಮಾನವೆಂದೆನಿಸಿ ಬಾಗಿಲು ತಟ್ಟಿದ. ಹೊರಗೆ ನಾಯಿಗಳು ಒಂದೇ ಸಮನೆ ಬೊಗಳುತ್ತಿದ್ದವು. ಯಾರಿಗೂ ಎಚ್ಚರವಾದ ಹಾಗೆ ತೋರಲಿಲ್ಲ. ಮತ್ತೊಮ್ಮೆ ಜೋರಾಗಿ ತಟ್ಟಿದ. ಸಾಮಾನ್ಯವಾಗಿ ಹಾಲಲ್ಲೇ ಹಗ್ಗದ

ಮಂಚದ ಮೇಲೆ ಮಲಗುತ್ತಿದ್ದ. ಇತ್ತೀಚೆಗೆ ವಿಪರೀತ ಉಬ್ಬಸ ಕೆಮ್ಮುಗಳಿಂದಾಗಿ ನಿದ್ದೆ ಹತ್ತುತ್ತಿರಲಿಲ್ಲ, ಹಾಗಾಗಿ ಎಚ್ಚರಿಕೆಯಿಂದಲೇ ಇರುತ್ತಿದ್ದರು. ಈಗಲೇ ಇನ್ನೂ ರೆಪ್ಪೆ ಹತ್ತಿತ್ತು. ಬಾಗಿಲ ಬಡಿತ ಹೆಚ್ಚಾದಾಗ ಬಸವೇಗೌಡರು ಎಚ್ಚರಗೊಂಡರು. ಜೊತೆಗೆ ಕೆಮ್ಮು ಶುರುವಾಯಿತು. ಕೆಮ್ಮಿದ ಶಬ್ದದಿಂದ ಗೌಡ, "ಅಪ್ಪ" ಎಚ್ಚೆತ್ತಿದ್ದಾರೆ ಅಂದುಕೊಂಡ. ಬಸವೇಗೌಡರು ತಡವರಿಸುತ್ತಲೇ ಎದ್ದು ಬಂದು ಬಾಗಿಲ ಚಿಲಕ ತೆಗೆದು ನಿದ್ದೆಗಣ್ಣಲ್ಲೇ ಮಗನನ್ನು ನೋಡಿದರು. "ಇಷ್ಟೊತ್ತಿನಾಗೆ ಎಲ್ಲೋಗಿದ್ದೆ ರಾಮು"—ಎಂದು ಕೇಳಿದರು. ಗೌಡ ಕೇಳಿಯೂ ಕೇಳದವನಂತೆ, ನೀ ಸುಮ್ಮನೆ ಹೋಗಿ ಮಲಕ್ಕೊ, ಬೆಳಗ್ಗೆಗೆಲ್ಲ ಮಾತು" ಎಂದು ಸರಸರನೆ ತನ್ನ ಕೋಣೆಯ ಕಡೆಗೆ ಹೆಜ್ಜೆಯಿಟ್ಟ.

ಕೋಣೆ ಒಳಗಡೆ ಯಾರೋ ಇದ್ದ ಹಾಗಿತ್ತು. ಯಾವಾಗಲಾದರೂ ಚಿನ್ನಮ್ಮ ಹಾಸಿಗೆ ತೆಗೆದು ಶುಚಿ ಮಾಡೋಕೆ ಬರುತ್ತಿದ್ದುದುಂಟು. ಆದರೆ ಇಷ್ಟು ಹೊತ್ತಿನಲ್ಲಿ ಯಾವಾಗಲೂ ಯಾರೂ ತನ್ನ ಕೋಣೆಯನ್ನು ಪ್ರವೇಶಿಸುತ್ತಿರಲಿಲ್ಲ ಚಿನ್ನಮ್ಮನೇ ಇರಬೇಕೆಂದುಕೊಂಡ. ಚಿನ್ನಮ್ಮ ಈ ದಿನ ಮೊಂಡು ಧೈರ್ಯ ಮಾಡಿ ಕೋಣೆಯನ್ನು ಪ್ರವೇಶಿಸಿ ಗೌಡನ ಬರುವಿಗಾಗಿ ಕಾದು ಕುಳಿತಳು. ನಿದ್ದೆಯಿಂದ ಕಣ್ಣು ಎಳೆದುಕೊಂಡು ಹೋಗುತ್ತಿತ್ತು. ರೆಪ್ಪೆ ಭಾರವಾಗಿತ್ತು. ಆದರೂ ತಡೆದುಕೊಂಡು ಕಾದು ಕುಳಿತಳು. ಇವತ್ತು ಯಾವುದೂ ನಿರ್ಧಾರವಾಗಬೇಕಿತ್ತು. ಗೌಡ ತನ್ನವನಾಗಲೇಬೇಕು, ಇಲ್ಲ ಊರ ಕೆರೆಗೆ ಹಾರಬೇಕು. ಈ ನಿರ್ಧಾರಕ್ಕೆ ಬಂದೇ ಇಂಥ ಸಾಹಸಕ್ಕೆ ನುಗ್ಗಿದಳು. ಗೌಡನನ್ನು ಎದುರಿಸುವ ಸಾಹಸಕ್ಕೆ ಹೋಗಿರಲಿಲ್ಲ ಗೌಡನಿಗಂತೂ ಹೆಂಡತಿಯೆಂದರೆ ಲಕ್ಷ್ಯವೇ ಇಲ್ಲ. ಅಪರಿಚಿತರಂತೆ ಒಬ್ಬರಿಗೊಬ್ಬರು ಒಂದು ಮನೆಯಲ್ಲಿದ್ದರು.

ಚರಕು ಬರಕು ಎಂದು ಗಂಡನ ಚಪ್ಪಲಿ ಶಬ್ದ ಕೇಳಿ ಹಾಸಿಗೆಯ ಮೇಲೆ ಕುಳಿತ ಚಿನ್ನಮ್ಮ ಎದ್ದಳು. ಎದೆ ಡವಡವಗುಟ್ಟುತ್ತಿತ್ತು. ಪ್ರಸ್ತದ ರಾತ್ರಿಯಂತೆಯೇ ಕೋಣೆಯನ್ನು ಅಲಂಕರಿಸಿಕೊಂಡಿದ್ದಳು. ಎದ್ದು ಬಂದು ಬಾಗಿಲು ತೆಗೆದಳು. ಸೂಚ್ಯವಾಗಿ ಗೌಡನಿಗೆ ಆಹ್ವಾನ.

ಗೌಡ ಒಂದೊಂದು ಹೆಜ್ಜೆ ಮುಂದೆ ಇಡುವಲ್ಲಿ, ಹೋಗುವುದೋ ಬೇಡವೇ ಎಂದು ತಲೆ ಯೋಚಿಸಿದರೂ, ಮನಸ್ಸು ಅವನನ್ನು ದೂಡುತ್ತಿತ್ತು; ಮುಂದು ಮುಂದಕ್ಕೆ. ಹೊಸ್ತಿಲಲ್ಲಿ ನಿಂತ ಗೌಡನ ಬಳಿಗೆ ಬಂದ ಚಿನ್ನಮ್ಮ ಗೌಡನ ಕಾಲಿಗೆ ಬಿದ್ದಳು. ಹಿಂಜರಿದು ನಿಂತ. ಕುಳಿತೇ ಇದ್ದ ಚಿನ್ನಮ್ಮನನ್ನು ಎಬ್ಬಿಸಲು ಕೈ ಮುಂದೆ ಬಂದು ಹಿಂದೆ ಸರಿಯಿತು. ಎಷ್ಟು ಹೊತ್ತು ಈ ದೃಶ್ಯವಿತ್ತೋ! ಗೌಡನಿಗೆ ತಡೆಯಲಾಗಲಿಲ್ಲ. ಮದುವೆಯ ದಿನಗಳು ನೆನಪಾದವು. ಚಿನ್ನಿಯ ಮುಗ್ಧ ಮುಖ ನೆನಪಾಯಿತು. ಆದರೆ ಈಗ ನೋಡಿದ. ಚಿನ್ನಿ ಎಷ್ಟು ಸೊಂಪಾಗಿ ಬೆಳೆದವಳೇ! ಮೊದಲಿನ ಹಾಗಿಲ್ಲ. ಈಗ ಹೆಂಗಸಂತೆ ಇದ್ದಾಳೆ. ಗೌಡನ ಸಂಯಮ ಮುರಿಯತೊಡಗಿತು. ಪ್ರಬುದ್ಧ ಚಿನ್ನಿ ಗೌಡನ ದುರ್ಬಲತೆಯನ್ನು ಅರಿತಳು. ಕಣ್ಣುಗಳಿಂದಲೇ ಗೌಡನನ್ನು ಆಹ್ವಾನಿಸಿದಳು. ಮೋಹಕ ಭಂಗಿಯಲ್ಲಿ ನಿಂತ ಚಿನ್ನಿಯನ್ನು ಬಿಗಿದಪ್ಪಿದ. ಚಿನ್ನಿ ಅವನ ಪ್ಪುಗೆಯಲ್ಲಿ ಏನೋ ಹೊಸತನವನ್ನು ಅನುಭವಿಸಿದಳು. ವಂಚಿತ ಮಾದಕ ಅನುಭವ ಅವಳ ಆಸೆಯನ್ನು ಮತ್ತಷ್ಟು ಕೆರಳಿಸಿದುವು. ಗೌಡನ ಸಂತೋಷಕ್ಕೆ ಸಹಕರಿಸಿದಳು. ಗೌಡನ ಮನಸ್ಸಿನಲ್ಲಿ ರಾಸಮಾಡುತ್ತಿದ್ದ ಹೆಣ್ಣುಗಳೆಲ್ಲ ಕರಗಿ ಮರೆಯಾಗುತ್ತಿರುವಂತೆನಿಸಿತು. ಬುಗುರಿಯಂತೆ ಸುತ್ತುತ್ತಿರುವ ಅನುಭವ. ಎಷ್ಟೊಂದು ಹೆಣ್ಣುಗಳನ್ನು ಕಂಡಿಲ್ಲ ಗೌಡ! ಯಾರಲ್ಲಿಯೂ ಕಾಣದ ತೃಪ್ತಿ! "ಚಿನ್ನಿ" ಎಂದು ಕರುಳಾಳದಿಂದ ಕೂಗಬೇಕೆನಿಸಿತು ಗೌಡ ತನಗೆ ಸೋತಿದ್ದಾನೆ. ಇನ್ನು ಖಂಡಿತ ತನ್ನನ್ನು ಬಿಡುವುದಿಲ್ಲ. ಕಪ್ಪು ಬದುಕಿನಲ್ಲಿ ಒಂದು ಬೆಳ್ಳಿಗೆರೆ. ಬಂಜರು ಭೂಮಿಯಲ್ಲಿ ಮೊಳಕೆ ಬೆಳೆ. ಗೌಡನ ದೃಷ್ಟಿಯಲ್ಲಿ "ಏರುತ್ತೇನೆ" ಎನ್ನುವ ಭಾವ ಚಿನ್ನಿಯನ್ನು ಮುತ್ತಿತು ಇಷ್ಟು ವರ್ಷ ಎಂಥ ಅನುಭವದಿಂದ ವಂಚಿತಳಾಗಿದ್ದೆ ಎಂದುಕೊಂಡಳು ಚಿನ್ನಿ........

* * *

ಕೃಶವಾಗಿ ಮಂಚದ ಮೇಲೆ ಮಲಗಿದ್ದ ಗೌಡನತ್ತ ನೋಡಿದಳು. ಪಟ್ಟಣದಿಂದ ದೊಡ್ಡ ದೊಡ್ಡ ಡಾಕ್ಟರು ಬಂದು ಚಿಕಿತ್ಸೆ ನೀಡುತ್ತಿದ್ದಾರೆ. ಗೌಡನಿಗೆ ಹೆಣ್ಣಿನ ಸಹವಾಸವೇ ಕೂಡದು. ತನ್ನ

ಭಾಗ್ಯದ ಕಣ್ಣು ತೆರೆದಿದೆ ಎಂದುಕೊಂಡ ಚಿನ್ನಿಗೆ ಈ ಆಘಾತ ಸಹಿಸುವು ದಕ್ಕೆ ಮೀರಿದ್ದಾಗಿತ್ತು. ಆದರೆ ವಸ್ತು ಸ್ಥಿತಿ ಒಪ್ಪಿಕೊಳ್ಳಲೇ ಬೇಕಾಗಿತ್ತು.

ಗೌಡ ಚಿನ್ನಿಯ ಸಂಬಂಧ ಏನಿದ್ದರೂ ಒಂದು ಸತ್ತ ಮಗುವಿನ ಸೂತಕದಾಗಿತ್ತು. ಇನ್ನು ಮುಂದಾದರೂ ವಂಶದ ಬಳ್ಳಿ ಚಿಗುರುತ್ತೆಂದು ಭಾವಿಸಿದ್ದ ಬಸವೇಗೌಡನಿಗೆ ಮಗನ ಪರಿಸ್ಥಿತಿಯಿಂದ ಆಶಾಭಂಗ ವಾಯಿತು. ಇದೇ ಕೊರಗಿನಲ್ಲಿ ಹೋದ ವರುಷ ತೀರಿಕೊಂಡ. ಡಾಕ್ಟರ ಮಾತು ಮೀರಿ ನಡೆದರೆ ಗಂಡ ಹೆಂಡರಿಬ್ಬರಿಗೂ ಅಪಾಯವಿದೆಯೆಂಬ ಎಚ್ಚರಿಕೆಯ ಮಾತು ಭೀತಿಯ ಕಡಿವಾಣವನ್ನು ಹಾಕಿತ್ತು.

ಗೌಡನಲ್ಲಿ ಯೋಜನದಂತರ ಬದಲಾವಣೆಯಾಗಿತ್ತು. ಹುಲಿ ಯಂತಹ ವ್ಯಕ್ತಿ ಹಸುವಾಗಿದ್ದ. ಕಲ್ಲು ಕರಗುವ ಮೇಣವಾಗಿತ್ತು. ಗಂಡು ಗೌಡನ ಕಣ್ಣು ನೀರೂಟೆಗಳಾಗಿದ್ದವು. ಹೆದರಿ ಸಾಯುತ್ತಿದ್ದ ಚಿನ್ನಿ ಈಗೀಗ ಆತ್ಮೀಯತೆ ಬೆಳೆಸಿಕೊಂಡಿದ್ದಳು. ಮೊದಲೇ ಮೂಟೆ ರೋಗಗಳಿದ್ದ ಗೌಡನಿಗೆ ಫೆರಾಲಿಸಿಸ್ ಬೇರೆ.

ದಿನ ಬೆಳಗಾದರೆ ದೇವರಲ್ಲಿ ಹರಕೆ ಹೊರುವುದಷ್ಟೇ ಚಿನ್ನಿಯ ಪಾಲಿಗೆ. ಇದ್ದ ಬದ್ದದ್ದೆಲ್ಲ ಗೌಡನ ಚಿಕಿತ್ಸೆಗೆ ಖರ್ಚಾಗುತ್ತಿತ್ತು. ನೋಡಿಕೊಳ್ಳುವುದಕ್ಕೆ ಯಾರೂ ಇಲ್ಲದೆ, ಗೇಣಿ ವಸೂಲಾಗದೆ, ಗೇಣಿದಾರರಿಗೆ ಹೇಳುವವರು ಕೇಳುವವರು ಇಲ್ಲದೆ ಮನಸ್ವಿ ವ್ಯವಹರಿಸು ತ್ತಿದ್ದರು.

ಇದ್ದದ್ದು ಬರೀ ಕೊಂಪೆಯೊಂದೇ, ಗೌಡನಿಗೆ ವಾಸಿಯಾದರೆ ಸಾಕು, ಗಂಜಿ ಬದುಕಾದರೂ ಬದುಕಬಹುದಾಗಿತ್ತು. ಆದರೆ ಆದರೆ... ತನ್ನ ಕುಂಕುಮ ಬಲ ಕುಸಿಯುತ್ತಿತ್ತು. ದೊಡ್ಡದಾಗಿ ಪ್ರಪಾತದ ಬಾಯೊಂದು ತೆರೆದಂತಾಯಿತು. ಗೌಡ ನರಳುತ್ತಲೇ, 'ಚಿನ್ನಿ' ಎಂದು ಕರೆದ. ಆ ಕೂಗಿನಲ್ಲಿ ಯುಗ ಯುಗದಿಂದ ಸಂಚಿತ ಪ್ರೀತಿಯ ಮಾರ್ದನಿ ಯಿತ್ತು. ಮರಣಾಂತಿಕ ವೇದನೆಯ ಮರೆಯಿಂದಲೂ ಗೌಡನ "ಪ್ರೇಮದ" ಬೆಳಕು ಚಿನ್ನಿಯ ಮುಖವನ್ನು ಬೆಳಗಿಸಿತು. ಆ ಕರೆ ಮಧುರ

ಸ್ಮೃತಿಯಾಗಿ ಮಾತ್ರ ಉಳಿಯುವುದೆಂಬ ಪರಿವೆ ಚಿನ್ನಿಗೆ ಬರುವ ಸಾಧ್ಯತೆಯೂ ಇರಲಿಲ್ಲ.

ಕಣ್ಣೀರ ಕೋಡಿ ಹರಿಸಿ ಕರೆಗಟ್ಟಿದ್ದ ಮುಖದ ಮೇಲೊಂದು ತಿಳಿಯಾದ ನಗೆಮಿಂಚು ಮೂಡಿ ಮರೆಯಾಯಿತು

## ಒಳದನಿ

ರಾತ್ರಿಯೆಲ್ಲ ಹಾಳಾದ್ದು ನಿದ್ದೇನೆ ಬರಲಿಲ್ಲ. ತಲೆ ಚಚ್ಚಿಕೊಂಡರೂ ಒಂದು ತೂಕಡಿಕೇನೂ ಇಲ್ಲ. ಪುಸ್ತಕವಾದರೂ ಕೈಗೆ ತೆಗೆದುಕೊಂಡರೆ ನಿದ್ದೆ ಬರುತ್ತೇನೋ" ಎಂದುಕೊಂಡು ಜಾಯ್ಸಿಯ "ಯೂಲಿಸಸ್" ಕಾದಂಬರಿಯನ್ನು ಓದುವುದಕ್ಕೆ ಪ್ರಯತ್ನಪಟ್ಟೆ. ಆದರೆ ದರಿದ್ರದ್ದು, ಓದಿದರೆ ಅರ್ಥವೇ ಆಗುತ್ತಿಲ್ಲ. ಕಣ್ಣು ಅಕ್ಷರಗಳ ಮೇಲೆ ಇರುವುದಾದರೂ ತಲೆ ತುಂಬಾ ಈಡಿಯಟ್ ಆಲೋಚನೆಗಳು– ಸುಮ್ಮಿ ಜೀವನದ ರಸಾನೆಲ್ಲಾ ಹೀರಿಕೊಂಡು ಈಗ ಹಣ್ಣಾಗಿರಬಹುದೇ ! ಇಲ್ಲಾ ಇನ್ನೂ ಹೊಸ ರಸಿಕತನದ ಹೋಳುಗಳನ್ನು ಚಪ್ಪರಿಸುತ್ತಿರಬಹುದೇ ! ಹೌದು ದೇವಿಗೆ ಮದುವೆಯಾದ ಗಳಿಗೆಯಿಂದ ಗಾಣದ ಎತ್ತಾಗಿದ್ದಾಳೆ. ಎಷ್ಟು ಲವಲವಿಕೆಯಿಂದ ಕಾಲೇಜು ತುಂಬೆಲ್ಲಾ ಅವಳೇ ಗಾಳಿಯಾಗಿ ಬೀಸುತ್ತಿದ್ದಳು. ಅಪ್ಪ ಚನ್ನಾಗಿ ದುಡ್ಡು ಕೊಡುತ್ತಿದ್ದ. ಲಂಗು ಲಗಾಮಿಲ್ಲದೆ ಎಲ್ಲಿಗಂದರೆ ಅಲ್ಲಿಗೆ ಸುಂಟರಗಾಳಿಯಾಗಿ ಹೊರಟು ಹೋಗಿ ಮಜ ಮಾಡಿ ಬರುತ್ತಿದ್ದಳು. ಇಷ್ಟ ಬಂದರೆ ಫ್ರೆಂಡ್ಸ್‌ನ ಜೊತೆಗೆ ಕರೆದುಕೊಂಡು ಹೋಗ್ತಿದ್ಲು. ಇಲ್ಲ ಒಬ್ಬಳೇ ಬಾಯ್ ಫ್ರೆಂಡ್ಸ್ ಜೊತೆಗೆ ನಿರ್ಭಯವಾಗಿ ಓಡಾಡುತ್ತಿದ್ದಳು. ಅಪ್ಪನ ಕಣ್ಣಿಗೂ ಒಂದೆರೆಡು ಸಲ ಇವಳು ಬಾಯ್ ಫ್ರೆಂಡ್ ಜೊತೆಗೆ ಫ್ರೀಯಾಗಿ

ಓಡಾಡ್ತಿದ್ದದ್ದು ಬಿದ್ದಿತ್ತು. ಆದರೆ ಮಾತಿನಲ್ಲಿನ ಚಾಣಕ್ಯತನ ಅಪ್ಪನ ಆಗ್ರಹದಿಂದ ತಪ್ಪಿಸಿತ್ತು. ನಾನೆಷ್ಟೋ ಸಲ ಅವಳ ಈ ಸ್ವಚ್ಛಂದ ರೀತಿಯನ್ನು ಖಂಡಿಸಿ ಬುದ್ಧಿ ಹೇಳಿದರೆ ಹುಚ್ಚಾಗಿ ನಕ್ಕು ಬಿಟ್ಟು—"ಇಷ್ಟು ಸೆಂಟಿಮೆಂಟಲ್ ಆಗಬೇಡ—ಎಂದು ಕೆನ್ನೆ ಚಿವುಟು ತ್ತಿದ್ದಳು.......ಆದರೆ ಇವತ್ತು ಅವಳಿಗೆ ಉಸಿರಾಡುವ ಧೈರ್ಯ ಕೂಡಾ ಇಲ್ಲ. ಅಪ್ಪನ ಮಾತು ಮೀರಿ ಅಯೋಗ್ಯನೊಬ್ಬನನ್ನು ಮದುವೆಯಾಗಿ ನರಸತ್ತವಳಾಗಿ ಬದುಕಿದ್ದಾಳೆ. ಮೊದಲೆಷ್ಟು ಮಜವಾಗಿ, ಖುಷಿ ಯಾಗಿ ಇದ್ದಳೋ ಅದಕ್ಕೆ ಹತ್ತರಷ್ಟು ಹೆಚ್ಚಾಗಿ ಅಳುತ್ತಿದ್ದಾಳೆ. ಗಂಡ ಅನ್ನಿಸಿಕೊಂಡವನಿಂದಲೂ ಬಯಸಿದ ಸುಖ ಸಿಗದೆ, ಸ್ವತಂತ್ರ್ಯವಾಗಿ ತಿರುಗಾಡುವ ಅವಕಾಶವಿಲ್ಲದೆ ಬಂಜರು ಬಾಳು ಕಳೆದುಕೊಳ್ಳುವುದರಲ್ಲೇ ವರ್ಷಗಳು ದಾಟಿ ಹೋಗಿವೆ... ನನ್ನಷ್ಟೇ ವಯಸ್ಸು.... ನಮ್ಮಿಬ್ಬರದೂ ಗೋಳು ಒಂದೇ ಆಗಿದ್ದರೂ ಗೋಳಿನ ರೀತಿಗಳು ಮಾತ್ರ ಬೇರೆಯಾಗಿವೆ.... ಇನ್ನು ಚಂದ್ರು ಕತೆ....ಅವನೊಬ್ಬ ಫೂಲ್. ಲವ್ ಮಾಡೋಕೆ ಬರುತ್ತೇ ಹೊರತಾಗಿ ಅದನ್ನು ಉಳಿಸಿಕೊಳ್ಳೋದಕ್ಕೆ ಬರೋಲ್ಲ. ಕಾಪುರುಷನಂತೆ ಹೆದರ್ತಾನೆ. ತಾನು ಪ್ರೀತಿಸೋ ಹುಡುಗಿ ತನಗಿಂತ ಎಲ್ಲ ವಿಷಯದಲ್ಲಿ ಕೆಳಗೆ ಇರಬೇಕನ್ನೋದು ಅವನ ಸಿದ್ಧಾಂತ. ಸ್ವಲ್ಪ ಪ್ರೋಗ್ರೆಸ್ ಇದ್ದರೂ ಬಸವನ ಹುಳುವಿನ ತರ ಒಳಗೊಳಗೇ ಸರಿಯುತ್ತಾ ಚಿಪ್ಪಿನಲ್ಲಿ ಮುಖ ಮುಚ್ಚಿಕೋತಾನೆ.... ತಾನೇ ಬುದ್ಧಿವಂತ- ಅನ್ನೋ ಭಾವನೆಗೆ ಎಲ್ಲಿ ಅಡ್ಡಿ ಬರುತ್ತೋ ಅಂತ್ಲೆ.... ಬುದ್ಧಿವಂತರಂತೆ ಲೋಕ ಹೇಳಿದವರ ವಿಷಯದಲ್ಲಿ ತುಂಬಾ ಜಾಗ್ರತೆ ವಹಿಸಿ ಅವರಿಂದ ದೂರ ಇರ್‍ತಾನೆ.

ಅಬ್ಬ ! ಎಷ್ಟು ಚೆನ್ನಾಗಿ ಮಾತಾಡಿದ ! ಅವನ ಜೊತೆ ಮಾತಾ ಡೋದೊಂದ್ರೇನೇ ಖುಷಿ ! ಈ ಪ್ರಪಂಚದಿಂದ ದೂರ ಕರೆದುಕೊಂಡು ಹೋಗ್ತಾನೆ. ಫೇರಿಟೇಲ್‌ನಲ್ಲಿ ಬರುವ ರೋಮಾಂಚಕ ದೃಶ್ಯಗಳು? ಅವನ ಜೊತೆಗಿನ ಬಾಳು ಬರಡಾಗದೆ ನಿರಂತರ ಅಚ್ಚ ಹಸುರಾಗಿರುವ ಹುಲ್ಲುಗಾವಲು. ದಟ್ಟವಾಗಿ ಬೆಳೆದ ಹುಲ್ಲಿನ ಹಾಸಿಗೆಯ ಮೇಲೆ ಆಕಾಶದತ್ತ ಮುಖ ಮಾಡಿ ಮಲಗಿರುವಾಗ ಒಂದೊಂದೇ....ಒಂದೊಂದೇ

ಹಳೆಯ ಉಡುಪುಗಳು ಕಳಚಿ....ರಾಜಕುಮಾರನ ವೇಷದಲ್ಲಿದ್ದಾನೆ.... ಮುಗುಳುನಗೆ ಬೆಳಕನ್ನು ಪ್ರಸಾರ ಮಾಡುತ್ತಿದೆ. ಚಂದ್ರು ತುಂಬಾ ಮುದ್ದಾಗಿ ಕಾಣುತ್ತಿದ್ದಾನೆ....ಬಿಗಿಯಾಗಿ ಹಿಡಿಯಬೇಕೆಂದು ಕೈ ಚಾಚಿದೆ... ಬಿಗಿದೆ....ಒತ್ತಿ ಬಿಗಿದೆ.. ಬಿಗಿಯುತ್ತಲೇ ಹೋದೆ....ಚಂದ್ರು ಕಿರುಚಿಕೊಂಡ ಬಿಡಿಸಿಕೊಳ್ಳಲು ಚಡಪಡಿಸಿದ...ಉಸಿರು ಕಟ್ಟಿದ ಹಾಗಾಗಿ ಕೂಗುವುದಕ್ಕೂ ಆಗದೆ ಹೋಯಿತು. ನನ್ನ ಬಂಧನದಲ್ಲಿದ್ದ ಚಂದ್ರು ಬೇರೆಯವರಿಗೆ ಸಿಗಬಾರದು ಎಂದುಕೊಂಡು ಮತ್ತಷ್ಟು ಬಿಗಿ ಯಾಗಿ ಬಂಧಿಸಿದೆ....ಬಂಧನದ ಒಳಗಡೆ ತೆಳುವಾಗಬೇಕು...ಚಂದ್ರು.... ಚಂದ್ರುವಾಗಿರಬಾರದು....ಚಂದ್ರುವಿಗೆ ಬೇರೆ ಅಸ್ತಿತ್ವ ಬೇಡವೆನಿಸಿತು. ನನ್ನ ಸ್ವಾರ್ಥ ಬುದ್ಧಿಗೆ.... ಹೀಗೇ....ಹೀಗೇ ಕರಗಿಹೋಗಲಿ....ಎಂದು ಕೊಂಡೆ. ಉನ್ಮತ್ತತೆಯಿಂದ, ಗೆದ್ದೆನೆಂಬ ಅಹಂಮ್ಮಿನಿಂದ ಬಿಗಿಯಾಗಿ ಕಣ್ಣು ಮುಚ್ಚಿದೆ....'ಫಳ್' ಅಂತ ಕೆನ್ನೆಗೆ ಏಟು ಬಿತ್ತು. ತಲೆಸುತ್ತಿ ಬಂದಂತಾಯಿತು. ಸಾವರಿಸಿಕೊಂಡು ಕಣ್ಣು ಬಿಟ್ಟೆ. ನಗುತ್ತಾ ಇತ್ತು. ಆ ಮುಖ....ಚಂದ್ರುವಿನದಲ್ಲ.... ನನ್ನ ಗೆಳತೀದು. Fool....ಮಹಾ ನನಗೆ, ಪಾಠ ಹೇಳೋಕೆ ಹೊರಟವಳು ನೀನು ಅಲ್ವೇ'—ವ್ಯಂಗವಾಗಿತ್ತು ಮಾತು. ವಾಸ್ತವವಾಗಿ ನೀನು ಹೀಗೆ ಭಾವನೆಗಳಲ್ಲಿ ಕಳೆದುಹೋಗ್ತಿ ಯೇನೆ ? ಯಾಕೆ ಆ ಚಂದ್ರೂನ ಕಂಡ್ರೆ ಪ್ರಾಣ ಬಿಡ್ತೀಯ ? ಚಂದ್ರು ಖಂಡಿತ ನಿನ್ನನ್ನು ಪ್ರೀತಿಸ್ತಿಲ್ವೆ ! ಸುಮ್ಮನೆ ಕೈ ತೋರಿಸಿ ಅವಲಕ್ಷಣ ಅಂತ ಅನ್ನಿಸ್ಕೋಬೇಡ. ಒಂದು ವೇಳೆ ಅವನು ನಿನಗೆ ಪ್ರೀತಿ ತೋರಿ ಸಿದರೂ ಅದು ಬರೀ ಸುಳ್ಳು...ನಂಬಿದ್ರೆ ಹಾಳಾಗ್ತೀಯ ನೆನಪಿರಲಿ....

ಹೌದು ಸುಮಾ ಹೇಳಿದ್ದೂ ನಿಜ. ನನಗೆ ನಾಚಿಕೆಯಾಯ್ತು. ಚಂದ್ರೂನ ಪ್ರೀತಿಸಿದ್ದಕ್ಕೆ ಅವನಿಗೆ ಪ್ರೀತಿ ಮಾಡೋದೂ, ಒದೆಯೋದೂ ಎರಡೂ ತುಂಬಾ ಸುಲಭಾನೇ...ಇನ್ನು ಅವನ ಯೋಚ್ನೇನೇ ಮಾಡ ಬಾರದು—ಎಂದು ನಿರ್ಧಾರವಾಗಿ ಹೇಳುತ್ತಾ ಎದ್ದು ದೀಪ ಆರಿಸಿ ಕಂಬಳಿ ತುಂಬಾ ಹೊದ್ದುಕೊಂಡು, ಕತ್ತಲು ಪ್ರಪಂಚಾನೇ ಸಾಕು ಅನ್ನೋ ಹಾಗೆ ಮಲಗಿದಳು.

ಕಂಬಳಿ ಮುಸುಕಿನಲ್ಲಿ ಬೆಳಗಾದದ್ದೇ ತಿಳಿಯಲಿಲ್ಲ. ಎದ್ದಾಗ 7–30 ದಾಟಿತ್ತು. ಆದರೂ ಹಾಸಿಗೆ ಬಿಟ್ಟು ಏಳುವ ಮನಸ್ಸಾಗಲಿಲ್ಲ. ಜಡತೆ ಆವರಿಸಿಕೊಂಡಂತೆ ಅನ್ನಿಸಿತು. ತುಂಬಾ ವೀಕ್‌ನೆಸ್‌ನ ಅನುಭವ. ಎಷ್ಟು ಪ್ರಯತ್ನಿಸಿದರೂ ಏಳುವುದಕ್ಕೇ ಆಗಲಿಲ್ಲ. ಕಣ್ಣುಗಳು ಎಳೆಯು ತ್ತಿದ್ದವು. ರಜ ಹಾಕೋಣವೆನ್ನಿಸಿತು. ಇವತ್ತು ಭಾನುವಾರವೆನ್ನು ವುದು ನೆನಪಾಯಿತು

ಇವತ್ತೇ ರಾಧಿಕಾ ಮನೇಲಿ ಮಗೂಗೆ ನಾಮಕರಣ. ಬರಲೇ ಬೇಕೂಂತ ತುಂಬಾ ಒತ್ತಾಯ ಮಾಡಿದ್ದಳು. ಹತ್ತೂವರೆಗೆಲ್ಲ ಅವರ ಮನೇಲಿರಬೇಕೂಂತ ಹೇಳಿದ್ದಳು. ಒಂದು ಸಲ ಹೋಗಿ ಬರೋಣಾಂತ ಅನ್ನಿಸಿದರೆ ಮತ್ತೊಂದು ಸಲ ಬೇಡಾ, ಈ ರಜಾ ದಿನಾನ ಹೀಗೆ ಹಾಸಿಗೆಯಲ್ಲೇ ಹಿತವಾದ ಆಲೋಚನೆಗಳನ್ನು ಮಾಡ್ತಾ ಕಳೆದು ಬಿಡೋಣ ಅಂತ ಅನ್ನಿಸಿತು. ಎರಡು ಮನಸ್ಸಿನ ಹೋರಾಟದಲ್ಲಿ ಇನ್ನರ್ಧ ಗಂಟೆ ಕಳೆದು ಗಂಟೆ ಎಂಟಾಯಿತು. ಮೃದು ಇದ್ದಿದ್ದರೆ ಇಷ್ಟು ಹೊತ್ತು ಮಲಗೋಕೆ ಬಿಡ್ತಿರಲಿಲ್ಲ. ಅವಳು ಊರಿಗೆ ಹೋಗಿ ನಾಲ್ಕು ದಿನವಾಯಿತು. ಅವರಪ್ಪ ಯಾವ ಯಾವದೋ ಗಂಡುಗಳನ್ನು ನೋಡಿ ಇಟ್ಟಿದ್ದಾನಂತೆ. ಈಗ ಇವಳು ಅವರ ಮುಂದೆ ಪ್ರದರ್ಶಿತ ವಾಗೋದಕ್ಕೆ ಹೊರಟಿದ್ದಾಳೆ. ಒಂದು....ಎರಡು....ಮೂರು... ಹೀಗೆ ಎಷ್ಟೋ ಗಂಡುಗಳು ನೋಡಿ–ಪರೀಕ್ಷಿಸಿ–ಮಾಲು ಚೆನ್ನಾಗಿದೇಂದ್ರೆ ಬೆಲೆ ಕಟ್ತಾರೆ. ಹುಡುಗನ ಕಡೆಯವರು ಕೂಡಿ ವ್ಯಾಪಾರ ಕುದುರಿಸಿ, ಇವಳನ್ನ ಕುಣಿಕೆ ಹಾಕಿ ಕರೆದುಕೊಂಡು ಹೋಗ್ತಾರೆ....ಅಲ್ಲಿಂದ ಮುಂದೆ ಮಾಮೂಲೇ....ಬದುಕಿನ ಪ್ರವಾಹದಲ್ಲಿ ಒಂದು ನಿರ್ಲಕ್ಷ್ಯ ಬಿಂದುವಾಗಿ ಕೊಚ್ಚಿ ಹೋಗುತ್ತಾಳೆ ಇಷ್ಟರಲ್ಲಿ ಬಾಗಿಲು ಬಡಿದ ಶಬ್ದ. ಹೊದ್ದ ಕಂಬಳಿ ಒದ್ದು ಚಕ ಚಕ ಎದ್ದು ಕನ್ನಡಿ ಮುಂದೆ ನಿಂತು ಕೆದರಿದ ಕೂದಲನ್ನು ಸಾವರಿಸಿಕೊಂಡೆ. ಅಸ್ತವ್ಯಸ್ತವಾಗಿದ್ದ ಸೀರೆಯ ನಿರಿಗೆ ಯನ್ನು ಸರಿಪಡಿಸಿಕೊಂಡೆ. ಬ್ಲೌಸ್ ಮೇಲೆ ಸರಿದು ಸ್ತನಗಳು ಅರ್ಧಂಬರ್ಧ ಕಾಣುವಂತಾಗಿತ್ತು. ತೆಳು ಸೀರೆಯಾದ್ದರಿಂದ ಸೆರಗು ಮುಚ್ಚಿಕೊಂಡರೂ ಅಸ್ಪಷ್ಟವಾಗಿ ಕಾಣುವ ಸಂಭವವಿತ್ತು. ಆದಕ್ಕೇ

ಆತುರವಿದ್ದರೂ ಒಂದು ಕ್ಷಣ ಬ್ಲೌಸನ್ನು ಸರಿಪಡಿಸಿಕೊಂಡೆ. ಕಳಚಿಕೊಂಡಿದ್ದ ಹುಕ್ಕನ್ನು ಹಾಕಿಕೊಂಡೆ. ಅಷ್ಟರಲ್ಲಿ ಮತ್ತೊಮ್ಮೆ ದಬದಬ ಬಾಗಿಲು ಬಡಿದ ಶಬ್ದವಾಯಿತು. ಸರಸರ ಹೋಗಿ ಬಾಗಿಲು ತೆಗೆದೆ. ವಾರ್ಡನ್ ನಿಂತಿದ್ದಳು. ನಾನೇ ಮಾತನಾಡಿಸಿದೆ.–ಏನ್ ಮೇಡಂ ನೀವೇ ಬಂದ್ಬಿಟ್ಟಿದ್ದೀರಾ. ಅರ್ಜೆಂಟ್ ಕೆಲಸವೇನಾದರೂ ಇತ್ತೇ ?

ಏನಿಲ್ಲ ಇಷ್ಟು ಹೊತ್ತಾದರೂ ನೀನು ಕಾಫಿಗೂ ಎದ್ದು ಬರಲಿಲ್ವಲ್ಲಾ ಯಾಕೇಂತ ವಿಚಾರಿಸಿಕೊಂಡು ಹೋಗೋಣಾಂತ ಬಂದೆ.... ಆಮೇಲೆ ಇನ್ನೊಂದು ವಿಷಯ. ನೆನ್ನೆ ಯಾರೋ ಒಬ್ಬರು ನಿನ್ನನ್ನು ನೋಡ್ಬೇಕೂಂತ ಬಂದಿದ್ದರು. ನೋಡೋಕೆ ತುಂಬಾ ಜಂಟಲ್‌ಮನ್ ಥರಾ ಇದ್ದರು. ಬಹಳ ಅಂದವಾಗಿದ್ದರು. ನಾನು ನಿಮ್ಮ ಫ್ರೆಡ್ ಬೇನೇನೋ ಅಂತ ಅಂದ್ಕೊಂಡೆ. ಬೆಳ್ಳಗೆ ಎತ್ತರವಾಗಿ ಮಾಟವಾಗಿ ಇದ್ದರು. ತುಂಬಾ ಗುಂಗುರು ಕೂದಲು ಸಣ್ಣ ಮೀಸೆ ಮುಖಕ್ಕೆ ಮುತ್ತಿಡಬೇಕೆನ್ನುವಷ್ಟು ಮುದ್ದಾಗಿತ್ತು'— ಇನ್ನೂ ಸ್ವಲ್ಪ ಹೊತ್ತಿದ್ದರೆ ತಲೆ ಎಲ್ಲಾ ಮಾತಾಡ್ತಾಳೇಂತ ಅನ್ನಿಸ್ತು. ಅದಕ್ಕೆ ನಾನೇ ತಡೆದು, ಕೇಳಿದೆ ...ಅದೆಲ್ಲಾ ಸರಿ ಅವರು ಯಾರೂಂತ ವಿಚಾರಿಸಿದೆಯೇನು ?

"ಇಲ್ಲ ಮರೆತೇ ಹೋಯಿತು. ನಿಮಗೆ ಒಂದು ಚೀಟಿ ಕೊಟ್ಟು ಹೋಗಿದ್ದಾರೆ ಅರ್ಜೆಂಟಾಗಿ ಅವರನ್ನ ಇವತ್ತು ನೋಡ್ಲೇಬೇಕಂತೆ. ಚೀಟಿ ತರೋದು ಮರೆತು ಹೋಯ್ತು. ಈಗಲೇ ಹೋಗಿ ತಂದು ಕೊಡ್ತೀನಿ. ನನ್ನ ಪರ್ಸ್‌ನಲ್ಲಿದೆ—ಎಂದು ಹೊರಟಳು.

ಮೇಡಂ ಒಂದ್ಮಾತು. ಹಾಗೇ ಬರುವಾಗ ನನಗೊಂದು ಗ್ಲಾಸ್ ಕಾಫಿ ಸಿಗುತ್ತಾ ನೋಡಿ, ಪ್ಲೀಸ್ ಎಂದೆ

ಮೇರಿ ಮುಗುಳ್ನಕ್ಕಳು. ಅದರರ್ಥ ಸಿಗುತ್ತೆಂತ. ನನಗೂ, ವಾರ್ಡನ್‌ಗೂ ಯಾಕೋ ಸ್ವಲ್ಪ ಸಲುಗೆ ಜಾಸ್ತಿ. ಯಾರ ಹತ್ತಿರವೂ ಅಷ್ಟೊಂದು ಸಲುಗೆಯಿಂದ ಇರ್ತಿರ್ಲಿಲ್ಲ. ಎಲ್ಲರಿಗೂ ಅವರವರ ಪ್ರಪಂಚವೇ ಪ್ರಧಾನವಾಗಿತ್ತು. ಅವರ ಜೊತೆ ಮಾತಾಡೋಕೆ ವೈಯುಕ್ತಿಕ ಕಥೆಗಳನ್ನು ಕೇಳೋದಕ್ಕೆ ಪುರುಸೊತ್ತಿರಲಿಲ್ಲ. ನಾನು

ಅವಳ ಕತೆ ಕೇಳಿದೆ. ಸದಾ ನಗು ನಗುತ್ತಾ ಇರೋ ವಾರ್ಡನ್‌ನ ಬದುಕಿನಲ್ಲಿ ಎಷ್ಟೊಂದು ಕೊರಕಲುಗಳಿವೆ ! ಇದನ್ನೆಲ್ಲ ಸಹಿಸಿಕೊಂಡೂ ಈ ನಗುವನ್ನು ತಂದು ಕೊಳ್ಳೋಕೆ ಹೇಗೆ ಸಾಧ್ಯ ? ಅಂತ ನನಗೆ ಅನ್ನಿಸಿತು. ಅವರ ಕಥೆ ನೆನಪಾಯಿತು.

ಅಮ್ಮ ಕ್ರಿಶ್ಚಿಯನ್, ಅಪ್ಪ ಹಿಂದು ನೋಡೋಕೆ ಇಬ್ಬರೂ ತುಂಬಾ ಚೆನ್ನಾಗಿದ್ದರು. ಅಕ್ಕಪಕ್ಕದಲ್ಲೇ ಮನೆಗಳು ಅಮ್ಮ ಸೋದರ ಮಾವನ ಮನೆಯಲ್ಲಿ ಬೆಳೀತಿದ್ದಳು. ಅತ್ತೆ ಹೆರಿಗೆಗೆ ತವರಿಗೆ ಹೋದಾಗ ಸೋದರ ಮಾವನ ಹದ್ದು ಕಣ್ಣು ಅಮ್ಮನ ಅಂಗಾಂಗಗಳ ಮೇಲೇ ಇತ್ತು. ಆ ದೃಷ್ಟೀನ ಕಂಡರೇನೇ ಅಮ್ಮನಿಗೆ ಭಯವಾಗುತ್ತಿತ್ತಂತೆ. ಊರಿಗೆ ಅತ್ತೆ ಬರೋತನಕ ಅಪ್ಪನ ಹತ್ತಿರ ಬಂದು ಇರೋಣಾಂತ ಅಮ್ಮ ಅಂದುಕೊಳ್ಳುತ್ತಿದ್ದಳಂತೆ. ಆದರೆ ಮಾವನ್ನ ಕೇಳೋಕೆ ಭಯ. ಎದುರು ನಿಲ್ಲೋಕು ಭಯ. 6 ವರ್ಷದ ಲಿಲ್ಲಿ ಕಾನ್ವೆಂಟಿಗೆ ಹೊರಟು ಹೋಗಿ ನಾಲ್ಕು ಗಂಟೆಗೆ ಮರಳುತ್ತಿದ್ದಳು. ಅಮ್ಮ, ಮಾವ ಇರೋವಾಗ ಬೇರೆ ಯಾವುದಾದರೂ ಒಂದು ಕೀಟ ಇದ್ದರೂ ಸ್ವಲ್ಪ ನೆಮ್ಮದಿ ಇರುತ್ತೇಂತ ಅಂದ್ಕೊಕತಿದ್ಲು. ರಾತ್ರಿಗಳನ್ನು ಕಳೆಯೋದು ಇದ್ದದ್ದೂ ಭಯಂಕರ. ಅಷ್ಟರಲ್ಲಿ ಒಂದು ದಿನ ಮಾವ ಲೇಟಾಗಿ ಬಂದನಂತೆ. ಲಿಲ್ಲಿ ಬೇರೆ ಮನೇಲಿ ಇರಲಿಲ್ಲ. ಅವಳ ಸ್ಕೂಲ್‌ನಲ್ಲಿ ಮಕ್ಕಳನ್ನೆಲ್ಲಾ ಪ್ರವಾಸಕ್ಕೆ ಕರೆದುಕೊಂಡು ಹೋಗಿದ್ದರು. ಅಮ್ಮನೊಬ್ಬಳಿಗೇ ಎದ್ದು ಬಾಗಿಲು ತೆಗೆಯೋದಕ್ಕೆ ಭಯವಾಯ್ತಂತೆ. ಆದರೂ ಒಂದೇ ಸಮ ಬಾಗಿಲ ಬಡಿತ ಕೇಳಿ ಹೆದರುತ್ತಾ ಹೆದರುತ್ತಾ ಎದ್ದು ಬಾಗಿಲು ತೆಗೆದಳಂತೆ. ಒಳಗೆ ಬಂದ ಮಾವ ಮತ್ತೆ ಬಾಗಿಲು ಭದ್ರಪಡಿಸಿ ಕಿರುಚುವುದಕ್ಕೂ ಆಗದಂತೆ ಅಮ್ಮನಿಗೆ ಪ್ರಜ್ಞೆ ತಪ್ಪಿಸಿ ನಿರಾತಂಕವಾಗಿ ಭೋಗಿಸಿಬಿಟ್ಟು ಎದ್ದು ಹೋಗಿ ತನ್ನ ಕೊಠಡಿಯ ಚಿಲಕ ಹಾಕಿಕೊಂಡು ಮಲಗಿಬಿಟ್ಟನಂತೆ. ಇಡೀ ರಾತ್ರಿ ಬಿಕ್ಕಿ ಬಿಕ್ಕಿ ಅಳುತ್ತಿದ್ದು ಬೆಳಗಾದ ಕೂಡಲೇ ಅಮ್ಮನಿಗೆ ತನ್ನ ಸ್ಥಿತಿ ಅರ್ಥವಾಯ್ತಂತೆ.

ಅಮ್ಮ ಅಪ್ಪನ ಬಳಿಗೆ ಬಂದು ಬಿಟ್ಟಳಂತೆ. ತಾತ ಮೊದಲಿನಿಂದಲೂ ಸಿಡುಕ. ಮಗಳು ಬಂದ ಕಾರಣ ಕೇಳೋದು ಬಿಟ್ಟು, ಬಂದದ್ದಕ್ಕೆ ಸಿಟ್ಟಿಗೆದ್ದು ಕಾಲು ಕಾಲಲ್ಲೇ ಒದ್ದನಂತೆ. ಪಕ್ಕದ ಮನೆಯಲ್ಲಿದ್ದ ಆ ಹಿಂದೂ ವ್ಯಕ್ತಿಗೆ ಈ ಗಲಾಟೆ ಎಲ್ಲಾ ಕೇಳಿಸಿ, ಮನೆಗೆ ಬಂದು ವಿಚಾರಿಸುವುದಕ್ಕೆ ಪ್ರಯತ್ನಪಟ್ಟಿದ್ದಕ್ಕೆ ತಾತ ಇವರನ್ನೂ ಚೆನ್ನಾಗಿ ಬಾಸ್ಟರ್ಡ್ ಗೀಸ್ಟರ್ಡ್ ಅಂತ ಬೈದು ಬಿಟ್ಟನಂತೆ. ಬಂದಾತ ಸುಮ್ಮನೇ ಹಾಗೇ ಹೊರಟು ಹೋದ. ಅವತ್ತಿನ ಹಗರಣ ಅಲ್ಲಿಗೆ ಮುಗೀತು. ಒಂದೆರೆಡು ದಿವಸ ಹಾಗೇ ಕಳೀತು. ಅಮ್ಮ ಯಾವುದೋ ಕೆಲಸಕ್ಕೆ ಅರ್ಜಿ ಬರೆದು ಕವರಿನಲ್ಲಿ ಹಾಕಿ ಅಂಟಿಸಿ ಪಕ್ಕದ ಮನೆಯ ಆ ಹಿಂದೂ ವ್ಯಕ್ತಿಯಲ್ಲಿಗೆ ಪೋಸ್ಟ್ ಮಾಡೋಕೆ ಹೇಳಿ ಬರೋಣಾಂತ ಹೋದಾಗ ಆತ ಇನ್ನೂ ಅಡಿಗೆ ಮಾಡುತ್ತಿದ್ದನಂತೆ. ಅಮ್ಮ ಹೋದದ್ದು ನೋಡಿ ಆ ವ್ಯಕ್ತಿಗೆ ಆಶ್ಚರ್ಯವಾಯಿತಂತೆ. ಬೆಕ್ಕಸ ಬೆರಗಾಗಿ ಅಮ್ಮನನ್ನು ನೋಡುತ್ತಾ, ಬಂದ ಕಾರಣ ಕೇಳೋದನ್ನೂ ಮರೆತುಬಿಟ್ಟಿದ್ದನಂತೆ.

"Excuse me ಸ್ವಲ್ಪ ಈ ಲೆಟರ್ ಪೋಸ್ಟ್ ಮಾಡಬೇಕಲ್ಲ? ಮಾಡ್ತೀರ?" ಎಂದು ಅಮ್ಮನೇ ಮಾತು ತೆಗೆದಳಂತೆ.

"ಓಹೋ ಹೋ ಅದಕ್ಕೇನಂತೆ, ಧಾರಾಳವಾಗಿ ಆಗಬಹುದು. ನಿಂತೇ ಇದ್ದೀರಲ್ಲ ಕೂತ್ಕೊಳ್ಳಿ" ಅಂತ ಕುರ್ಚಿ ತೋರಿಸಿದ. "ಇಲ್ಲ, ಹೋಗ್ಬೇಕು. ಅಪ್ಪ ಬಂದರೆ ಬೈಯ್ತಾರೆ ಕ್ಷಮಿಸಿ" ಅಂತ ಅಮ್ಮ ಹೊರಡೋದ್ರಲ್ಲಿದ್ದಳು. ಅಷ್ಟರಲ್ಲಿ ಆತ ಕಾಫಿ ಕಪ್ ಹಿಡಿದು ಅಮ್ಮ ನಿಂತಿದ್ದಲ್ಲಿಗೆ ಬಂದು ಅಮ್ಮನ ಕೈಗೆ ಕೊಡುತ್ತಾ,—

"ಒಂದು ವಿಷಯ, ನಾನು ಕೇಳಿದರೆ ನೀವು ತಪ್ಪು ತಿಳಿದುಕೊಳ್ಳಬಾರದು. ನಿಮ್ಮನ್ನ ಇದಕ್ಕೆ ಮುಂಚೆ ಈ ಮನೇಲಿ ನೋಡಿರಲಿಲ್ಲ. ಮೊನ್ನೆ ಮೊದಲನೇ ಸಲವೇ ನಿಮ್ಮನ್ನು ನೋಡಿದ್ದು. ನಿಮ್ಮನ್ನು ನೋಡಿದ್ದೇ ತೀರಾ ಭಯಂಕರ ಸ್ಥಿತಿಯಲ್ಲಿ. ಅವರು ನಿಮಗೇನಾಗಬೇಕು? ಯಾಕೆ ಅವರು ನಿಮ್ಮನ್ನು ಹಾಗೆ ಹೊಡೀತಿದ್ರು—ನಿಮಗೆ ಸಂಕೋಚವಾದ್ರೆ ಬೇಡ, ಹೇಳ್ಬೇಡಿ. ಸುಮ್ಮನೆ ಕುತೂಹಲಕ್ಕೆ ಕೇಳಿದೆ....ಈ ಕಾಫಿ ತಗೊಳ್ಳಿ ನಮ್ಮ ಮನೆಗೆ ಅನಿರೀಕ್ಷಿತವಾಗಿ ಮೊದಲನೇ ಸಲ ಬಂದಿದ್ದೀರಿ

ಅಂತ ತುಂಬಾ ವಿನಯವಾಗಿ ಹೇಳಿದ್ರು. ಅಮ್ಮ ಅಭ್ಯಂತರ ಹೇಳದೆ ಕಾಫಿ ಕುಡಿದು, thanks ಹೇಳಿ, ಇನ್ನೊಮ್ಮೆ ತನ್ನ ಕತೆ ಹೇಳುವುದಾಗಿ ಪ್ರಾಮಿಸ್ ಮಾಡಿ ಅಲ್ಲಿಂದ ಹೊರಟು ಬಿಟ್ಟಳು.

ಅಮ್ಮ ಅಲ್ಲಿಗೆ ಹೋಗಿ ಬರೋದು ಮಾಮೂಲಾಗಿ ಹೋಯ್ತು. ಅಪ್ಪ ಮನೇಲಿರುತ್ತಿದ್ದುದೇ ಅಪರೂಪ ಹಿಂದೂ ವ್ಯಕ್ತಿಯ ಮಾತಿನ ಮೋಹಕ್ಕೆ ಅಮ್ಮ ಬಿದ್ದಳು. ಮಾವನನ್ನು ಪ್ರತಿಭಟಿಸಿದ ಅಮ್ಮ ಆ ವ್ಯಕ್ತಿಗೆ ಸ್ವಇಚ್ಛೆಯಿಂದ ಮೈ ಕೊಟ್ಟಳು. ಪಾದ್ರಿಗೆ ಹೇಳಿ ಇಬ್ಬರೂ ಮದುವೆಯಾಗಬೇಕಂತ ಅಮ್ಮ ಹಟ ಹಿಡಿದ್ರೆ, ಆ ವ್ಯಕ್ತಿ ನಕ್ಕು, ಮದುವೆಯ ಮಾತನ್ನು ಮುಂದು ಹಾಕುತ್ತಿದ್ದನಂತೆ. ಅಮ್ಮನಂಗು ಲಂಗುಲ ದೇಹವೂ ಆ ವ್ಯಕ್ತಿಯ ಗ್ರಾಸವಾಯಿತಂತೆ. ತನಗೆ ಮೋಸ ಮಾಡುವುದಿಲ್ಲ ಅನ್ನೋ ಭರವಸೆ ಅಮ್ಮನಿಗೆ ಬಂದದ್ದರಿಂದ ಚಕಾರವೆತ್ತದೆ ದಿನಾ ಬಂದು ಅವನನ್ನು ಖುಷಿ ಪಡಿಸಿ ಹೋಗುತ್ತಿದ್ದಳಂತೆ. ಅಮ್ಮನ ಹೊಟ್ಟೆಯಲ್ಲಿ ಇವರಿಬ್ಬರ ಕಾಮದ ಫಲ ಮೊಳಕೆಯೊಡೆದು ಹುಲುಸಾಗಿ ಚಿಗುರುತ್ತಿತ್ತು. ಮುಚ್ಚಿಡಬೇಕೆಂದರೂ, ಮುಚ್ಚಿಡಲಾಗದ ಕುರುಹು ಗಳು ಕಂಡು ಬಂದಾಗ ಅಮ್ಮನಿಗೆ ಭಯವಾಯಿತಂತೆ. ಹೇಗಾದರೂ ಈ ದಿನ ಅವರನ್ನು ಒಪ್ಪಿಸಿ ಮದುವೆಯಾಗಲೇ ಬೇಕಂತ ಗಟ್ಟಿ ಮನಸ್ಸು ಮಾಡಿ ಮಾರನೆಯ ದಿನ ಅವನ ಮನೆಗೆ ಹೋದಾಗ ಬಾಗಿಲಿಗೆ ಬೀಗ ಹಾಕಿತ್ತಂತೆ. ಅಮ್ಮನಿಗೆ ಅಲ್ಲಿಯೇ ಕುಸಿದು ಬೀಳುವಂತಾಯಿತು. ಭವಿಷ್ಯ ಕತ್ತಲಿನ ಹೆಗ್ಗವಿಯಂತೆ ಇತ್ತು. ಅಮ್ಮನಿಗೆ ಅಮ್ಮ ಇರಲಿಲ್ಲ. ಅಪ್ಪ ಅಯೋಗ್ಯ. ಗಿರಾಕಿಗಳನ್ನು ಹುಡುಕಿಕೊಟ್ಟು ಕಮಿಷನ್ ಹೊಡೆಯುತ್ತಿದ್ದ. ಅಮ್ಮನನ್ನೂ ಅದೇ ಉದ್ಯೋಗಕ್ಕೆ ಹಚ್ಚ ಬೇಕೂಂತ ಪ್ರಯತ್ನಿಸಿದ್ದ. ಅಮ್ಮ ಒಪ್ಪಿರಲಿಲ್ಲ. ಅದಕ್ಕೇ ಅಪ್ಪನಿಗೆ ಮಗಳ ಮೇಲೆ ಅಷ್ಟು ಸಿಟ್ಟು. ಅಮ್ಮ ಯೋಚಿಸಿದಷ್ಟೂ ಭವಿಷ್ಯ ಅಸ್ಪಷ್ಟ ಭಯಂಕರ ಅನ್ನಿಸುತ್ತಿತ್ತು.

ಸ್ವಲ್ಪ ದಿವಸ ಅಮ್ಮ ಒಬ್ಬಳೇ ಕುಳಿತು ಒಂದೇ ಸಮನೆ ಅಳು ತ್ತಿದ್ದಳಂತೆ, ಮುಖವಿಟ್ಟುಕೊಂಡು ತಿರುಗಾಡಲು ನಾಚಿಕೆ, ಹೆದರಿಕೆ,

ಕೊನೆಗೆ ವಿಧಿಯಿಲ್ಲದೆ ಅಪ್ಪನ ದಾರಿಗೆ ಒಪ್ಪಬೇಕಾಯಿತು. ಅಪ್ಪನಿಗೂ ಖುಷಿಯಾಯಿತು.

ದಿನಗಳು ಉರುಳಿದವು. ಪಾದ್ರಿಗಳೂ ಅಮ್ಮನ ಬಳಿಗೆ ಬರುತ್ತಿದ್ದು ದುಂಟು. ಅಮ್ಮ ಕೊಟ್ಟ ಸುಖಕ್ಕೆ ಪಾದ್ರಿಗಳೊಬ್ಬರು ತುಂಬಾ ಉಪಕಾರ ಮಾಡಿದರಂತೆ. ದೇವರು ಎದ್ದು ನಿಂತ ಕೂಡಲೇ ಪಾದ್ರಿಗಳು ಪವಿತ್ರರಾಗಿ ಬಿಡುತ್ತಾರೆ, ಆದರೆ ನಮ್ಮಂಥ ಪಾಪಿಗಳಿಗೆ ಪುಣ್ಯ ಬರೋದು ಬಹಳ ದೂರ.

ಅಮ್ಮನಿಗೆ ಹೆರಿಗೆ ಕಷ್ಟವಾಯಿತು. ಕ್ರಿಶ್ಚಿಯನ್ ಆಸ್ಪತ್ರೆಯಲ್ಲಿ ಪಾದ್ರಿಗಳ ರೆಕಮೆಂಡೇಶನ್ ಮೇಲೆ ಅಮ್ಮನ ಚಿಕಿತ್ಸೆಯಾಗಿ ಸಾವಿನಿಂದ ಪಾರಾದರು. ಅಮ್ಮನಿಗೆ ಸಾಯುವುದು ಬೇಕಾಗಿತ್ತು. ಆದರೆ ನನ್ನ ಅದೃಷ್ಟ ಚೆನ್ನಾಗಿದ್ದು ಬದುಕಿಕೊಂಡರು ! ಹೇಸಿಗೆಯ ಬದುಕು ಜರ್ಝರಿತಳನ್ನಾಗಿ ಮಾಡಿ ಬಿಟ್ಟಿತ್ತು. ನೋಡೋಕೆ ರಾಜಕುಮಾರಿ ಥರಾ ಇದ್ದ ಅಮ್ಮನ ಮುಖದ ತುಂಬೆಲ್ಲಾ ಮುಪ್ಪಿನ ಸುಕ್ಕುಗಳು ಮೂಡಿದ್ದುವಂತೆ. ಮೈಯಲ್ಲಿ ಕಸುವು ಉಳಿದಿರಲಿಲ್ಲ. ಆದರೆ ಬದುಕುವುದಕ್ಕೇ ಅಮ್ಮನಿಗೆ ಎಷ್ಟು ಪ್ರಯತ್ನಿಸಿದರೂ ಬೇರೆ ಮಾರ್ಗವೇ ಕಾಣದೆ ಹೇಸಿದ ಹಾದಿಯನ್ನೇ ಆರಿಸಿಕೊಳ್ಳಬೇಕಾಯಿತಂತೆ ! ನನ್ನನ್ನೇನೋ ಚೆನ್ನಾಗಿ ಬೆಳೆಸಿದರು. ನನಗೆ ಬುದ್ಧಿ ಬರುವವರೆಗೂ ಇದ್ದ ಅಮ್ಮನಿಗೆ ಬೆಳೆದ ಮಗಳ ಮುಂದೆ ಅಸಹ್ಯ ಬದುಕನ್ನು ಹೊತ್ತು ಬಾಳುವುದಕ್ಕಾಗದೆ, "ಹೊರಟು ಹೋಗುತ್ತಿದ್ದೀನೆಂದು" ಒಂದು ಲೆಟರ್ ಬರೆದು ಇಟ್ಟು ಹೊರಟು ಹೋದರು. ಸಂಜೆ ಮನೆಗೆ ಮರಳಿದ ನನಗೆ ಅಮ್ಮ ಕಾಣಿಸಲಿಲ್ಲ. ಸ್ಕೂಲಿಂದ ಬರುವಷ್ಟು ಹೊತ್ತಿಗೆ ಮೇಜಿನ ಮೇಲೆ ಹಾಲು, ಬ್ರೆಡ್ ಇಟ್ಟುಕೊಂಡು ಕೂತಿರುತ್ತಿದ್ದ ಅಮ್ಮ ನನಗೆ ಕಾಣದೆ ಹೋದದ್ದು ಭಯವಾಯಿತು. "ಅಮ್ಮ" "ಅಮ್ಮ" ಅಂತ ಹತ್ತು ಸಲ ಕೂಗಿದರೂ ಓಗೊಡುವುದು ಕೇಳಬರಲಿಲ್ಲ. ಮೇಜಿನ ಮೇಲೆ ಕವರೊಂದು ಕಣ್ಣಿಗೆ ಬಿತ್ತು. ಬಿಚ್ಚಿ ಓದಿದೆ. ನನಗೇನೂ ಅರ್ಥವಾಗಲಿಲ್ಲ. ಮತ್ತೆ ಮತ್ತೆ ಪುರುಸೊತ್ತಾದಾಗಲೆಲ್ಲ ಓದುತ್ತಿದ್ದೆ. ಸ್ವಲ್ಪ ಸ್ವಲ್ಪವಾಗಿ ಪರಿಸ್ಥಿತಿ

ಅರ್ಥವಾಯಿತು. ಅಮ್ಮ ನನ್ನನ್ನು ಅನಾಥಳನ್ನಾಗಿ ಮಾಡಿಹೋದಳು ಅನ್ನೋ ಸಿಟ್ಟು. ಆದರೆ ಈಗ ಏನು ಮಾಡುವುದು ಅಂತ ಯೋಚನೆಗಿಟ್ಟುಕೊಂಡು ಕೆಲಸಕ್ಕಾಗಿ ಹುಡುಕಾಡ ತೊಡಗಿದೆ. ನನ್ನ ಗೆಳತಿಯ ಅಣ್ಣ ಕೆಲಸ ಕೊಡಿಸುವುದಾಗಿ ಕರೆದುಕೊಂಡು ಹೋಗಿ ನನ್ನ ಮೇಲೆ ಹಲ್ಲೆ ಮಾಡಿದ  ನಾನು ಅತ್ತೆ, ಅಂಗಲಾಚಿದೆ—ಅವನು ಸಮಾಧಾನ ಮಾಡಿ ಮದುವೆ ಮಾಡಿಕೊಳ್ಳುತ್ತೇನೆಂದು ಧೈರ್ಯ ತುಂಬಿದ. ಅದೃಷ್ಟಕ್ಕೆ ಹೇಳಿದಂತೆ ನಡೆದುಕೊಂಡ. ಆದರೇನು ಬರೀ ನರಕ. ಅವನ ಹಸಿವಿನಿಂದ ಇಬ್ಬರು ಮಕ್ಕಳನ್ನು ಪಡೆದೆ. ಒಂದು ಸತ್ತು ಹುಟ್ಟಿದ್ದು. ಎರಡನೇದು ಕಾಲಿಲ್ಲದ ಕುಂಟು ಮಗು. ಬರುಬರುತ್ತಾ ಬದುಕು ನನಗೆ ಭರಿಸುವುದಕ್ಕೆ ಆಗಲಿಲ್ಲ. ಕಷ್ಟಪಟ್ಟು ಡೈವೋರ್ಸ್ ಪಡೆದೆ. ನನ್ನ ಕುಂಟು ಮಗುವನ್ನು "ಚಾರಿಟಿ ಹೋಂನಲ್ಲಿ ಸೇರಿಸಿಬಿಟ್ಟೆ. ಈಗ ಕೆಲಸ ಮಾಡ್ತಿದ್ದೀನಿ. ನೆನಪಾದಾಗ ಹೋಗಿ ನನ್ನ ಮಗುವನ್ನು ನೋಡಿ ಬರ್ತೀನಿ. ಆಗಾಗ ಅಮ್ಮನ ಕತೆ ನೆನಪಾಗುತ್ತೆ. ಈಗಲೂ ಕಾಗದ ನನ್ನ ಬಳಿ ಇದ್ದೇ ಇದೆ. ಬೇಕಾದರೆ ನೀನೇ ಓದು ಎಂದು ಕತೆ ಹೇಳಿ ಅತ್ತು ಊದಿಸಿಕೊಂಡ ಮುಖ ಇನ್ನೂ ನೆನಪಿದೆ. ಪಾಪ ಅಂತ ಅನ್ನಿಸಿತು. ಇವಳನ್ನು ನೋಡಿದಾಗೆಲ್ಲ ಅವಳ ಕತೆ ನೆನಪಿಗೆ ಬರುತ್ತೆ. ಛೆ! ಎಂಥ ಬದುಕು" ದೇವರು ಯಾಕೆ ಹೀಗೆಲ್ಲ ಕೆಲವರಿಗೆ ಕಷ್ಟ ಕೊಡ್ತಾನೋ ಅಂತ, ಆಲೋಚಿಸುವಷ್ಟರಲ್ಲಿ. ವಾರ್ಡನ್ ಫ್ಲಾಸ್ಕ್ ಹಿಡಿದು ಬಂದಳು.

"ಏನಮ್ಮ ಇನ್ನೂ ಯೋಚಿಸ್ತಿದ್ದೀಯ ? ತಗೋ ಕಾಫಿ. ನಿನಗೆ ಬೇಕಾಗುತ್ತೆ ಅಂತ ನಾನೇ ಫ್ಲಾಸ್ಕನಲ್ಲಿ ತೆಗೆದಿರಿಸಿದ್ದೆ. ಹಾಗೇ ಈ ಚೀಟೀನೂ ತಗೋ—ಅಂತ ಅವಳ ಕೈಗೆ ಚೀಟಿ ಕೊಟ್ಟಳು. ಹಾಗೆಯೇ ನನ್ನ ರೂಮಿನಲ್ಲಿದ್ದ ಗ್ಲಾಸೊಂದರಲ್ಲಿ ಕಾಫಿ ಬಗ್ಗಿಸಿಕೊಟ್ಟಳು

ಚೀಟಿಯನ್ನು ತೆಗೆದು ಬಿಚ್ಚಿ ಓದೋಣವೆನಿಸಿತು. ಆದರೆ ಇವಳೆದುರು ಹೇಗೆ ಓದುವುದೆಂದು ಸಂಕೋಚವಾಯಿತು. ಮಡಚಿದ್ದ ಚೀಟಿಯನ್ನು ಬಿಚ್ಚಿ ಇವಳೇನಾದರೂ ಬಿಡಿಸಿ ಓದಿರಬಹುದೇ ಎನಿಸಿತು. ಓದಿದ್ದರೆ! ಛಿ! ಅಂಥ ಕೆಲಸ ಮಾಡಿರಲಾರಳು ಎನಿಸಿತು ಒಂದು ವೇಳೆ ಓದಿದ್ದರೆ ?.... ಮತ್ತೆ ಸಂಶಯ ಬರಿಯ ಚೀಟಿ ತಾನೆ ? ಓಪನ್

ಆಗಿ ಕೊಟ್ಟಿರುವುದರಿಂದ—ಓದಿದರೂ ಏನೂ ತಿಳಿದುಕೊಳ್ಳಲಾರಳು. ಅಲ್ದೆ ತಪ್ಪು ತಿಳಿದುಕೊಳ್ಳುವಂತಹುದೇನೂ ಇಲ್ಲವಲ್ಲ ಅನ್ನೋ ಧೈರ್ಯ.

'ಕಾಫಿ ತಣ್ಣಗಾಗುತ್ತೆ. ಕುಡಿದ್ಬಿಡು ಮಮತಾ' ಆ ಮಾತಿನಲ್ಲಿ ವಾತ್ಸಲ್ಯದ ಮಿಂಚಿದ್ದಂತೆ ಅನಿಸಿತು. ಅವಳ ಮುಖ ನೋಡಿದೆ. ಸಂತೋಷ ಕಣ್ಣಲ್ಲಿ ತುಂಬಿತ್ತು.

'Thanks ಮೇಡಂ'—ಅಂತ ಹೇಳಿ ಕಾಫಿ ಹೀರಿದೆ. ವಾರ್ಡನ್ ಹಾಗೇ ಸ್ವಲ್ಪ ಹೊತ್ತು ನಿಂತಿದ್ದಳು ಅವಳನ್ನು ಹೇಗೆ ಹೋಗೂಂತ ಹೇಳೋದು ? ಯಾಕೋ ನನಗೆ ಯಾರನ್ನೂ ತುಂಬಾ- ಹೊತ್ತು ಸಹಿಸುವುದಕ್ಕೆ ಆಗುತ್ತಿರಲಿಲ್ಲ. ಆದಷ್ಟು ಬೇಗ ಅವಳು ಹೋದರೆ ಸಾಕು-ಅಂತ ಅನ್ನಿಸಿತು ಅದಕ್ಕೆ ಕೇಳಿದೆ. 'ಇನ್ನೂ ಏನಾದ್ರೂ ಕೆಲಸವಿದೆಯಾ ಮೇಡಂ ? ಹಾಗೇ ನಿಂತಿದ್ದೀರಿ, ಏನಾದರೂ ಹೇಳ್ಬೇಕಾಗಿದೆಯೇ ?

ಸಂಕೋಚದಿಂದ ಹೇಳಿದಳು. 'ಒಂದೈದು ರೂಪಾಯಿ ಇದ್ದರೆ ಕೊಡು ಮಮತ ನನ್ನ ಮಗೂನ ನೋಡೋಕೆ ಹೋಗ್ತೀನಿ. ಬಿಸ್ಕೆಟ್ ಚಾಕಲೇಟ್ಸ್ ತೆಗೆದುಕೊಂಡು ಹೋಗೋಣಾಂತ. ಫಸ್ಟ್‌ಗೆ ಕೊಟ್ಬಿಡ್ತೀನಿ, ಪ್ಲೀಸ್ ?'

ಅವಳ ದೈನ್ಯ ಬೇಡಿಕೆಯನ್ನು ತಿರಸ್ಕರಿಸುವುದಕ್ಕೆ ಆಗಲಿಲ್ಲ ಪರ್ಸ ನಿಂದ ಐದು ರೂಪಾಯಿ ನೋಟನ್ನು ಕೊಟ್ಟು ಹೇಳಿದೆ—ನಿಮ್ಮ ಮಗೂಗೆ ನನ್ನ ಪರವಾಗಿ ಸ್ವೀಟ್ಸ್ ಕೊಡಿ. ನನಗೆ ನೀವೇನೂ ಇದನ್ನು ಹಿಂತಿರುಗಿಸಬೇಕಾದ್ದಿಲ್ಲ.

ವಾರ್ಡನ್‌ಗೆ ತುಂಬಾ ಖುಷಿಯಾಯ್ತು, ಉದ್ವಿಗ್ನಳಾಗಿ 'ಓಹ್ ಮಮತಾ ಥ್ಯಾಂಕ್ಯು ವೆರಿ ಮಚ್' ಅಂತ ಹೇಳಿ ಅಲ್ಲಿಂದ ಹೊರಟಳು.

ನಾನು ಬೇಗ ಬೇಗ ಸ್ನಾನಮಾಡಿ ಬರೋಣಾಂತ ಟವೆಲ್, ಸೋಪು, ಬ್ರಷ್, ಪೇಸ್ಟ ಹಿಡಿದು ಬಾಗಿಲಿಗೆ ಚಿಲಕ ಹಾಕಿ ಬಾತ್ ರೂಂನತ್ತ ನಡೆದೆ.

ಉದ್ದ ಜಡೇನ ಸುತ್ತಿ ಮುಡಿ ಹಾಕಿದೆ. ದೆಳುವಾಗಿ ಮುಖಕ್ಕೆ ಮೇಕಪ್ ಬೇಸ್ ಹಚ್ಚಿ ಪೌಡರ್ ಹೊಡೆದೆ, ತಿಳಿಕೆಂಪು ಲಿಪ್‌ಸ್ಟಿಕ್ ತುಟಿಗೆ ಹಚ್ಚಿದೆ. ಸೀರೆ ಉಟ್ಟ ಮೇಲೆ ಮ್ಯಾಚಿಂಗ್ ಬಿಂದಿ. ಮೂವತ್ತರ

ಹೊಸ್ತಿಲಲ್ಲಿದ್ದ ನನ್ನ ಮೈ ಬಡಕಲಾಗಿದ್ದ ಕಾರಣ ಫಿಗರ್ ಆಟ್ರಾಕ್ಟಿವ್ ಆಗಿರಲಿಲ್ಲ. ಬಿಗಿಯಾಗಿ ಬ್ರಾ ಬಿಗಿದೆ. ಆಕಾಶ ನೀಲಿ ಬಣ್ಣದ ಜಾರ್ಜೆಟ್ ಸೀರೆ ಉಟ್ಟು ಮ್ಯಾಚಿಂಗ್ ಬ್ಲೌಸ್ ಹಾಕಿದೆ.... ನನ್ನ ಶೃಂಗಾರ ಮುಗಿದು ಹೊರಡುವುದಕ್ಕೆ ಒಂದೂವರೆ ಗಂಟೆ ಬೇಕಾಯಿತು.

ಚೀಟಿ ಕೊಟ್ಟಿದ್ದು ಚಂದ್ರುವೇ ಇರಬೇಕಂತ ಗೆಸ್ ಮಾಡಿದೆ. ಮಗುವಿನ ತಂದೆಯಾಗಿರೋ ಅವನಿಗೆ ನನ್ನನ್ನು ನೋಡೋ ಅವಶ್ಯಕತೆ ಏನಿರಬಹುದು ಅಂತ ನನಗೆ ಹೊಳೆಯಲಿಲ್ಲ. ಅಡ್ರೆಸ್ ನೋಡಿದೆ. Hotel international room no 900 ಹೋಗೋಣವೇ, ಬೇಡವೇ ಅಂತ ಆಲೋಚಿಸಿದೆ, ಮನಸ್ಸು ಅಳುಕಿತು. ಬೇಡ ಅವನನ್ನು ನೋಡು ವುದೇ ಬೇಡ. ಸತ್ತ ಭಾವನೆಗಳನ್ನು ಕೆಣಕುವುದರಲ್ಲಿ ಅರ್ಥವಿಲ್ಲ. ರಾಧಿಕಾ ಮನೆಗೇ ಹೋಗೋಣವೆಂದು ನಿರ್ಧರಿಸಿ ಆಟೋ ಹತ್ತಿದೆ.

ಸಂಜೆ 6 ಗಂಟೆಗೆ ಮನಸ್ಸು ತುಂಬಾ ಭಾರವಾಗಿತ್ತು. ರಾಧಿಕಾಗೆ ಹೀಗೆ ಆಗ ಬಾರದಿತ್ತು. ಅಪರೂಪಕ್ಕೆ ಮಗು ಹುಟ್ಟಿದೆ ಅಂತ ಅಬ್ಬರ ದಿಂದ, ಅದ್ದೂರಿಯಿಂದ ನಾಮಕರಣ ಮಾಡಬೇಕಂತ ನಿಶ್ಚಯ ಮಾಡಿ ದ್ದರು. ನಾಮಕರಣ ಮುಗಿಸಿಕೊಂಡು ಅವಳೂ ಮಗೂ ಸ್ಟೇಟ್ಸ್‌ಗೆ ಹೋಗಬೇಕೆಂದುಕೊಂಡಿದ್ದರು. ರಾಧಿಕಾ ಗಂಡ ಹೊರಟಿದ್ದ ಪ್ಲೇನ್ ಕ್ರ್ಯಾಷ್ ಆದ ಸುದ್ದಿ ಮನೆಯವರಿಗೆಲ್ಲಾ ಕಳವಳಕ್ಕಿಟ್ಟುಕೊಂಡಿತ್ತು. ಸಂತೋಷ, ಸಂಭ್ರಮ ನಿರೀಕ್ಷಿಸಿ ಹೊರಟಿದ್ದ ನನಗೆ ಕಂಡದ್ದು ಸ್ಮಶಾನ ಭಯಂಕರತೆ. ರಾಧಿಕಾ ಮೂರ್ಛೆ ಬಿದ್ದಿದ್ದಾಳೆ. ಮಗು ಗಂಟಲು ಹೂತು ಹೋಗುವ ಹಾಗೆ ಅಳುತ್ತಿದೆ. ಅವರವರ ದುಃಖದಲ್ಲಿ ಅವರವರು ಇದ್ದಾರೆ. ಯಾರಿಗೂ ಯಾರೂ ಸಮಾಧಾನ ಮಾಡುತ್ತಿಲ್ಲ. ಪ್ರೇತ ಕಣ್ಣುಗಳಿಂದ ನೋಡುತ್ತಿರುವ ರಾಧಿಕಾಳನ್ನು ಮಾತಾಡಿಸುವ ಧೈರ್ಯ ಬರಲಿಲ್ಲ.... ನೆನೆಸಿಕೊಂಡರೆ ನೂರು ವೇದನೆಗಳು. ಈ ನೋವು, ಸಾವು ಗಳ ಬದುಕಿನ ಅರ್ಥವೇನು ? ಇದೊಂದು ಯಕ್ಷಪ್ರಶ್ನೆ. ಇದಕ್ಕೆ ಸಮಾಧಾನ ದೊರೆಯಲಾರದು. ಕನಸುಗಳನ್ನು ಕಟ್ಟಿಕೊಂಡು ಅರಳುವ ಯೌವನ ಮಂಜು ಬಿದ್ದು ಮುದುಡಿ ಹೋಗುತ್ತೆ. ಹಗುರವೆನಿಸುವ ಆ ವಯಸ್ಸಿನ ಬದುಕನ್ನು ಮೀರಿದರೆ ಬದುಕಿನ ತುಂಬೆಲ್ಲಾ ತಾಪತ್ರ

ಯದ ಮುಳ್ಳುಗಳು. ಕಣ್ಣು ಹಸಿಯಿಟ್ಟಿತು. ತುಟಿಯ ಬಣ್ಣ ಚೆದುರಿತ್ತು. ಮುಖದ ಮೇಕಪ್ ಕರಗಿತ್ತು. ಕನ್ನಡಿ ನೋಡಿಕೊಂಡೆ. ಕಣ್ಣ ಕೆಳಗಡೆ ಗೆರೆಗಳು ಮೂಡಿದ್ದುವು. ಇಷ್ಟೇ ಇನ್ನು ಸ್ವಲ್ಪ ದಿನಕ್ಕೆ ಯೌವನ ಕೇವಲ ಒಂದು ನೆನಪು. ಇತಿಹಾಸದ ಒಂದು ಪುಟ. ಖಾಡುವುದು ಋತು ಧರ್ಮ. ಬಾಡುವ ಸತ್ಯಲೋಕ ವಿದಿತವಾಗಿರುವುದ ರಿಂದಲೇ, ಬಾಡುವುದಕ್ಕೆ ಮುಂಚೆ ಗಂಡು ಜಾತಿ ಕೊಳ್ಳೆ ಹೊಡೆಯುತ್ತದೆ.... ಆದರೆ ತನ್ನದು? ತನ್ನದಾಗಿಯೇ ಉಳಿಯುತ್ತದೆಯೇ? ಪ್ರಮಾಣಿಕ ವಾಗಿ ಪ್ರಶ್ನಿಸಿಕೊಂಡಾಗ ಉತ್ತರ ಇಲ್ಲ. ತಾನೂ ಎಲ್ಲರಂತೆ!.... ಹಾಗಾದರೆ ಯಾಕೆ ಈ ನನ್ನ ಸೋಗು! ಆಕಾಂಕ್ಷೆಗಳನ್ನು ಅದುಮಿಟ್ಟು ಕೊಳ್ಳಲು ಪ್ರಯತ್ನಿಸಿದ್ದೇಕೆ? ಆ ಫೂಲ್ ಚಂದ್ರು...ಥುತ್.... ಅವನ್ಯಾಕೆ ನನ್ನ ಹಕ್ಕಿನ ಸಂತೋಷಕ್ಕೆ ಧಕ್ಕೆಯಾಗಿದ್ದಾನೆ?.... ಯೋಚಿಸಿದರೆ ಅವನಲ್ಲಿ ಫೂಲ್ ಅನ್ನಿಸಿತು. ವ್ಯಕ್ತಿತ್ವವಿಲ್ಲದ ಚಂದ್ರು ವನ್ನು ನಂಬಿದ್ದು ತನ್ನ ದಡ್ಡತನ. ಅವನ ಪಾಡಿಗೆ ಅವನು ಮದುವೆ ಯಾಗಿ ಜಾಲಿಯಾಗಿದ್ದಾನೆ. ಅವನೇನೂ ತನ್ನನ್ನು ಮದುವೆಯಾಗ ಬೇಡಾಂತ ಹೇಳಿರಲಿಲ್ಲವಲ್ಲ! ಗಂಡಸಿನ ಗುಲಾಮಳಾಗಿ ಇರುವುದು ಒಗ್ಗದ್ದಕ್ಕೆ ತಾನೇ ಆವರಿಸಿಕೊಂಡದ್ದು ಈ ಒಂಟಿತನ. ಕೂಡಿ ಬಾಳುವ ಬದುಕು ಬೇಡವೆಂದರೂ ಕಾಮನೆಗಳ ತಣಿವನ್ನು ತಿರಸ್ಕರಿಸಲಿಲ್ಲವಲ್ಲ! ಬಹಿರಂಗವಾಗಿ ಗಂಡಸನ್ನು ದ್ವೇಷಿಸುವ ನಾನು ನಿಜವಾಗಿಯೂ ಹಿಪೋಕ್ರೇಟ್.... ಹಿಪೋಕ್ರೇಟ್.... ಮತ್ತೆ ಮತ್ತೆ ನನ್ನ ಕಿವಿಗಳಲ್ಲಿ ಪ್ರತಿಧ್ವನಿಸಿತು. ನನ್ನದು ವಿಪರೀತ ವ್ಯಕ್ತಿತ್ವ. ಅಸಂಬದ್ಧ.

ನನ್ನ ಮನಸ್ಸಿನಲ್ಲಿ ಕೇವಲ ಕ್ರಾಂತಿಕಾರಿ ಭಾವನೆಗಳೇ, ನನ್ನದು ಸ್ವಚ್ಛಂದ ಪ್ರವೃತ್ತಿಗಳೇ, ಅಮ್ಮನ ಹದ್ದು ಬಸ್ತಿಲ್ಲದೆ ಅಪ್ಪನ ನಿಸ್ಸಹಾಯಕತೆಯ ದುರುಪಯೋಗ ಪಡಿಸಿಕೊಂಡನೇ—ಎಂದು ಆಲೋಚಿಸು ವಂತಾಗಿತ್ತು. ಮೊದ ಮೊದಲು ಸೆಂಟಿಮೆಂಟಲ್ ನಾನು ಅನ್ನುವ ಭಾವನೆ ನನಗೆ ಬಂದಿತ್ತು. ನನ್ನ ಗೆಳತಿಯರ ಸ್ವಚ್ಛಂದ ವರ್ತನೆಯನ್ನು ವಿರೋಧಿಸುತ್ತಿದ್ದೆ. ನನ್ನ ನಡತೆ ಅವರಂತೆ ಸ್ವಚ್ಛಂದವಾಗಿಲ್ಲದಿದ್ದರೂ ನನ್ನ ಮನಸ್ಸು ಅವರೆಲ್ಲರಿಗಿಂತ ಸ್ವಚ್ಛಂದವಾಗಿತ್ತು. ಮಾನಸಿಕ

ಸ್ವಚ್ಛಂದತೆ ನಿಜವಾಗಿಯೂ ಅಪಾಯಕಾರಿ ಅಂತ ಒಮ್ಮೊಮ್ಮೆ ಅನ್ನಿಸುತ್ತಿತ್ತು.

ನನ್ನ ಗೆಳತಿಯರು ಪರಿಸ್ಥಿತಿಯನ್ನು ಸ್ವೀಕರಿಸಿದ್ದರು. ಮೌನ ಬಸವಗಳಂತೆ ವಿರೋಧವಿಲ್ಲದೆ ಪಾಲಿಗೆ ಬಂದಿದ್ದನ್ನು ಸ್ವೀಕರಿಸುತ್ತಿದ್ದರು. ಅವರು ನನಗೆ ಸಿಕ್ಕಾಗಲೆಲ್ಲ ಅವರನ್ನು ಗೇಲಿ ಮಾಡುತ್ತಿದ್ದೆ. ತುಳಿಯುವವರ ವಿರೋಧ, ಬಂಡೇಳಲು ಪ್ರಚೋದಿಸುತ್ತಿದ್ದೆ. ಆದರೆ ನನ್ನ ಮಾತುಗಳೆಲ್ಲ ಅವರಿಗೆ ಅಸಾಧ್ಯವೆನಿಸಿತ್ತು. ನಕ್ಕು ಸಿಟ್ಟಿಸಿರು ಬಿಡುತ್ತಿದ್ದರೇ ಹೊರತು ಯಾರ ಮೇಲೂ ಪ್ರಭಾವ ಬೀರಲಿಲ್ಲ.

ಅರ್ಥವಿಲ್ಲದ ಹೋರಾಟದಲ್ಲಿ ನಾನು ಒಂಟಿಯಾಗಿ ಉಳಿದೆ. ಅವರಿಗೆ ದೊರೆತಷ್ಟು ಸುಖವೂ ನನ್ನ ಪಾಲಿಗೆ ಸೊನ್ನೆಯಾಯಿತು....ಹಾಳಾಗಿ ಹೋಗಲಿ...ನಾನೇನೂ ಪ್ರಪಂಚದ ಹೊರೆ ಹೊತ್ತಿಲ್ಲ. ಇವರೆಲ್ಲ ಸಾಯಲಿ —ಮನಸ್ಸು ಸಿಡಿಮಿಡಿಗೊಳ್ಳುತ್ತಿತ್ತು. ವ್ಯಾನಿಟಿ ಬ್ಯಾಗ್‌ನಿಂದ ಡಾಟ್ ಪೆನ್ ಹೊರತೆಗೆದೆ. ಅಲ್ಲಿಯೇ shelf ನಿಂದ ಒಂದು ಪುಸ್ತಕ ತೆಗೆದು ಅದರ ಒಂದು ಸೊನ್ನೆ ಕಣ್ಣು, ಮೂಗು, ಬಾಯಿ, ಸರಸರ Xಗಳನ್ನು ಹಾಕಿ ಪುಟ ಹರಿದು ಉಂಡೆ ಸುತ್ತಿ ಡಸ್ಟ್‌ಬಿನ್‌ನಲ್ಲಿ ಎಸೆದೆ. ಚೀರುವಂತಹ ಒಂಟಿತದ ಹೊತ್ತು ಹೋಗದು. ಹಾಳಾದವಳು ರೂಮ್ ಮೇಟ್ ಮೃದು ಆದರೂ ಇದ್ದಿದ್ದರೆ ಎಲ್ಲಾದರೂ ಸುತ್ತಾಡಿ ಬರಬಹುದಿತ್ತು. ಸುತ್ತಬೇಕು... ತುಂಬ ಸುತ್ತಬೇಕು. ಪ್ರಪಂಚವೆಲ್ಲಾ ಸುತ್ತಬೇಕು. ಹೊತ್ತು ಗೊತ್ತಿಲ್ಲದ ರಾತ್ರಿಗಳಲ್ಲಿ ಅಲೆದಾಡಬೇಕು. ಏನೇನೋ ಆಸೆಗಳು! ನಾನು ಗಂಡ ಸಾಗಿದ್ದರೆ? ಛಿ! ನನಗ್ಯಾಕೆ ಈ ಹುಚ್ಚು ಬಯಕೆ? ಊರೆಲ್ಲಾ ಸುತ್ತಬಹುದೂಂತಲೇ ?—ಇಲ್ಲ ಹುಡುಗಿಯರ ಜೀವನವೊಂದಿಗೆ ಕಣ್ಣು ಮುಚ್ಚಾಲೆಯಾಡಬೇಕಂತಲೇ ? ಯಾತಕ್ಕೆ ?.... ಪ್ರಶ್ನೆಗೆ ಉತ್ತರವಿಲ್ಲದಿದ್ದರೂ ಇಂಥ ಹುಚ್ಚು ಬಯಕೆ ಆಗಾಗ ನನ್ನ ಮನಸ್ಸಿಗೆ ಬರುವುದುಂಟು.

ನಾಳೆ ಬೆಳಗ್ಗೆ ಕೆಲಸಕ್ಕೆ ಹೋಗ್ಬೇಕು. ನಾಳೆ ಬರುವುದೇ ಬೇಡ ಅಂತ ಬಯಸುತ್ತಿದ್ದೆ. ಆದರೆ ಅರಿಯುವ ಕಾಲ ಪ್ರವಾಹವನ್ನು ತಡೆಯುವುದಕ್ಕೆ ಯಾರಿಗೆ-ತಾನೇ ಸಾಧ್ಯ ? ಈ ಕಾಲ ಪ್ರವಾಹದಲ್ಲಿ

ಎಲ್ಲವೂ ಕೊಚ್ಚಿಕೊಂಡು ಹೋಗುತ್ತೆ ಸ್ಮೃತಿಗಳು. ಸ್ಮೃತಿಗಳು ಕೆರಳಿಸುವ ವ್ಯಕ್ತಿಗಳು ? ಮನುಷ್ಯನ ಅವಸ್ಥೆಗಳು!.... ನಾನು ಎಲ್ಲವೂ !! ಗಿರಗಿರನೆ ತಿರುಗುತ್ತಿರುವ ಅನುಭವ ಸೂಜಿ ಮೊನೆ ಮೇಲೆ ನಿಂತ ಕಾಲು.... ತಿರುಗುವ ಗತಿ ಹೆಚ್ಚಿದಂತಾಯಿತು ಕತ್ತಲು.... ಕತ್ತಲು ಏನೂ ಇಲ್ಲ.... ಬರೀ ಭಯಂಕರ ಕತ್ತಲು. ಆದರೂ ಹಿತವಾದ ಕತ್ತಲು.... ಏನೂ ಕಾಣಿಸದಂತಾದ ಕಣ್ಣಿಗೆ ನಿದ್ದೆ ಹತ್ತಿತು.

ಸ್ವಲ್ಪ ಹೊತ್ತಾದ ಮೇಲೆ ಎಚ್ಚರವಾಯಿತು ನೋಡುತ್ತೇನೆ ದೀಪ ಹಾಗೆ ಉರಿಯುತ್ತಿದೆ. ಬಾಗಿಲು ಚಿಲಕವನ್ನೂ ಹಾಕಿರಲಿಲ್ಲ. ಆಶ್ಚರ್ಯವೆಂದರೆ ಮೃದು ಯಾವಾಗಲೋ ಬಂದಿದ್ದಾಳೆ. ಗೊತ್ತೇ ಆಗಲಿಲ್ಲ. ಅವಳ ಮಂಚದ ಮೇಲೆ ಸಾಮಾನೆಲ್ಲ ಹಾಗೆ ಇರೋಂದ್ರಿಂದ ಈ ಸ್ವಲ್ಪ ಹೊತ್ತಿಗೆ ಮುಂಚೆ ಬಂದಿರಬೇಕೂಂತ ಊಹಿಸಿದೆ. ಪ್ರಯಾಣದ ಆಯಾಸ ಬೆವರಿಟ್ಟ ಮೈ, ಸ್ನಾನ ಮಾಡಿದರೆ ಸ್ವಲ್ಪ ಮನಸ್ಸು ಹಗುರಾಗುತ್ತೇಂತ, ಮೃದು ಸ್ನಾನಕ್ಕೆ ಹೊರಟಿದ್ದಳು. ಈಗ ಮೃದು ಮೆಲ್ಲಗೆ ಬಾಗಿಲು ತೆಗೆದುಕೊಂಡು ಒಳಗಡೆ ಬಂದಳು. ಬಂದವಳೇ ನಗುತ್ತಾ ಕೇಳಿದಳು, "ಏನೇ 7 ಗಂಟೆಗೇ ನಿದ್ದೆ ಬಂದ್ಬಿಡ್ತಾ, ನಾನು ಬಂದು ಆಗಲೇ ಒಂದೂವರೆ ಗಂಟೆಯಾಯ್ತು. ಕುಂಭಕರ್ಣನ ಹಾಗೆ ಗೊರಕೆ ಹೊಡೀತಿದ್ದಿ. ಎಬ್ಬಿಸೋದು ಬೇಡಾಂತ ನಾನೇ ಸುಮ್ಮನಿದ್ದೆ. ಏನೇನು ಕನಸು ಬಿತ್ತು ? ನಮಗೂ ಹೇಳು"–ಎಂದು ಮೃದೂನ ಮುಖದೆಡೆ ನೋಡಿದೆ. ತುಂಬಾ ಉಲ್ಲಾಸವಾಗಿರುವ ಹಾಗೆ ಕಾಣಿಸಿತು. ಆಗ ತಾನೇ ಸ್ನಾನ ಮಾಡಿ ಬಂದವಳಾದ್ದರಿಂದ ತುಂಬಾ ಉಲ್ಲಾಸವಾಗಿರುವ ಹಾಗೆ ಕಾಣಿಸಿತು. ಆಗ ತಾನೇ ಸ್ನಾನ ಮಾಡಿ ಬಂದವಳಾದ್ದರಿಂದ ತುಂಬಾ ಫ್ರೆಷ್ ಆಗಿದ್ದಳು. ಎದ್ದವಳೇ ಮೃದುವನ್ನು ಬಿಗಿಯಾಗಿ ಅಪ್ಪಿದೆ. ತುಂಬಾ ಹಿತವಾಗಿದೆ ಅನ್ನಿಸಿತು. ನಾನು ಎದ್ದು ಹೋಗಿ ಹಿಡಿದ ರಭಸಕ್ಕೆ ಜೋಲು ಹೊಡೆದು ಹಾಸಿಗೆ ಮೇಲೆ ಬಿದ್ದಳು. ಅವಳ ಮುಖಕ್ಕೊಂದು ಮುತ್ತು ಕೊಟ್ಟೆ, ಮೃದು ತಬ್ಬಿಬ್ಬಾದಳು. "ಏಯ್ ಮಮ್ಮಿ ನಿನಗೇನ್ಬಂತೆ ಈವತ್ತು. ಹೀಗೆ ಹುಚ್ಚುಚ್ಚಾಗಿ ಆಡ್ತಿದ್ದಿ ?" ಅವಳ ಪ್ರಶ್ನೆಯನ್ನು ಕೇಳಿಸಿಕೊಳ್ಳದೇನೇ ಉತ್ತರಿಸಿದೆ. "ನಿರ್ಮಲವಾಗಿ,

ಶುಭ್ರವಾಗಿರೋದನ್ನು ಎಂಜಲಾಗುವುದಕ್ಕೆ ಮುಂಚೆ ಸ್ವಲ್ಪ ಟೇಸ್ಟ್
ನೋಡ್ತಿದ್ದೀನಿ ಅಷ್ಟೆ" ಎಂದೆ.

ಮೃದು ನನ್ನಿಂದ ಜಾಡಿಸಿಕೊಂಡಳು ಸಾವರಿಸಿಕೊಂಡು ಎದ್ದು ಕುಳಿತಳು. ಇನ್ನೂ ಸುಸ್ತಿನಿಂದ ಏದುಸಿರು ಬಿಡುತ್ತಿದ್ದಳು.

ಲೇ ಮುಮ್ಮಿ ಯಾವತ್ತಿನಿಂದ ನಮ್ಮಂಥವರನ್ನು ಲವ್ ಮಾಡೋದು ಕಲಿತೆಯೇ ? ಇದ್ಯಾಕೆ ನಿನಗೆ ಈ ಹಾಳು ಬುದ್ಧಿ"—ನಗುತ್ತಲೇ ಕೇಳಿದಳು.

ಅದನ್ನ ಆಮೇಲೆ ಹೇಳ್ತೀನಿ. ಮೊದಲು ಮಾಲು ಯಾರು ಕೊಂಡರು ವ್ಯಾಪಾರ ಎಷ್ಟಕ್ಕೆ ಕುದುರಿತು ? ಮಾಲು ಕೊಳ್ಳೊ ಮಾಲೀಕ ಯಾರು ? ಎಲ್ಲ ವಿವರ ಹೇಳಮ್ಮ.

"ಅಬ್ಬಬ್ಬ ! ನಿನಗೆ ಅದೇನು ಅರ್ಜೆಂಟೇ ? ಬಾ ಮೊದಲು ಊಟ ಮಾಡಿಕೊಂಡು ಬಂದು ಆಮೇಲೆ ಇಬ್ಬರೂ ಮಾತಾಡ್ತಾ ಜಾಗರಣೆ ಮಾಡೋಣ" ಅಂತ ಹೇಳಿ ಬಲವಂತವಾಗಿ ನನ್ನನ್ನು ಎಳೆದುಕೊಂಡು ಮೆಸ್ಸ್ ಕಡೆಗೆ ನಡೆದಳು.

ರಾತ್ರಿ ತುಂಬಾ ಹೊತ್ತು ಮಾತಾಡ್ತಾ ಇದ್ದಿವಿ. ಮೃದು ಗಂಡ ದೊಡ್ಡ ಶ್ರೀಮಂತ ಕಾಫಿ ಪ್ಲಾಂಟರ್ಸ್. ದೊಡ್ಡ ಬಂಗಲೆ, ಕಾರು, ಮೃದು ಹುಡುಗನ ಫೋಟೋ ತೋರಿಸಿದಳು. ತುಂಬಾ ಚೆನ್ನಾಗಿದ್ದ. ಫಿಲ್ಮಿ ಹೀರೋ ಹಾಗೇ ಇದ್ದ. ಮುಂದಿನ ತಿಂಗಳು ಮದುವೆ. ನನ್ನ ಬದುಕಿನ ರೆಂಬೆಯು ಎಲೆಗಳೂ, ಹೂವುಗಳು ! ಎಲ್ಲ ತುಂಬಿದ್ದಾಗ ತುಂಬಾ ಚೆನ್ನಾಗಿತ್ತು. ಒಂದೊಂದೇ ಎಲೆ, ಒಂದೊಂದೇ ಹೂವು....ಎಲ್ಲ ಉದುರಿ ಹೋದ ಬೋಳು ರೆಂಬೆ ನಾನು. ನನಗೆ ಸಂಬಂಧವೇ ಬೇಡ. ಯಾವ ನಂಟೂ ಇಲ್ಲದ ನಡುಗಡ್ಡೆಯಾಗಿ ಉಳಿಯಬೇಕೆಂಬ ನನ್ನ ಅಂದಂದಿನ ಅನಿಸಿಕೆ ಮಾತ್ರ ನಿಜವಾಗುತ್ತಿದೆಯೇ ? ಇನ್ನೆರೆಡು ದಿನಗಳಲ್ಲಿ ಮೃದು ಊರಿಗೆ ಹೊರಟು ಹೋಗುತ್ತಾಳೆ. ಆಗ ನಾನು-ಈ ರೂಮು, ಹಾಳು ಸುರಿಸುವ ಚಡಪಡಿಸುವ ನನ್ನ ಮನಸ್ಸು. ಒಂದು ಬುಟ್ಟಿ ಕಣ್ಣೀರ ಕತೆಗಳನ್ನು ತುಂಬಿಸಿಕೊಂಡ ವಾರ್ಡನ್....ಇಷ್ಟೇ ಕೊನೆಗೆ ಉಳಿಯುವುದು ....ಇಷ್ಟೇ ಕೊನೆಗೆ ಉಳಿಯುವುದು"—ಸುತ್ತಿಗೆಯೊಡೆತದ ಅನುಭವ.

ಮೃದು ಹೊರಟುಹೋಗಿದ್ದಾಳೆ. ತುಂಬಾ ಬೇಸರವಾಗುತ್ತಿದೆ. ನಾನು ರೂಮು, ಕೆಲಸ, ಸುತ್ತಿ ಸುತ್ತಿ ಅವೇ ನನ್ನ ಪಾಲಿಗೆ. ಹಾಯಾಗಿ ಒಂದೊಂದು ಸಲ ಮದುವೆಯಾಗಿ ಅವರಂತಹ ಬದುಕನ್ನೇ ಒಪ್ಪಿಕೊಳ್ಳೋಣವೇ, ಎನ್ನಿಸುತ್ತೆ. ಆದರೆ ಯಾರನ್ನು ಹುಡುಕಿ ಕೊಂಡು ಹೋಗಲಿ ? ನನಗೆ ಮದುವೆ ಮಾಡುವವರು ಯಾರು ?.... ಚಂದ್ರು ನನಗೆ ಮೋಸ ಮಾಡದಿದ್ದರೆ ?... ಮೋಸ ಮಾಡದಿದ್ದರೆ.... ಓಹ್....ಎಂತಹ ವಂಚಕ....ಮಾತಿಲ್ಲದೆ ಮೋಸ ಮಾಡಿದ....ಮತ್ತೆ ಯಾಕೆ ಬಂದಿದ್ದಾನೋ—idiot ಹೊಟ್ಟೆ ಉರಿಸಿ ಹೋಗೋಕೆ ! ಅಸಮಾಧಾನ ದಿಂದ ಸಿಡಿಮಿಡಿದೆ. ಆದರೆ ಮರುಕ್ಷಣದಲ್ಲಿಯೇ, ಅವನು ಹೇಳಿದ ಅಡ್ರೆಸ್‌ಗೆ ಹೋಗಬೇಕಿತ್ತು. ಯಾಕೆ ನನ್ನನ್ನು ಕರೆದಿದ್ದ. ಅಂತ ಲಾದರೂ ತಿಳೀತಿತ್ತು....ಹೂಂ ! ಈಗ ಯೋಚನೆ ಮಾಡಿದರೆ ಏನು ಬಂತು ? ಅಂತ ಅಂದುಕೊಂಡು ನಿರಾಸೆಯ ನಿಟ್ಟುಸಿರುಬಿಟ್ಟೆ.

ಮೊನ್ನೆ ಅನಿರೀಕ್ಷಿತವಾಗಿ ಪ್ರೊಫೆಸರ್ ಸಿಕ್ಕಿದ್ದರು ಅವರ ಮಗ ಸ್ಟೇಟ್ಸ್‌ನಿಂದ ಬಂದನಂತೆ ಸಂತೋಷ ಕೂಟ ಒಂದನ್ನು ಏರ್ಪಡಿಸಿದ್ದಾರೆ. ಅದಕ್ಕೆ ನನ್ನನ್ನು invite ಮಾಡಿದ್ರು. ಬೇರೆ ಯಾರೂ guests ಇಲ್ಲ. ಬರೀ ಮನೆಯವರು ಮತ್ತು ಅವರ ಮಗನ ಕೆಲವು friends ಅಷ್ಟೇ. ನಾಳೇನೇ ಪಾರ್ಟಿ, ಹೋಗ್ಲೇಬೇಕು ! ಅಂತ ನಿರ್ಧಾರ ಮಾಡಿ ಮರೆಯು ದಿರುವ ಹಾಗೆ ಕ್ಯಾಲೆಂಡರಿನಲ್ಲಿ ತಾರೀಖನ್ನು ಗುರುತು ಮಾಡಿದ್ದೆ.

ತುಂಬಾ ಜನ ಅಂತೂ ಇಲ್ಲದಿದ್ದರೂ ಸಾಕಷ್ಟು ಮಂದಿ ಬಂದಿದ್ದರು ಬರೀ ಕೈಲಿ ಹೋಗಬಾರದಂತೆ, ನಿರ್ಮಲ್ ಪೈಂಟಿಂಗ್ ಫಲಕವನ್ನು ಕೊಂಡುಕೊಂಡು ಪ್ಯಾಕ್ ಮಾಡಿಸಿ ತೆಗೆದುಕೊಂಡು ಹೋಗಿದ್ದೆ. ಹೋಗಿ ಪ್ರೊಫೆಸರನ್ನು ಮೊದಲು ಕಂಡು ನಮಸ್ಕಾರ ಮಾಡಿದೆ. ಅವರು ನನ್ನನ್ನು ಮಗನಿಗೆ introduce ಮಾಡಿದರು. ಅವರು ನಗುತ್ತಾ ಕೈ ಚಾಚಿದರು. ಒಂದು ಕ್ಷಣ ತಡವರಿಸಿದಂತೆ ಆಯಿತು. presentation ಅವರ ಕೈಗೆ ಕೊಟ್ಟು ಶುಭಾಶಯ ಕೋರಿ ಮತ್ತೊಮ್ಮೆ ನಮಸ್ಕರಿಸಿ ಹಿಂತಿರುಗಿದೆ. ಪ್ರೊಫೆಸರರ ಹೆಂಡತಿ ಬೇರೆ ಗಂಡಸರೊಂದಿಗೆ ತುಂಬಾ ಫ್ರೀಯಾಗಿ ವರ್ತಿಸು

ತ್ತಿದ್ದುದನ್ನು ನೋಡಿ ಆಶ್ಚರ್ಯವಾಯಿತು. ಆ ವಯಸ್ಸಿನಲ್ಲೂ ಆಕೆ ಯಲ್ಲಿದ್ದ ಉತ್ಸಾಹ, ಬದುಕಿನಲ್ಲಿರೋ ಆಸಕ್ತಿ, ನನ್ನಲ್ಲಿ ಸಾಯುತ್ತಿದ್ದ ಜೀವನಾಶಕ್ತಿಯನ್ನು ಕೆರಳಿಸಿತು ನನ್ನ ಬದುಕಿನಲ್ಲಿ ಮಧುರ ಸ್ಮೃತಿ ಯಾಗಿ ಉಳಿಯುವಂತಹ ಯಾವ ಘಟನೆಯೂ ಘಟಿಸಿಲ್ಲ. ಯಾವ ವ್ಯಕ್ತಿಯೂ ಇಲ್ಲ. ಅಲ್ಲಿ ನೆರೆದಿರುವ ಅಷ್ಟು ಮಂದಿಯಲ್ಲೂ ತುಂಬಿರುವ ಜೀವನೋತ್ಸಾಹ ನನ್ನ ಪೆಸಿಮಿಸ್ಟಿಕ್ ಅಭಿಪ್ರಾಯಗಳು ಸುಳ್ಳೆಂದು ಸಾರುವಂತಿತ್ತು.

ಮಾಗಿಯಲ್ಲೂ ವಸಂತದ ಉಲ್ಲಾಸ! ಇವರೊಂದಿಗೆ ಬೆರೆಯಬೇಕು. ಕುಣಿಯಬೇಕು ಅನ್ನಿಸುತ್ತಿತ್ತು. ಆದರೆ ಅವರು ಮಾಡುತ್ತಿರುವ ನರ್ತನದ ಹೆಜ್ಜೆಯ ಗತಿಗೆ ನನ್ನ ಹೆಜ್ಜೆಯ ಗತಿ ಹೊಂದಲಾರದು. ಅವರದು ಪಳಗಿದ ಹೆಜ್ಜೆ. ನನ್ನದು ಇನ್ನೂ ಪರಿಚಯವೇ ಇಲ್ಲದ ತಪ್ಪು ಹೆಜ್ಜೆ, ನಾನು ಸೇರಿಸಿದರೆ, ಶೃತಿ ತಪ್ಪುತ್ತದೆ. ಲಯ ತಪ್ಪು ತ್ತದೆ. ಹೆಜ್ಜೆ ತಪ್ಪುತ್ತದೆ.... ಬೇಡ. ಬೇಡ....ಸಮಶೃತಿಯ ತನ್ಮಯತೆ ಯಲ್ಲಿ ವಿಷಮ ಶೃತಿಯನ್ನು ಬೆರೆಸುವುದು ಬೇಡ. ಕಲಿತು ಪಳಗಿದ ಮೇಲೆ ಕೂಡಿಸಬೇಕೇ ಹೊರತು, ಈಗ ಇವರ ಹೊಂದಿದ ಹೆಜ್ಜೆಗಳೊಂದಿಗೆ ಹೊಂದದ ನನ್ನ ತೊದಲು ಹೆಜ್ಜೆ ಬೇಡವೇ ಬೇಡವೆನಿಸಿತು. ಅಲ್ಲಿರುವು ದಕ್ಕೂ ಮನಸ್ಸಾಗಲಿಲ್ಲ. ಪ್ರೊಫೆಸರರಿಗೆ, ಅರ್ಜೆಂಟ್ ಕೆಲಸದ ನೆಪ ಹೇಳಿ ತಪ್ಪಿಸಿಕೊಂಡು ಓಡಿಬಂದೆ.

'ಮೃದುಗೆ' ಮದುವೆಯಾಗಿ ಹೋಗಿದೆ. ಗಂಡನ ಮನೆಗೆ ಹೋಗಿರು ತ್ತಾಳೆ. ಗಂಡ ತುಂಬಾ ಶ್ರೀಮಂತ ಕಾರಿದೆ. ಜಾಲಿಯಾಗಿ ಊರೆಲ್ಲ ಸುತ್ತಿಬರುತ್ತಾಳೆ. ಅವನ ಬಾಹುಗಳ ಸೆರೆಯಲ್ಲಿ ಎಲ್ಲವನ್ನೂ ಮರೆತು ಬಿಡುತ್ತಾಳೆ. ಎಂದೂ ನನ್ನ ನೆನಪು ಅವಳಿಗೆ ಬರಲಾರದು. ಒಂದೊಂದು ರಾತ್ರಿಯೂ ಮೃದುಗೆ ಹೊಸ ಹೊಸದಾಗಿ ಅನುಭವಕ್ಕೆ ಬರುತ್ತೆ! ಅವಳಿಗೆ ಭಾರವಾದ ಮನಸ್ಸಿಲ್ಲ. ಪ್ರೊಫೆಸರ ಮನೆಯಲ್ಲಿ ನೋಡಿದಷ್ಟೇ ಉಲ್ಲಾಸ, ಉತ್ಸಾಹ ಅವಳ ಪಾಲಿಗಿರುತ್ತೆ! ಅವಳ ಗಂಡ ಮಲ್ಲಿಗೆ ದಂಡೆ ಹಿಡಿದು, ಹತ್ತಿರ....ಹತ್ತಿರ....ಹತ್ತಿರ ತೀರಾ ಹತ್ತಿರ ಬರುತ್ತಾನೆ. ದಂಡೆ ಮುಡಿಸುತ್ತಾನೆ ಮುಡಿದ ದಂಡೆಯ ಪರಿಮಳಕ್ಕೆ ಮನಸೋತು

ಕಣ್ಣು ಮುಚ್ಚುತ್ತಾಳೆ ಮೃದು ಆಗ ಅವನು....ಅವಳನ್ನು ಹತ್ತಿರಕ್ಕೆಳೆದು ಕೊಂಡು ಕರಗಿಸಿಕೊಂಡುಬಿಡುತ್ತಾನೆ.... ಮೃದು ಇಲ್ಲ....ಮೃದು ಅವನಲ್ಲಿ ಅವಳು ಉಸಿರಾಡುತ್ತಾಳೆ. ಬದುಕುತ್ತಾಳೆ, ಹಾಗಾದರೆ ಅವಳ ವ್ಯಕ್ತಿತ್ವ ಅವಳು ಸುಳ್ಳೇ? ಅವಳ ವ್ಯಕ್ತಿತ್ವ ಸುಳ್ಳೆ?

ನನ್ನ ಒಂಟಿತನದಲ್ಲಿ ನಾನು ಕಂಡದ್ದೇನು? ಸಾಧಿಸಿದ್ದೇನು? ಮೃದು ಗಂಡನನ್ನು ಒಪ್ಪಿಕೊಂಡು ಕಳಕೊಂಡಿದ್ದೇನು? ಅಸ್ತಿತ್ವ ವನ್ನು, ವ್ಯಕ್ತಿತ್ವವನ್ನು ಉಳಿಸಿಕೊಂಡೆನೆಂಬ ನನ್ನ ಆತ್ಮ ಪ್ರತಿಷ್ಠೆ ನಿಜವಾದದ್ದೆ? ಅಥವಾ ದೊರೆಯದ್ದಕ್ಕಾಗಿ ಈ ವೈರಾಗ್ಯದ ಮನಃ ಸ್ಥಿತಿಯೆ?

ಹುಡುಕಾಡಿದಷ್ಟೂ, ತಡಕಾಡಿದಷ್ಟೂ ನನ್ನ ಪ್ರತಿಷ್ಠೆ ಸುಳ್ಳು. ಪೊಳ್ಳು ಅನ್ನುವುದು ಸತ್ಯವಾಗುತ್ತಿತ್ತು. ಸೋತ ನಿರ್ಧಾರ ನನ್ನದು ಯಾಕೋ ಅಪ್ಪ ಅಮ್ಮನ ನೆನಪಾಯಿತು. ಕಣ್ಣು ಒದ್ದೆಯಾಯಿತು. ಅಳುವುದು ದುರ್ಬಲ ಮನಸ್ಸಿನ ಲಕ್ಷಣ ಎಂದು ನಾನೇ ಹೇಳುತ್ತಿದ್ದೆ. ಆದರೆ ನಾನು ದುರ್ಬಲವಾಗುತ್ತಿರುವುದು, ಸೋಲುತ್ತಿರುವುದು ನೂರಕ್ಕೆ ನೂರು ನಿಜ. ಚಂದ್ರು....ಚಂದ್ರು, ಅಂತ ಅರಚಬೇಕೆನ್ನಿಸಿತು.

ರಾತ್ರಿಯೆಲ್ಲ ಪ್ರಜ್ಞೆಯಿಲ್ಲದೆ ಬಿದ್ದಿದ್ದೆ. ಬೆಳಗ್ಗೆ ಏಳಲು ಪ್ರಯತ್ನಿಸಿ ದಾಗ ಸಾಧ್ಯವೇ ಆಗಲಿಲ್ಲ. ತಲೆ ವಿಪರೀತ ಭಾರವಾಗಿತ್ತು. ಹಿಮ ದಲ್ಲಿದ್ದರೆ ಎಷ್ಟು ಚಳಿಯೋ ಅಷ್ಟು ಚಳಿ. ಇದ್ದ ಒಂದೆರಡು ಕಂಬಳಿ ಗಳನ್ನು ಹೊದ್ದುಕೊಂಡರೂ ಸಾಕಾಗಲಿಲ್ಲ. ಮೈ ಸುಡುತ್ತಿತ್ತು. ಮೃದು ನೆನಪಾಯಿತು. ಅವಳಿದ್ದಿದ್ದರೆ ನನ್ನನ್ನು ನೋಡಿಕೊಳ್ಳು ತ್ತಿದ್ದಳು. ಆದರೆ ಈಗ ಏಳುವುದಕ್ಕೂ ಆಗದೆ, ನನ್ನ ವಿಷಯ ಯಾರಿಗೂ ತಿಳಿಯಲಿಲ್ಲ. ಮಧ್ಯಾನದವರೆಗೂ ನರಳುತ್ತಲೇ ಇದ್ದೆ. ವಾರ್ಡನ್ ಬಂದು ಬಾಗಿಲು ತಟ್ಟಿದಳು. ಶಕ್ತಿಯನ್ನು ಕೂಡಿಸಿಕೊಂಡು ಕಾಲುಗಳನ್ನು ಎಳೆದುಕೊಳ್ಳುತ್ತಾ ಬಂದು ಬಾಗಿಲು ತೆಗೆದೆ. ನಿಲ್ಲುವು ದಕ್ಕೂ ಶಕ್ತಿಯಿಲ್ಲದೆ ಬಿದ್ದೆ. ವಾರ್ಡನ್ ಗಾಬರಿಯಾಗಿ ಭಗ್ಗಿ ಕೈ ಕೊಟ್ಟು ಎಬ್ಬಿಸಿದಳು. ಮೆಲ್ಲಗೆ ನಡೆಸಿಕೊಂಡು ಹೋಗಿ ಮಂಚದ ಮೇಲೆ ಮಲಗಿಸಿದಳು. ಮೇರಿಯ ದಯಾರ್ದ್ರ ಕಣ್ಣುಗಳನ್ನು ನೋಡು

ತ್ತಿದ್ದರೆ ಅವಳಲ್ಲಿ ತಾಯಿಯ ಮುಖ ಕಾಣಿಸಿತು. 'ಅಮ್ಮ' ಎಂದು ನರಳಿದೆ. ವಾರ್ಡನ್ ಮೇರಿ ಒಂದೈದು ನಿಮಿಷದಲ್ಲಿ ಬರುತ್ತೇನೆಂದು ಹೇಳಿ ಹೊರಗೆ ಹೊರಟಳು.

"ಐದು ನಿಮಿಷಗಳೊಳಗಾಗಿ ವಾರ್ಡನ್, ಚಂದ್ರು ಜೊತೆಗೆ ಬಂದಳು. ಚಂದ್ರು.... ಚಂದ್ರು ... ಅಸ್ಪಷ್ಟವಾಗಿ ಕಾಣಿಸಿತು. ನನಗೆ ನಂಬಿಕೆ ಚಂದ್ರು ಇಲ್ಲಿಗ್ಯಾಕೆ ಬಂದ? ಎಂದು ಪ್ರಶ್ನಿಸಿತು ಮನಸ್ಸು... ಇನ್ನೊಂದು ಐದು ನಿಮಿಷದಲ್ಲಿ ಡಾಕ್ಟರೂ ಬಂದರು. ಪರೀಕ್ಷಿಸಿ, ಕೂಡಲೇ ಆಸ್ಪತ್ರೆಗೆ ಬರಲಿಗೆ. ಸೇರಿಸಲು ಹೇಳಿದಳು. ವಾರ್ಡನ್ ಚಂದ್ರುವಿನೆಡೆಗೆ ನೋಡಿದಳು. ಅರ್ಥಮಾಡಿಕೊಂಡ ಚಂದ್ರು ಹೊರಗೆ ಹೊರಟ.

ವಾರ್ಡನ್, ಚಂದ್ರು ಮಮತಾ ಮೂವರೂ ಟ್ಯಾಕ್ಸಿಯಲ್ಲಿ ಹೊರಟರು. ಚಂದ್ರು ಏನೇನೋ ಹೇಳ್ಬೇಕೂಂತ ಬಂದಿದ್ದ. ಮುರಿದ ನಂಟನ್ನು ಸರಿಪಡಿಸಲು ಯೋಚಿಸಿದ್ದ. ಆದ ಅನ್ಯಾಯಕ್ಕೆ ಪರಿಹಾರ ನೀಡಲು ಯೋಚಿಸಿದ್ದ. ಆದರೆ ಮಮತಾ ಈಗ ಕೇಳುವ ಸ್ಥಿತಿಯಲ್ಲಿಲ್ಲ. ಇನ್ನೂ ಕಾಯಬೇಕು. ನಿಶ್ಚೇಷ್ಟಿತಳಾಗಿ ಬಿದ್ದಿದ್ದ ಮಮತಳತ್ತ ನೋಡುತ್ತಿದ್ದ. ಆ ವಯಸ್ಸಿನ ಕಾವು ಕಳೆದದ್ದರಿಂದ ಸಮಾಧಾನವಾಗಿ ಯೋಚಿಸಿದ ಮಮತಳ ಮುಂದೆ ಪ್ರಸ್ತಾಪ ಮಾಡಲು ಬಂದಿದ್ದ.

ಟ್ಯಾಕ್ಸಿಯ ವೇಗ ಹೆಚ್ಚಿತು. ಮಮತಳಲ್ಲಿ ಚಲನೆಯೇ ಇರಲಿಲ್ಲ. ವಾರ್ಡನ್‌ಗೆ ಭಯವಾಯಿತು. ಆಸ್ಪತ್ರೆ ಸೇರುವವರೆಗೆ ಮನಸ್ಸಿನಲ್ಲಿಯೇ ಪ್ರಾರ್ಥಿಸಿದಳು. ಚಂದ್ರುವಿನ ಎದೆ ಡವ ಡವ ಹೊಡೆದುಕೊಳ್ಳುತ್ತಿತ್ತು.

ಆಸ್ಪತ್ರೆಗೆ ಸೇರಿದ ಒಂದು ವಾರದ ಮೇಲೆ ನನ್ನ ಪರಿಸ್ಥಿತಿ ಸುಧಾರಿಸಿತು. ತುಂಬಾ ಸಂತೋಷವಾದದ್ದೆಂದರೆ ವಾರ್ಡನ್‌ಗೆ. ಮಗುವಿಗಿಂತ ಹೆಚ್ಚಿನ ವಾತ್ಸಲ್ಯವನ್ನು ತೋರಿಸಿ ನನ್ನ ಪ್ರಾಣವನ್ನೇ ಉಳಿಸಿದಳು. ನನ್ನ ಮನಸ್ಸು ಕೃತಜ್ಞತೆಯಿಂದ ತುಂಬಿ ಹೋಯಿತು.

ಚಂದ್ರೂ ಮಾಮೂಲಿನಂತೆ ಬಂದು ಹೋಗುತ್ತಾನೆ. ವಾರ್ಡನ್ ಮೇರಿಯಿಂದ ಚಂದ್ರುವಿನ ವಿಷಯ ತಿಳಿಯಿತು. ಮೊದಮೊದಲು ಮುಖ ನೋಡಲು ಅಸಹ್ಯಪಟ್ಟುಕೊಂಡರೂ, ಸೌಜನ್ಯಕ್ಕಾಗಿ ಒಂದೆರಡು ಮಾತಾಡುತ್ತಿದ್ದೆ. ಮದುವೆಯಾಗಿರೋ ಚಂದ್ರು ಹೀಗ್ಯಾಕೆ ತನ್ನ

ಬೆನ್ನ ಹಿಂದೆ ಬಿದ್ದಿದ್ದಾನೆಂದು ಅನಿಸಿದರೂ ಕೇಳಲಿಲ್ಲ. ಚಂದ್ರುವಿನಲ್ಲಿ ತುಂಬಾ ಬದಲಾವಣೆಯಾಗಿದೆ. ಮುಖದಲ್ಲಿ ದೈನ್ಯತೆ ತುಂಬಿದೆ. ಮೊದಲಿದ್ದ ನಗುವಿನ ಮುಖ ಇಲ್ಲವೇ ಇಲ್ಲ. ತೀರಾ ಬಡಕಲಾಗಿದ್ದಾನೆ. ಒಂದು ಸಲ ನೋಡಿದರೆ "ಅಯ್ಯೋ" ಎನಿಸುತ್ತೆ !

ಸ್ಪೆಷಲ್‌ವಾರ್ಡ್ ತೆಗೆದುಕೊಂಡಿದ್ದ ನನಗೆ ಯಾವ ಡಿಸ್ಟರ್‌ಬೆನ್ಸೂ ಇರಲಿಲ್ಲ. ಆ ದಿನ ವಾರ್ಡನ್ ನನ್ನನ್ನು ನೋಡೋಕೆ ಇನ್ನೂ ಬಂದೇ ಇರಲಿಲ್ಲ. ಒಬ್ಬಳೇ ಮಲಗಿದ್ದೆ....ಚಂದ್ರು ಬಂದ....ಹಾಸಿಗೆಗೆ ತೀರಾ ಸಮೀಪ ಬಂದು ಏನೋ ಹೇಳಬೇಕೆಂದು ಪ್ರಯತ್ನಿಸುತ್ತಿರುವಂತೆ ತೋರಿತು. ನಾನಾಗಿ ನಾನು ಕೇಳಲಿಲ್ಲ. ಪ್ರಯಾಣ ಮಾಡುವಾಗ ಮಾಡಿಕೊಂಡ ಸ್ನೇಹದಂತೆ, ಚಂದ್ರು ಮತ್ತು ನನ್ನ ಸ್ನೇಹ" ಎಂದುಕೊಂಡಿದ್ದೆ. ಆದ್ದರಿಂದಲೇ ಹೆಚ್ಚಿನ ಸ್ನೇಹ ಬೇಡವೆಂದು, ಅವನು ಹೇಳಬೇಕೆನ್ನುವುದನ್ನೇ ಹೆಳುವಂತೆ ಪ್ರೋತ್ಸಾಹ ನೀಡಲಿಲ್ಲ. ನನ್ನಿಂದ ಉತ್ತೇಜನ ದೊರೆಯುಬಹುದೆಂದು ನಿರೀಕ್ಷಿಸಿದ ಚಂದ್ರುಗೆ ನನ್ನ ಕೃತಜ್ಞತೆ ಯಷ್ಟೇ ದೊರೆತದ್ದು. ಚಂದ್ರುವೇ ಮುಂದಾಗಿ ಮಾತನಾಡಬೇಕೆಂದು ಬಾಯಿ ತೆಗೆದ. ಅಷ್ಟರಲ್ಲಿ ವಾರ್ಡನ್ ಮೇರಿಯ ಕೆಮ್ಮು ಕೇಳಿಸಿ, ಚಂದ್ರುವಿನ ಮಾತು ಗಂಟಲಲ್ಲೇ ಉಳಿಯಿತು.

## ಬೀಳ್ಕೊಡುಗೆ

ಕಾಲೇಜು ವಾತಾವರಣ ಬಿಸಿಬಿಸಿಯಾಗಿತ್ತು. ಕ್ಲಾಸುಗಳಲ್ಲೆಲ್ಲ ಗುಸು ಗುಸು ಪಿಸ ಪಿಸ. ಪ್ರೊಫೆಸರ್ ನೀಲಕಂಠರಾಯರಿಗೆ ಸನ್ಮಾನ ಸಮಾರಂಭ. ಯಾಕೆ, ಏನು ? ಯಾರಿಗೂ ಸರಿಯಾದ ಕಾರಣ ಗೊತ್ತಿರಲಿಲ್ಲ. ಹುಡುಗರಿಗೆ ತಲೆಗೊಂದರಂತೆ ಊಹಾಪೋಹಗಳು. ಘಟಿಂಗ ಹುಡುಗರು 'ನೀಲಕಂಠರಾಯರನ್ನೇ ಕೇಳಿಬಿಡುವುದು'—ಎಂದುಕೊಂಡರು. ಹುಡುಗಿಯರಿಗೂ ಆಸಕ್ತಿ ಮೊದಲು ಇದ್ದಿತಾದರೂ, ನಂತರ ಯಾಕೋ ಅನಾಸಕ್ತರಾಗಿ ಉಳಿದರು.

ಸಹೋದ್ಯೋಗಿಗಳಿಗೇ ಸರಿಯಾಗಿ ಗೊತ್ತಿರಲಿಲ್ಲ. ಕಾಂಟ್ರಿಬ್ಯೂಷನ್ ಮಾಡಬೇಕಾಗಿ ಬಂದಾಗ ಬಂದಾಗ ಸ್ವಲ್ಪ ಸ್ವಲ್ಪವಾಗಿ ಗೊತ್ತಾಯಿತು. ಅದಕ್ಕೆ ಪ್ರೊಫೆಸರರು ಇತ್ತೀಚೆಗೆ ಒಂದು ಥರ ಇದ್ದರು. ಮುಖದಲ್ಲಿ ಮೊದಲು ಇರುತ್ತಿದ್ದ ನಗುವಾಗಲೀ, ಗೆಲುವಾಗಲಿ ಕಾಣಿಸುತ್ತಿರಲಿಲ್ಲ. ವಯಸ್ಸಾಗಿದ್ದರೂ ಅವರಲ್ಲಿದ್ದ ಲವಲವಿಕೆ ಯುವಕರನ್ನು ನಾಚಿಸು ವಂತಿತ್ತು. ಅಲ್ಲದೆ ಅವರಿಲ್ಲದಿದ್ದರೆ staff room ಏನೋ ಒಂದು ರೀತಿ ಯಲ್ಲಿ ಮಂಕಾಗಿ ನಿಶ್ಚೇಷ್ಟ ರೋಗಿಯಂತೆ ಇರುತ್ತಿತ್ತು.

ಪ್ರೊಫೆಸರರು ಎಲ್ಲರಿಗೂ ಬೇಕಾಗಿದ್ದರೂ, ಆದರೆ ಯಾಕೋ ಆಡಳಿತ ವರ್ಗಕ್ಕೆ ಅದರಲ್ಲೂ ಪ್ರಿನ್ಸಿಪಾಲರಿಗೆ ಏನೋ ಒಂದು ರೀತಿಯ ಮನಸ್ತಾಪ ಇದ್ದ ಹಾಗಿತ್ತು. ಆದರೆ ಇದು ಅವ್ಯಕ್ತ. ಮೇಲೆ ಮೇಲೆ ಮಾತ ನಾಡುವ ಸೌಜನ್ಯವಿದ್ದರೂ ಒಳಗೊಳಗೇ ಪ್ರೊಫೆಸರರ ಬಗ್ಗೆ ಅಸಮಾಧಾನ ವಿತ್ತು. ಆ ಅಸಮಾಧಾನ ಯಾವ ರೀತಿಯಲ್ಲೂ ನೇರವಾಗಿ ವ್ಯಕ್ತ ಪಡಿಸುವ ಹಾಗಿರಲಿಲ್ಲ. ಈ ಸತ್ಯ ಇಬ್ಬರಿಗೂ ಗೊತ್ತು. ಪ್ರತಿಭಾವಂತ ಪ್ರೊಫೆಸರರು ಎಲ್ಲರ ಮನಸ್ಸಿನಲ್ಲಿಯೂ ಒಂದೊಂದು ಭದ್ರವಾದ ನೆಲೆ ಯನ್ನು ಗಿಟ್ಟಿಸಿಕೊಂಡಿದ್ದರು. ಪ್ರಿನ್ಸಿಪಲ್ದು ಮನುಷ್ಯರಾದ್ದರಿಂದ, ಸ್ವಲ್ಪ ನಿಷ್ಠೂರವಾಗಿ ಎದುರಿನವರಿಗೆ ಅನಿಸುತ್ತಿದ್ದುದು ಸ್ವಾಭಾವಿಕ ಅವರ ತಪ್ಪುಗಳಿಂದ ಅವರನ್ನೇ ಕೆಡವಿಕಟ್ಟುವುದಂತೂ ಅಸಂಭವವಾಗಿತ್ತು. ಅದಕ್ಕೇ ಹಲ್ಲು ಕಚ್ಚಿಕೊಂಡು ಅವರ Franknessನ ಸಹಿಸಿ ಕೊಳ್ಳಬೇಕಾ ಗಿತ್ತು. ಪ್ರೊಫೆಸರರೇ ಪ್ರಿನ್ಸಿಪಾಲರಿಗೆ ಸಿಂಹಸ್ವಪ್ನವಾಗಿದ್ದರೂ ಪ್ರೊಫೆಸರರು ತಮ್ಮ ಕೆಲಸವನ್ನು ತಾವು-ಬಹಳ ಕರ್ತವ್ಯ ಪ್ರಜ್ಞೆಯಿಂದ ಯಾರೂ ಅವರತ್ತ ಬೆರಳು ತೋರಿಸಲು ಅವಕಾಶವಿಲ್ಲದವರಂತೆ ಮಾಡಿ ಕೊಂಡು ಹೋಗುತ್ತಿದ್ದುದರಿಂದ ಪ್ರಿನ್ಸಿಪಾಲರಿಗೂ ಅವರನ್ನು ಪ್ರಶ್ನಿಸುವ ಎದೆಗಾರಿಕೆಯಿರಲಿಲ್ಲ.

ನೇರವಾಗಿ ಆಗದ್ದಕ್ಕೆ ಬಳಸು ದಾರಿಗಳನ್ನು ಹುಡುಕಬೇಕಾಗಿತ್ತು. ಪ್ರಿನ್ಸಿಪಾಲರಿಗೆ ಅದಕ್ಕೇ ಷೆರ್ಲಾಕ್ ಹೋಮ್ಸ್‌ನಂಥ ಪತ್ತೇದಾರಿಗಳು ಉದ್ಯೋಗಿಗಳಲ್ಲೇ ಹುಟ್ಟಿಕೊಂಡರು. ಪ್ರೊಫೆಸರರ ಮಾತುಕತೆ, ನಡವಳಿಕೆ, ಯಾರ್ಯಾರೊಂದಿಗೆ ಅವರ ಸಂಬಂಧ, ಪ್ರತಿಯೊಬ್ಬರೊಡನೆಯೂ

ಅವರ ಚಲನವಲನ-ಎಲ್ಲಾ ಸಾಹೇಬರಿಗೆ ವರದಿಯಾಗುತ್ತಿತ್ತು. ಪ್ರೊಫೆಸರರ ಪಾಲಿಗೆ ನಿರಂತರ ಎಮರ್ಜೆನ್ಸಿ ಇದ್ದ ಹಾಗೇ ಇತ್ತು. ಅವರ ವೀಕ್ ಪಾಯಿಂಟ್ಸ್ ಮತ್ತು ಸ್ಟ್ರಾಂಗ್ ಪಾಯಿಂಟ್ಸ್ ಏನೇನು ಅನ್ನುವುದೆಲ್ಲ ಸಾಹೇಬರ ಫೈಲಲ್ಲಿ ದಾಖಲೆಯಾಗಿತ್ತು.

ಇಂತಹ ಒತ್ತಡದ ವಾತಾವರಣದಲ್ಲಿ ಪ್ರೊಫೆಸರರಿಗೆ ಸಮಾರಂಭ ಅದೂ ಬೀಳ್ಕೊಡುಗೆ ಮೊದ ಮೊದಲು ಯಾರಿಗೂ ಅರ್ಥವಾಗದಿದ್ದರೂ ಕ್ರಮೇಣ ಎಲ್ಲ ವಿವರಣೆಗಳೂ ಒಂದೊಂದಾಗಿ ಹೊರಬಂದವು.

ಪ್ರೊಫೆಸರರಿಗೆ ದೂರದ ಯಾವುದೋ ಒಂದು ಹಳ್ಳಿಯಲ್ಲಿನ ಕಾಲೇಜಿಗೆ ಟ್ರಾನ್ಸ್‌ಫರ್ ! ಅವರ ನಿವೃತ್ತಿಗೆ ಕೇವಲ ಒಂದೋ ಎರಡೋ ವರ್ಷಗಳು ಇರಬೇಕಾಗಿರುವಾಗ ಟ್ರಾನ್ಸ್‌ಫರ್ ! ಎಲ್ಲರಿಗೂ ಆಶ್ಚರ್ಯ. ಆದರೆ ಇದರ ಹಿಂದೆ ರಾಜಕೀಯ ಇದೆ ಎನ್ನುವುದು ಎಲ್ಲರಿಗೂ ಅಸ್ಪಷ್ಟವಾಗಿ ತಿಳಿದಿತ್ತು.

ಪ್ರೊಫೆಸರರು ಹೆಚ್ಚು ವರ್ಷ ಇದ್ದದ್ದು ಇದೇ ಕಾಲೇಜಿನಲ್ಲಿಯೇ. ಅವರಿಗೆ ಇದರೊಂದಿಗೆ ನೆಚ್ಚಿಕೆ ಬಹಳ. ಈ ಕಾಲೇಜಿನ ವಿದ್ಯಾರ್ಥಿಗಳು ಸಹೋದ್ಯೋಗಿಗಳೊಂದಿಗೆ ಅವರದು ಅವಿಭಾಜ್ಯ ಆತ್ಮೀಯತೆ. ಕೊನೆ ನಿಮಿಷದವರೆವಿಗೂ ಇದರೊಂದಿಗೇ ಇದ್ದು ಈ ಕಾಲೇಜಿನಿಂದಲೇ ನಿವೃತ್ತಿಯನ್ನು ಪಡೆಯಬೇಕೆಂಬುದು ಅವರ ಹೆಬ್ಬಯಕೆ. ಆದರೆ ಈಗ ಅನಿವಾರ್ಯ ಪರಿಸ್ಥಿತಿ ಸೃಷ್ಟಿಯಾಗಿತ್ತು. ಪ್ರೊಫೆಸರರು ಅಲ್ಲಿ ಉಳಿಯುವುದು ಕಾಲೇಜಿನ ಪ್ರಿನ್ಸಿಪಾಲರಿಗೇ ಬೇಕಿರಲಿಲ್ಲ. ಅವರೇನಿದ್ದರೂ ತಮ್ಮ ಪಕ್ಷ ಗಟ್ಟಿ ಬೀಳುವುದಷ್ಟನ್ನೇ ಕಾಯುತ್ತಿದ್ದರು.

ಪ್ರೊಫೆಸರರಿಗೆ ತಮಗೆ ಸನ್ಮಾನ ಮಾಡುವರೆಂಬ ಸುದ್ದಿ ಹಿತಕರವೆನಿಸಿರಲಿಲ್ಲ. ಒರಟಾಗಿ ಅವು ಯಾವುದೂ ಬೇಡವೆಂದು ಹೇಳಿಬಿಡೋಣವೆನಿಸಿತ್ತು. ಆದರೆ ಉಳಿದವರೊಂದಿಗೆ ಅವರಿಗಿದ್ದ ಆತ್ಮೀಯತೆ ಕಟ್ಟಿಹಾಕಿತ್ತು. ಪ್ರಿನ್ಸಿಪಾಲರ ನೆರಳೂ ಅಸಹ್ಯವೆನಿಸುತ್ತಿದ್ದಾಗಲೂ ವಿವಶರಾಗಿ ಒಪ್ಪಿಕೊಳ್ಳಲೇಬೇಕಾದ ಸಂದರ್ಭವೊದಗಿತು. ಮನಸ್ಸಿಲ್ಲದ ಮನಸ್ಸಿನಿಂದ ಹುಂ ಅಂದಿದ್ದರು.

ಕಾಲೇಜಿನಲ್ಲಿ ಹಬ್ಬದ ವಾತಾವರಣ ಹರಡಿದೆ. ವಿದ್ಯಾರ್ಥಿಗಳೆಲ್ಲ ಪ್ರೊಫೆಸರರ ಬಗೆಗೆನ ಅಭಿಮಾನವನ್ನು ಒಂದಲ್ಲ ಒಂದು ಕೆಲಸ ಮಾಡಿ ವ್ಯಕ್ತಪಡಿಸುತ್ತಿದ್ದಾರೆ. ಕಾಲೇಜಿನ ದೊಡ್ಡ ಗೇಟನ್ನು ತಳಿರು ತೋರಣಗಳಿಂದ ಅಲಂಕರಿಸಿದ್ದರು. 40ನೇ ನಂಬರಿನ ಕೊಠಡಿಯನ್ನಂತೂ ಅದ್ಭುತವಾಗಿ ಅಲಂಕರಿಸಿದ್ದರು. ಪರಮಶಿವನ್ ಬ್ಲಾಕ್ ಬೋರ್ಡ್ ತುಂಬಾ ಬಣ್ಣ ಬಣ್ಣದ ಚಾಕ್ ಪೀಸ್‌ಗಳಿಂದ ತನ್ನ ಅದ್ಭುತ ಕಲೆಗೆ ಫ್ರೀಡಮ್ ಕೊಟ್ಟಿರುವ ಹಾಗೆ ಅನಿಸುತ್ತಿತ್ತು. "ಆರಾಧ್ಯ ಅಭಿಮಾನಿ ಎನ್. ರಾಯರಿಗೆ ವಿದ್ಯಾರ್ಥಿಗಳ ಭಕ್ತಿಯ ಬೀಳ್ಕೊಡುಗೆ" ಎಂದು ಹೂಬಳ್ಳಿಗಳಿಂದಲೇ ಬಿಡಿಸಲಾಗಿತ್ತು. ಒಂದೊಂದು ತರಗತಿಯವರೂ ತಾವು ಅರ್ಪಿಸಲೆಂದು ತಂದಿದ್ದ ಭವ್ಯ ಪುಷ್ಪಮಾಲೆಗಳು ವೇದಿಕೆಯ ಒಲ ಮೂಲೆಯಲ್ಲಿ ಒಂದು ಸಣ್ಣ ಹೂಗುಡ್ಡದಂತೆ ಕಾಣಿಸುತ್ತಿತ್ತು.

ವೇದಿಕೆಯ ಮೇಲೆ ದೊಡ್ಡದಾದ ಟೇಬಲೊಂದನ್ನು ಅಳವಡಿಸಿ, ಹೂ ಚಿಟ್ಟಿಗಳ ಟೇಬಲ್ ಕ್ಲಾತನ್ನು ಹಾಸಲಾಗಿತ್ತು. ಅದರ ಮೇಲೆ ಮೈಕ್‌ಗಳು, ಕಾರ್ಯಕ್ರಮದ ಹಾಳೆಗಳು, ಅವುಗಳ ಮೇಲೊಂದು ಭಾರಕಲ್ಲು. ಹಿಂಬದಿಯಲ್ಲಿ ಎರಡು ಕುರ್ಚಿಗಳು ಒಂದು ಪ್ರೊಫೆಸರಿಗೆ ಮತ್ತೊಂದು ಪ್ರಿನ್ಸಿಪಾಲರಿಗೆ.

ಪ್ರಿನ್ಸಿಪಾಲರು ಪ್ರೊಫೆಸರನ್ನು ಹಸನ್ಮುಖದಿಂದಲೇ ವೇದಿಕೆಯ ಮೇಲೆ ಕರೆದುಕೊಂಡು ಹೋಗಿ ಅವರಿಗಾಗಿ ಮೀಸಲಾಗಿದ್ದ ಕುರ್ಚಿಯನ್ನು ತೋರಿಸುತ್ತಿದ್ದರು. ಆದರೆ ಪ್ರೊಫೆಸರರು ಅನ್ಯ ಮನಸ್ಕರಾಗಿರುವುದು ಎಲ್ಲರಿಗೂ ಸ್ಪಷ್ಟವಾಗಿ ಗೋಚರಿಸುತ್ತಿತ್ತು. ಈ ಕಾಲೇಜಿನಲ್ಲಿ ಕಳೆದ ದಿನಗಳ ನೆನಪುಗಳು ಒಂದೊಂದಾಗಿ ಅವರ ಕಣ್ಮುಂದೆ ಸುಳಿಯತೊಡಗಿದವು. ವಿದ್ಯಾರ್ಥಿಗಳಿಗೆ ತಾವು ಕೊಡುತ್ತಿದ್ದ ಸಲುಗೆ ಇದರಿಂದಾಗಿ ತಮ್ಮ ಮೇಲೆ ಅವರು ಬೆಳೆಸಿಕೊಂಡ ವಿಶ್ವಾಸ, ಸ್ನೇಹ, ವಯಸ್ಸಿನಲ್ಲಿ ಹಿರಿಯರಾದರೂ ಕಿರಿಯ ಸಹೋದ್ಯೋಗಿಗಳೊಂದಿಗೆ ಸರಸವಾಗಿಯೇ ಇರುತ್ತ, ವಯಸ್ಸಿನ ಅಂತರವೇನೆಂಬುದನ್ನು ಮರೆಯುತ್ತಿದ್ದ ಮಧುರ ಕ್ಷಣಗಳು, staff ರೂಂ ನಲ್ಲಿ ಅವರು ಮಾತನಾಡುತ್ತಿದ್ದ ವಿಷಯಗಳು ಒಂದೇ ಎರಡೇ ! ! ರಾಜಕೀಯ, ಅರ್ಥಶಾಸ್ತ್ರ, ಇತಿಹಾಸ, ಧರ್ಮ, ಸಂಸ್ಕೃತಿ ಇತ್ಯಾದಿ.

ಕೊನೆಗೆ ತಮ್ಮ ಸ್ವಂತ ಕುಟುಂಬದ ವಿಷಯಗಳನ್ನೂ ಸಹ ಮುಚ್ಚು ಮರೆಯಿಲ್ಲದೆ ಹೇಳಿಬಿಡುತ್ತಿದ್ದರು. ಕಿರಿಯ ಸಹೋದ್ಯೋಗಿಗಳಂತೂ ಅವರ ಉಪಸ್ಥಿತಿಯಲ್ಲಿ ಇರುವುದೆಂದರೆ ಹಾಲ್ಜೇನು ಕುಡಿದ ಹಾಗೆ, ಆದರೆ ಪ್ರಿನ್ಸಿಪಾಲರೊಬ್ಬರಿಗೆ ಇವರು ಮೆಚ್ಚಿಕೆಯಾಗದೆ ಹೋದರು. ಅದಕ್ಕೆ ಕಾರಣ, ರಾಯರ ವಿರೋಧ ಪ್ರವೃತ್ತಿ. ಎಂದಾದರೂ ಯಾರಿಗಾದರೂ ಅನ್ಯಾಯವಾಯಿತೆಂದು ತಿಳಿದ ಕೂಡಲೇ ಪ್ರೊಫೆಸರರು ಹಾಜರು. ಖಂಡ ತುಂಡಾಗಿ ಮಾತನಾಡಿ ಬಿಡುತ್ತಿದ್ದರು. ಪ್ರಿನ್ಸಿಪಾಲರ ನಿರಂಕುಶತೆಗೆ, ದಬ್ಬಾಳಿಕೆಗೆ ಇವರು ಅಡ್ಡವಾಗಿದ್ದರು. ಪ್ರೊಫೆಸರರು ಇಲ್ಲಿರುವಷ್ಟು ಕಾಲ ಪ್ರಿನ್ಸಿಪಾಲರು ಬಾಲ ಕತ್ತರಿಸಿದ ನರಿಯಾಂತಾಗಿ ಸಮಯಕ್ಕಾಗಿ ಹೊಂಚಿದ್ದು, ಪ್ರೊಫೆಸರರ ಪ್ರಭಾವ ವೈಸ್‌ಛಾನ್ಸಲರ್ ಮತ್ತು ಡೈರೆಕ್ಟರ್ ಆಫ್ ಕಾಲೇಜಿಯೇಟ್ ಎಡ್ಯುಕೇಷನ್‌ರವರಿಗೂ ಇದ್ದದ್ದರಿಂದ ಅವರನ್ನು ಟ್ರಾನ್ಸ್‌ಫರ್ ಮಾಡಿಸಿ ತಮಗೆ ಬೇಕಾದವರನ್ನು ತಮ್ಮಲ್ಲಿಗೆ ಕರೆಸಿಕೊಳ್ಳಲು ಆಗಿರಲಿಲ್ಲ. ಆದರೆ ಈಗ ಡೈರೆಕ್ಟರ್ ಬದಲಾದ್ದರಿಂದ ಪ್ರಿನ್ಸಿಪಾಲರು ಡೊಂಕು ಹಾದಿಗಳನ್ನು ಹಿಡಿದು ಪ್ರೊಫೆಸರರ ಟ್ರಾನ್ಸ್‌ಫರ್ ಆರ್ಡರನ್ನು ಗಿಟ್ಟಿಸಿಕೊಂಡಿದ್ದರು.

ಅಂಥಾದ್ದರಲ್ಲಿ ಈಗ ಪ್ರಿನ್ಸಿಪಾಲರು ತಮಗೆ ತೋರುತ್ತಿರುವ ಗೌರವ ಬೇರುಗಳಲ್ಲೇ ಕೊಳೆತಿರುವುದೆಂದು ತಿಳಿದಿದ್ದರು. ಪ್ರಾರ್ಥನೆಯಿಂದ ಪ್ರಾರಂಭವಾದ ಕಾರ್ಯಕ್ರಮ ವಿದ್ಯಾರ್ಥಿ ಪ್ರತಿನಿಧಿಗಳಿಂದ ಮುಂದುವರಿಯಿತು. ಕೊನೆಗೆ ಪ್ರಿನ್ಸಿಪಾಲರು ಎದ್ದುನಿಂತು ಒಂದು ಕ್ಷಣ ಗಂಭೀರವಾದ ಆಲೋಚನೆಯಲ್ಲಿ ಇರುವಂತೆ ಕಂಡರು. ಗಂಟಲು ಸಾವರಿಸಿಕೊಂಡು ಮಾತಿಗೆ ಮೊದಲಿಟ್ಟರು.

ಪ್ರೀತಿಯ ಪ್ರೊಫೆಸರರೇ, ನೆಚ್ಚಿನ ವಿದ್ಯಾರ್ಥಿಗಳೇ ಇಂದು ನಾವು ಇಲ್ಲಿ ಸಮಾವೇಶಗೊಂಡಿರುವುದರ ಕಾರಣ ತಮಗೆಲ್ಲರಿಗೂ ವೇದ್ಯವೆಂದೇ ನನ್ನ ಭಾವನೆ. ಈ ಸಂದರ್ಭವನ್ನು ಸಂಭ್ರಮದಿಂದ ಆಚರಿಸಬೇಕಾದ್ದಲ್ಲ. ನಿಜವಾಗಿಯೂ ನಮಗೆಲ್ಲ ಪ್ರೊಫೆಸರನ್ನು ಬೀಳ್ಕೊಡಬೇಕೆಂದರೆ, ತುಂಬಾ ವಿಷಾದವೆನಿಸುತ್ತದೆ. ಅವರ ಸಹವಾಸ, ಸ್ನೇಹ, ಸೌಜನ್ಯ, ಪ್ರತಿಭೆಗಳ

ವಿಷಯವಾಗಿ ಮಾತನಾಡಿದರೆ ನಿಮಗೆ ಅತಿಶಯೋಕ್ತಿ ಎನಿಸಬಹುದು. ಅವರ ಬಗ್ಗೆ ನನಗಿರುವ ಪ್ರೇಮ, ಆದರ, ಸ್ನೇಹಗಳು ಎಷ್ಟಿವೆಯೆಂದು ಶಬ್ದಗಳಲ್ಲಿ ಹೇಳಲು ಸಾಧ್ಯವಿಲ್ಲ. ಒಂದು ಮಾತಿನಲ್ಲಿ ಸಂಕ್ಷಿಪ್ತವಾಗಿ ಹೇಳಬೇಕೆಂದರೆ ನನ್ನ ಪ್ರಾಣವೇ ಅವರಾಗಿದ್ದರು. ಪ್ರೊಫೆಸರರ ಆದರ್ಶ ಗಳು ಅವರ ಸಂಯಮ ಬದುಕು ಪ್ರತಿಯೊಬ್ಬರಿಗೂ ಮಾದರಿಯಾಗಿದೆ ಯೆಂದೇ ಹೇಳಬಹುದು. ವಯಸ್ಸು ಅವರಿಗೆ ಹೊರೆಯಲ್ಲ. ಕ್ರಿಯಾ ಶೀಲತೆಯೇ ಅವರ ಬದುಕಿನ ಗುರಿ. ಅವರ ಲವಲವಿಕೆಯ ಬದುಕು ಯುವ ಜನಾಂಗವನ್ನೇ ನಾಚಿಸುವಂಥಾದ್ದು. ಇಂತಹ ವ್ಯಕ್ತಿ ನಮ್ಮ ನಡುವೆ ಇದ್ದದ್ದು ನಮ್ಮ ಸೌಭಾಗ್ಯ. ಇವರು ವ್ಯಕ್ತಿಯಲ್ಲ. ಒಂದು ಪರಂಪರೆ ಹೀಗಿರುವಲ್ಲಿ ಇವರನ್ನು ಬೀಳ್ಕೊಡುವುದೆಂದರೆ ನಮ್ಮಿಂದ ನಮ್ಮ ಪ್ರಾಣ ಅಗಲಿದಂತೆಯೇ. ಇವರ ವಿಷಯವಾಗಿ ಹೇಳುತ್ತಾ ಹೋದರೆ ಕೊನೆಯಿಲ್ಲವೆಂದೇ ಅನ್ನಿಸುತ್ತದೆ. ನಾವೇನಿದ್ದರೂ ಅವರಲ್ಲಿ ಬೇಡಿ ಕೊಳ್ಳಬೇಕಾಗಿರುವುದು, "ನಮ್ಮಿಂದ ನಮ್ಮರಿವಿಲ್ಲದೆ ಅವರ ಮನಸ್ಸಿಗೆ ನೋವಾಗುವಂತಹ ರೀತಿಯಲ್ಲಿ ವರ್ತಿಸಿದ್ದರೆ ಅದನ್ನು ಮುಕ್ತ ಮನಸ್ಸಿ ನಿಂದ ಮನ್ನಿಸುವುದು, ಮತ್ತು ಅವರೆಲ್ಲಿದ್ದರೂ ನಮ್ಮನ್ನು ಅಂದರೆ ನಮ್ಮ ನೆನಪುಗಳನ್ನು ಅವರ ಹೃದಯದ ತಿಜೋರಿಯಲ್ಲಿ ಭದ್ರಪಡಿಸುವುದು– ಎಂದು ವಿನಯವೇ ಸಾಕಾರಗೊಂಡಂತೆ ಅಭಿನಯಿಸಿದರು.

ವಿದ್ಯಾರ್ಥಿಗಳು ಬಯಸುವುದಾದರೆ ಬಂದು ಪ್ರೊಫೆಸರರಿಗೆ ತಮ್ಮ ಭಕ್ತಿ ಗೌರವಗಳನ್ನು ಸಮರ್ಪಿಸಬಹುದೆಂದ ಕೂಡಲೇ ಒಬ್ಬೊಬ್ಬರಾಗಿ ವಿದ್ಯಾರ್ಥಿ ಪ್ರತಿನಿಧಿಗಳು ಬಣ್ಣ ಬಣ್ಣದ ಹೂಮಾಲೆಗಳನ್ನು ಪ್ರೊಫೆಸರರ ಕೊರಳಿಗೆ ಹಾಕುತ್ತಿದ್ದಂತೆ ಕಿವಿಗಡಚಿಕ್ಕುವಂತೆ ಚಪ್ಪಾಳೆ ತಟ್ಟಿದರು. ಪ್ರೊಫೆಸರರು ಪ್ರತಿಸಲವೂ ಎದ್ದು ನಿಂತು ಕೈ ಮುಗಿದು ಮುಗುಳ್ ನಗೆಯನ್ನು ಸೂಚಿಸಿದರು.

ಪ್ರೊಫೆಸರರು ಒಂದೆರಡು ಮಾತುಗಳನ್ನು ಹೇಳಬೇಕೆಂದು ಪ್ರಿನ್ಸಿ ಪಾಲರು ವಿದ್ಯಾರ್ಥಿಗಳ ಪರವಾಗಿ ಪ್ರಾರ್ಥಿಸಿದರು. ಆದರೆ ಪ್ರೊಫೆಸರರು ಏನು ತಾನೇ ಮಾತಾಡಿಯಾರು ? ಅಂತರಂಗದ ಆತ್ಮೀಯತೆಯನ್ನು ಬಹಿರಂಗಪಡಿಸಿ ಚಪ್ಪಾಳೆ ತಟ್ಟಿಸಿಕೊಳ್ಳುವ ಸ್ವಭಾವವಲ್ಲ ಅವರದು.

ನಡೆಯುಲ್ಲೊಂದು ಮಾತಿನಲ್ಲೊಂದು ನೀತಿಯಲ್ಲ. ಪ್ರಿನ್ಸಿಪಾಲರು ತಮಗೆ ಕೊಟ್ಟ ಕಿರುಕುಳದ ಪ್ರಜ್ಞೆ ಅವರಿಂದ ದೂರವಾಗಿಲ್ಲ. ತನ್ನ ಕೆಡುಕನ್ನು ಬಯಸಿ ಈಗ ಮುಂದೆ ಮುಖಸ್ತುತಿ ಮಾಡುತ್ತಿರುವ ಪ್ರಿನ್ಸಿಪಾಲರಂತಾಗಲು ಅವರಿಂದ ಸಾಧ್ಯವಿಲ್ಲ. ನಿಷ್ಠುರವಾದರೂ ಸ್ಪಷ್ಟವಾಗಿ ಮಾತನಾಡುವುದಷ್ಟೇ ಅವರಿಗೆ ಪರಿಚಯ, ಒಂದೆರಡು ನಿಮಿಷ ಮಾತಾಡಬೇಕೆಂದು ಬಹಿರಂಗವಾಗಿ ತಮ್ಮನ್ನು ಕೇಳಿಕೊಂಡಾಗ ಪ್ರೊಫೆಸರರಿಗೆ ಕಸಿವಿಸಿಯಾಯಿತು ಹೇಗೆ ಪಾರಾಗಬೇಕೆಂಬುದೇ ತಿಳಿಯು ಲಿಲ್ಲ. ಪ್ರಿನ್ಸಿಪಾಲರಾದರೋ ಜೇನಿನಲ್ಲಿ ಅದ್ದಿ ತೆಗೆದ ನಾಲಿಗೆಯಿಂದ ಮಾತನಾಡಿದರು ಅವರ ಆಷಾಡಭೂತಿತನ ತಮಗೆ ಬಾರದೆಂಬ ಚಿಂತೆ ಜೂಲಿಯಸ್ ಸೀಸರ್ ನಾಟಕದ ನೆನಪಾಯಿತು ! ಪ್ರೇಕ್ಷಕ ವಿದ್ಯಾರ್ಥಿ ಗಳಂತೂ ಪ್ರಿನ್ಸಿಪಾಲರ ಮಾತನ್ನು ಚಪ್ಪರಿಸಿದ್ದಾರೆ ಅವರ ಮಾತುಗಳೆಲ್ಲ ಅಕ್ಷರಶಃ ನಿಜವೆಂದೇ ನಂಬುತ್ತಾರೆ. ಇದು ನಿಜವಾಗಿಯೂ ಚಾಣಕ್ಯ ನೀತಿ ! !

"ದೇವರೇ ಈ ಸಂಕಟದಿಂದ ಪಾರಾಗಲು ಸಾಧ್ಯವೇ ಇಲ್ಲವೇ—ಎಂದು ಮನಸ್ಸಿನಲ್ಲಿಯೇ ಪ್ರಾರ್ಥಿಸಿದರು. ಒಂದು ವೇಳೆ ಮಾತನಾಡ ದಿದ್ದರೂ ಎಲ್ಲರೂ ತಮ್ಮ ಬಗ್ಗೆ ಅನ್ಯಥಾ ಭಾವಿಸುವಂತಾಗುತ್ತೆ. ಆದ್ದರಿಂದ ಯೋಚಿಸಿದಷ್ಟೂ ಮಾತನಾಡಲೇಬೇಕಾದ್ದು ಅನಿವಾರ್ಯ ವೆನಿಸಲು ತೊಡಗಿತು.

ಮನಸ್ಸಿಲ್ಲದ ಮನಸ್ಸಿನಿಂದ ಎದ್ದರು. ಮೊದಲಿಗೆ ವಿದ್ಯಾರ್ಥಿಗಳನ್ನು ಮನಃಪೂರ್ವಕವಾಗಿ ಶ್ಲಾಘಿಸಿದರು. ನಂತರ ಉಳಿದವರು ಎಂದರೆ ಪ್ರಿನ್ಸಿ ಪಾಲರ ವಿಷಯವಾಗಿ ಮೌನವನ್ನೇ ತಳೆಯಬೇಕೆಂದುಕೊಂಡರು. ಆದರೆ ಮಾತು ಅನಾಯಾಸವಾಗಿ ಹೊರಬಿತ್ತು. "ಪ್ರಿನ್ಸಿಪಾಲರು ನನ್ನ ಬಗ್ಗೆ ತೋರುತ್ತಿರುವ ಅಭಿಮಾನ, ಆದರಗಳಿಗೆ ನಾನು ಕೃತಜ್ಞ. (ಅವರ ಮಾತಿನಲ್ಲಿ ಒಂದಕ್ಷರವಾದರೂ ನಿಜವಾದುದಾದರೆ !) ಅವರ ವಿಚಾರವಾಗಿ ನಾನು ಏನಾದರೂ ಹೇಳಿದರೆ ಆಷಾಢ ಭೂತಿತನವಾಗುತ್ತದೆ. ಆದ್ದ ರಿಂದಲೇ ಹೇಳುವುದಕ್ಕಿಂತ ಹೇಳದೇ ಇರುವುದೇ ಅರ್ಥಪೂರ್ಣವಾಗಿರುವು ದೆಂದು ಭಾವಿಸುತ್ತೇನೆ'—ಎಂದು ಹೇಳುತ್ತಾ ಕುಳಿತರು. ಪ್ರಿನ್ಸಿಪಾಲರಿಗೆ

ತಿವಿದ ಹಾಗಾಯಿತು. ಮುಖ ಹುಳಿಯಾದರೂ ಸಾವರಿಸಿಕೊಂಡರು. ಕಾರ್ಯಕ್ರಮ ಮುಗಿದ ಕೂಡಲೇ ಬೇಗ ಬೇಗನೆ ಮನೆ ಕಡೆ ಹೆಜ್ಜೆ ಹಾಕಿದರು. ಮನಸ್ಸಿಗೆ ಏನೋ ಅಸಮಾಧಾನ, ಯಾರ ಮೇಲೋ ಸಿಟ್ಟು. ಮನುಷ್ಯನ ಛಿದ್ರ ವ್ಯಕ್ತಿತ್ವಕ್ಕೆ ಬಹುಮುಖ ಪಾತ್ರಕ್ಕೆ ಅಚ್ಚರಿಯೆನಿಸುತ್ತಿತ್ತು. ಪ್ರಪಂಚದಲ್ಲಿ ಯಾವುದಾದರೂ ರಹಸ್ಯವನ್ನಾದರೂ ತಿಳಿಯಬಹುದು. ಆದರೆ ಮನುಷ್ಯನ ಮನಸ್ಸಿನ ಮೂಲ ಮಾತ್ರ ಶೋಧಿಸಲು ಸಾಧ್ಯವೇ ಇಲ್ಲ ಎಂದೆನಿಸುತ್ತಿತ್ತು. ಪ್ರೊಫೆಸರರಿಗೆ, ಮನುಷ್ಯ ಮೇಲೆ ಕಾಣುವು ದಷ್ಟು ಸುಳ್ಳು. ಅರ್ಥವಾಗದೆ ಅಡಗಿ ಕುಳಿತಿರುವ ಸ್ವಭಾವವಷ್ಟೇ ನಿಜ ಯಾವ ಪೂರ್ವಗ್ರಹಪೀಡನೆಯಿಂದ ತಮ್ಮಿಬ್ಬರ ಸಂಬಂಧದಲ್ಲಿ ಈ ಒಂದು ಬಿರುಕು ?—ಎಂದು ಯೋಚಿಸುವುದು ಮನಸ್ಸು. ಹೌದು ಯಾವ ವಾತಾ ವರಣವೂ ಪರಿಶುದ್ಧವಾಗಿರಲು ಸಾಧ್ಯವಿಲ್ಲ. ವಿದ್ಯೆ, ವಿದ್ಯಾಕೇಂದ್ರಗಳ ಪಾವಿತ್ರ್ಯತೆ, ಎಂದೋ ಕಾಣದಾಗಿರುವಾಗ ತಮ್ಮ ಆಲೋಚನೆಗಳು ಅನವಶ್ಯಕ ಯಾವ ಕಾಲೇಜಾಗಲೀ, ಆಫೀಸಾಗಲೀ, ಪ್ರಿನ್ಸಿಪಾಲರಾಗಲಿ, ಅಧಿಕಾರಿಯಾಗಲಿ, ನಿಷ್ಪಕ್ಷಪಾತವಾಗಿ, ರಾಜಕೀಯದಿಂದ ಮುಕ್ತವಾಗಿ ಇರಲು ಸಾಧ್ಯವೇ ಇಲ್ಲವೆಂದು ದೃಢವಾಗಿ ನಂಬುವುದಕ್ಕೆ ಪ್ರಯತ್ನ ಪಟ್ಟರು. ಅತ್ಯಲ್ಪ ಕಾಲದ ಮಟ್ಟಿಗೆ ಮಾತ್ರ ಉಳಿದಿರುವ ತಮ್ಮ ಸೇವೆಯನ್ನು ನಿಸ್ವಾರ್ಥವಾಗಿ ಮುಗಿಸಿ ತಮ್ಮ ಉದ್ಧಾರವನ್ನು ತಾವು ಮಾಡಿಕೊಂಡರೆ ಸಾಕು—ಎಂದು ಯೋಚಿಸಿದರು ಯಾರೊಬ್ಬರನ್ನೋತಿ ದಿದ್ದರೆ ಸಾಧ್ಯವಾಗದು—ಎಲ್ಲೆಲ್ಲೂ ಕುಲುಷಿತ ವಾತಾವರಣವೇ ಇರು ವಾಗ, ವ್ಯಕ್ತಿ ಸ್ವಚ್ಛವಾಗಿರಲು ಸಾಧ್ಯವಿಲ್ಲ—ಎಂದು ತಮ್ಮನ್ನು ತಾವೇ ಸಮಾಧಾನಪಡಿಸಿಕೊಳ್ಳಲು ಪ್ರಯತ್ನಿಸಿದರು. ದೂರದಲ್ಲಿ ಇಂಜಿನ್ನಿನ ಸದ್ದಾಗಲು, ಆಲೋಚನೆಗಳ ಸುಳಿಯಿಂದ ಎದ್ದು ಬಂದರು ಗೇಟ್ ಹಾಕಿದ್ದುದರಿಂದ ಟ್ರೈನ್ ಹಾದು ಹೋಗುವವರೆಗೂ ಅಲ್ಲೇನಿಂತರು.

# ಗಂಟುಗಳು

ಗೋಡೆ ಮೇಲಿನ ಗಡಿಯಾರ ತನ್ನ ಪಾಡಿಗೆ ತಾನು ಯಾವುದರ ಕಡೆಯೂ ಲಕ್ಷ್ಯವಿಲ್ಲದೆ 'ಟಿಕ್ ಟಿಕ್' ಎಂದು ಚಕ್ರಗತಿಯ ಮಿತಿಗೆ ತಲೆ ಬಾಗಿದೆ. ಆಗಲೇ ಸಂಜೆ 6 ಗಂಟೆಗೂ ಹೆಚ್ಚು ಹೊತ್ತು ಮೀರಿದೆ. ವಸ್ತುಗಳು ಹೆಚ್ಚಾಗಿ ಇಲ್ಲದೆ ಮನೆ ಓರಣವಾಗಿದ್ದರೂ, ಬದುಕಿನ ಕುರುಹೂ ಇಲ್ಲದಂತೆ ಉರಿಬಿಸಿಲ ಬೇಸಿಗೆಯ ರೌದ್ರ ಮೌನ ಮನೆಯ ಮೂಲೆ ಮೂಲೆಯನ್ನೂ ಬಾಚಿ ತಬ್ಬಿಕೊಂಡಿದೆ.

ಪದ್ಮ ಹಾಲಿಗೂ ಹೊರ ಅಂಗಳಕ್ಕೂ ನಡುವಿನ ವರಾಂಡದೊಳಗೆ ಕೈಗೂಸಿಗೆ ಮೊಲೆ ಕೊಡುತ್ತಿದ್ದಳಾದರೂ ಅವಳ ದೃಷ್ಟಿ ಮತ್ತೆಲ್ಲೋ ಏನನ್ನೋ ಅರಸುತ್ತಿರುವಂತೆ ತೋರುತ್ತಿದೆ. ಒಂದೊಂದಾಗಿ ಅವಳ ಬದುಕಿನ ಅಧ್ಯಾಯಗಳನ್ನು ತಿರುವಿ ಓದುತ್ತಿರುವಂತೆ ಅನಿಸುತ್ತಿದೆ. ಬತ್ತಿದ ಮೊಲೆಗಳನ್ನು ಜಗ್ಗಿ ಎಳೆದರೂ ಬಾಯಿ ಒದ್ದೆಯಾಗದೆ ಮಗು ಮುನಿದು ಕಿರುಚುತ್ತಿದ್ದರೂ ಅವಳ ಪ್ರಜ್ಞೆ ವಾಸ್ತವ ಲೋಕದ ಕಡೆ ಇರುವಂತಿಲ್ಲ.

ಚಲನೆಯಿಲ್ಲದ ಅವಳ ಕಣ್ಣೆದುರು ಹಿಂದಿನ ಅನುಭಗಳ ಮೂಟೆ ಬಿಚ್ಚಿಕೊಳ್ಳುತ್ತಿದೆ. ಒಂದೊಂದೇ ಅನುಭವ. ಕೆಲಸ ಮುಗಿಸಿ ಮನೆಗೆ ಬಂದ ಒಂದುದಿನ ತಂದೆ, ಒರಟಾಗಿ ನನ್ನನ್ನು ಕೂಗಿದರು. ತಂದೆಯ ಧ್ವನಿಗೆ ಬೆದರಿದ ಮನಸ್ಸು, ತನ್ನನ್ನು ಕರೆಯಲು ಕಾರಣವೇನಿರಬಹುದು—ಎಂದು ಕಾರಣ ಹುಡುಕಲು ಪ್ರಯತ್ನಿಸಿತು. ತಂದೆಯಾದರೂ ಎಂದು ಸಲಿಗೆಯಿಂದ ಯಾರನ್ನೂ ಮಾತಾಡಿಸಿದ್ದಿಲ್ಲ. ತಮ್ಮ ತಂಗಿಯಂತೂ ತಂದೆಯಿಂದ ತಪ್ಪಿಸಿಕೊಂಡೇ ಓಡಾಡುತ್ತಿದ್ದರು. ಅಮ್ಮನಿಗಂತೂ ತಂದೆಯ ಜೊತೆ ಬದುಕು ಅಸಹ್ಯವೆನಿಸಿತ್ತು. ದುಡಿದು ದುಡಿದು ಜೀವ ಜೀರ್ಣವಾಗಿತ್ತು.

ಅಮ್ಮ ಯೇನಾದರೂ ಇನ್ನೂ ಬದುಕಿದ್ದುದು ಎಂದರೆ ನಮಗೋಸ್ಕರ. ಈ ವ್ಯಾಘ್ರ ಮನೋವೃತ್ತಿಯ ತಂದೆಯ ಕೈಯಲ್ಲಿ ಮಕ್ಕಳು ಸುರಕ್ಷಿತವಾಗಿರಲಾರದುಯೆನ್ನುವುದೇ ಅವಳ ಬಲವಾದ ಭಾವನೆ. ತನ್ನ

ಕಣ್ಣೆದುರಿಗೇ ಮಕ್ಕಳಿಗೊಂದೊಂದು ದಾರಿಯಾದರೆ ಸಾಕೆಂದು ದೇವರಿಗೆ ಮೂಕ ಪ್ರಾರ್ಥನೆಯನ್ನು ಸಲ್ಲಿಸುತ್ತಿದ್ದಳು. ಸ್ವಲ್ಪ ಬುದ್ಧಿ ತಿಳಿದ ನನಗೆ, ಯಾಕೋ ಅಮ್ಮ ದೇವರಿಗೆ ಕೈ ಮುಗಿದರೆ ಸಿಟ್ಟು ಬರುತ್ತಿತ್ತು. ದೇವರ ಮೇಲೆ ನನಗೆ ಆಕ್ರೋಶ. ನಮ್ಮ ಪ್ರಾರ್ಥನೆಯನ್ನು ಕೇಳೋ ಹಾಗಿದ್ದಿದ್ದರೆ ನಮಗೆ ಯಾವ ಕಷ್ಟವೂ ಇರುತ್ತಿರಲಿಲ್ಲ. ಸೆನ್ಸಿಟಿವ್‌ನೆಸ್ ಇಲ್ಲದೆ ಕಲ್ಲಾಗಿ ಕುಳಿತಿರುವ ದೇವರಿಂದ ಏನಾದರೂ ಆಗುತ್ತೆ ಅನ್ನೋದನ್ನ ಊಹಿಸಿಕೊಂಡರೇನೇ ನಗು ಬರುತ್ತಿತ್ತು. ಇದನ್ನೇ ಅಮ್ಮನಿಗೂ ಹೇಳು ತಿದ್ದೆ. ಆದರೆ ಅಮ್ಮನಿಗೆ ಹೆಚ್ಚು ನೋವಾಗುತ್ತಿತ್ತೇ ಹೊರತಾಗಿ ಇನ್ನೇನೂ ಆಗುತ್ತಿರಲಿಲ್ಲ.

ತಂದೆಯ ದೌರ್ಜನ್ಯವನ್ನು ಅಮ್ಮ ಬಹಳ ವರ್ಷ ಅನುಭವಿಸಿದಳು. ನಮ್ಮೆಲ್ಲರ ಮನಸ್ಸಿನಲ್ಲೂ ತಂದೆ ಎಂದರೆ ಮನುಷ್ಯ ರೂಪದಲ್ಲಿ ಇರೋ ರಾಕ್ಷಸ ಅನ್ನುವ ಭಾವನೇನೆ ಬಲವಾಗಿ ಉಳಿದುಬಿಡ್ತು. ಒಂದು ದಿನ... ಓಹ್....ಊಹಿಸಿಕೊಂಡರೇನೇ ಮೈ ನಡುಗುತ್ತೆ....ನಾನು, ತಂಗಿ, ತಮ್ಮ ಎಲ್ಲಾ ಊಟ ಮಾಡಿ ತಂದೆಯಿಲ್ಲದೆ ಇರೋ ಕಾರಣ ಧೈರ್ಯದಿಂದ ಗಟ್ಟಿ ಯಾಗಿ ಮಾತಾಡಿಕೊಳ್ಳುತ್ತಾ ಜೋರಾಗಿ ನಗುತ್ತ ಅಲ್ಲಿಯವರೆಗೂ ಒಳಗೇ ಅದುಮಿಟ್ಟುಕೊಂಡಿದ್ದ ಸಂತೋಷವನ್ನು ಹಿಡಿಯುವ ಹಾಗೆ ಮಾಡಿದ್ದೆವು. 'ಅಪ್ಪ' ಬಂದಿರಲಿಲ್ಲವಾಗಿ 'ಅಮ್ಮ' ಊಟ ಮಾಡದೆ ಎದುರು ಕಾಯು ತ್ತಿದ್ದರು. ಕಾದು ಕಾದು ಸಾಕಾಗಿದ್ದ ಅಮ್ಮನಿಗೆ ಕಣ್ಣು ಹತ್ತಿತ್ತು. ದಿಢೀರೆಂದು ಬಾಗಿಲು ತೆಗೆದುಕೊಂಡಿತು. ರೌದ್ರಾವತಾರ ತಾಳಿ ಒಳಗೆ ಹೆಜ್ಜೆಯಿಟ್ಟ ಅಪ್ಪನನ್ನು ನೋಡಿ ನನಗೆ ಸಿಟ್ಟು ಬಂತಾದರೂ ಭೀತಿ ಯಿಂದ ಅದನ್ನು ಹಾಗೇ ಅದುಮಿಟ್ಟುಕೊಂಡೆ. ಬಂದವನೇ ಅಮ್ಮನನ್ನು 'ದಬ ದಬ' ಬಾರಿಸಿ ಬಿರುಸಾಗಿ ಒಂದುಸಲ ಕಾಲಿನಿಂದ ಒದ್ದದ್ದೆ ಅಮ್ಮ ಒಂದು ಸಲ ಕಣ್ತೆರೆದು ನನ್ನತ್ತ ಸನ್ನೆ ಮಾಡಿ ಕರೆದಳು ಯಾಂತ್ರಿಕ ವಾಗಿ ಒಳಗೆ ಹೋದೆ. ಅಮ್ಮನಿಗೆ ಬಹುಶಃ ಅನಿಸಿರಬೇಕು. ಇನ್ನು ತಾನಿಲ್ಲಿ ಇರುವುದಿಲ್ಲವೆಂದು : ಒದೆ ತಿಂದರೂ ಸಣ್ಣದಾಗಿ ಮುಲುಗಲಿಲ್ಲ. ತಂದೆಯ ಬಗ್ಗೆ ಪ್ರತಿಭಟನೆಯಿಲ್ಲ. ಮೆಲ್ಲನೆ ಹೇಳಿದಳು,—

ಪದ್ಮ, ನಿನ್ನ ತಂಗಿ, ತಮ್ಮ ನಿನ್ನ ಜವಾಬ್ದಾರಿ. ನನ್ನ ತುಂಬದ ಆಸೆಗಳು ನಿನ್ನಿಂದ ಪೂರ್ತಿಯಾಗಬೇಕು
ಮೂಕಳಾಗಿ ಕೇಳುತ್ತಿದ್ದೆ. ಪ್ರತಿಯಾಗಿ ಏನು ಹೇಳಬೇಕೆಂದರೂ ಆಗುತ್ತಿರಲಿಲ್ಲ. ಅಪ್ಪನಿಗೆ ಅರ್ಥವಾಯಿತೋ ಏನೋ.... ಅಮ್ಮನ ಕಣ್ಣಲ್ಲಿ ಬಗ್ಗಿ ನೋಡಿದ. ಅಷ್ಟರಿಂದಲೇ ಅಮ್ಮನಿಗೆ ಸಂತೋಷವಾಗಿರಬೇಕು. ಮೃದುವಾಗಿ ನಕ್ಕು "ಮಕ್ಕಳು" ಎಂದು ಹೇಳುತ್ತಲೇ ಕಣ್ಣು ಮುಚ್ಚಿದಳು.

ತಂದೆಯ ಕಣ್ಣಿಂದ ಹನಿ ಉದುರಿದ್ದನ್ನು ಕಂಡ ನನಗೆ ಚಂದ್ರ ಲೋಕಕ್ಕೆ ಹೋಗಿ ಬಂದಷ್ಟು ಹಿಗ್ಗೆನಿಸಿತು. ಇನ್ನು ಅಪ್ಪ ಬದಲಾಗುತ್ತಾನೆ ಎಂದು ಅರಸಿದ್ದೆ. ಆದರೆ ನನ್ನಾಸೆ ನನ್ನ ನಿರೀಕ್ಷೆಗೆ ವ್ಯತಿರೇಕವಾಗಿ ಅಪ್ಪ ಇನ್ನೂ ಕೆಳ ಜಾರಿದ.

ಮನೆಗೆ ಬರುವುದೇ ಅಪರೂಪವಾಗಿತ್ತು. ಈ ವರ್ಷ ನನ್ನ ಫೈನಲ್ ಹಾಗೂ ಹೀಗೂ ಕಷ್ಟಪಟ್ಟರೆ ಎಲ್ಲಾದರೂ ಒಂದು ಉದ್ಯೋಗ ಗಿಟ್ಟಿಸಿ ತಂಗಿ ತಮ್ಮನ ಪೋಷಣೆ ಮಾಡಬೇಕೆಂದುಕೊಂಡೆ. ಎದುರು ಮನೆ ವಾಸುಗೆ ನಮ್ಮ ವಿಷಯ ತಿಳಿದಿತ್ತು. ಅಪ್ಪ ಇಲ್ಲದ ವೇಳೆಯಲ್ಲಿ ಬಂದು ಏನಾದರೂ ಸಹಾಯ ಮಾಡಿ ಹೋಗುತ್ತಿದ್ದ.

ಬೆಳಿಗ್ಗೆ ಆದಷ್ಟು ಬೇಗ ಎದ್ದು ಅಡಿಗೆ ಮಾಡಿ ತಂಗಿ ತಮ್ಮನನ್ನು ಸ್ಕೂಲಿಗೆ ರೆಡಿಮಾಡಿ ಕ್ಯಾರಿಯರ್ ತೆಗೆದುಕೊಂಡು 9 ಗಂಟೆಗೆ ಕಾಲೇಜು ಹೊರಟರೆ ಬರುವಾಗ ಟ್ಯೂಷನ್ ಮುಗಿಸಿ ಮನೆ ಸೇರುವ ವೇಳೆಗೆ ರಾತ್ರಿ ಎಂಟು ಗಂಟೆಯಾಗಿರುತ್ತಿತ್ತು. ತುಂಬಾ tired ಆಗಿ ಇರುತ್ತಿದ್ದುದರಿಂದ ಆದಷ್ಟು ಬೇಗನೆ ಊಟಕ್ಕೂ ಆಸೆ ಪಡದೆ ಮಲಗಿ ಬಿಡುತ್ತಿದ್ದೆ. ಒಂದೊಂದು ದಿನ ನಾನು ಬರುವ ವೇಳೆಗೆ ಅಪ್ಪ ಇರುತ್ತಿದ್ದ. ಆದರೆ ನಮ್ಮಿಬ್ಬರ ನಡುವೆ ಮಾತುಕತೆಯೇ ಇರುತ್ತಿರಲಿಲ್ಲ. 'ಅಪ್ಪ'ನೆಂದು ಕರೆಸಿಕೊಳ್ಳುವವನು ಮಕ್ಕಳ ಚಿಂತೆಯೂ ಇಲ್ಲದೆ, ಹೇಗೆ ಜೀವನ ಮಾಡುತ್ತಿದ್ದಾರೆ ಅನ್ನುವುದನ್ನೂ ತಿಳಿದುಕೊಳ್ಳದ ಅಪ್ಪನ ಬಗ್ಗೆ ಗೌರವ, ಲಕ್ಷ್ಯ ಅನ್ನುವುದು ಅಶಕ್ಯವೆನಿಸಿತ್ತು. ಆದರೂ ತಟ್ಟೆ ಹಾಕಿ ಊಟ ಬಡಿಸಿದರೆ ಮಾತಿಲ್ಲದೆ ಬಂದು ಊಟ ಮಾಡಿ ಎದ್ದು ಹೋಗುತ್ತಿದ್ದ.

ಒಂದು ದಿನ ಇದ್ದಕ್ಕಿದ್ದಂತೆ ಅಪ್ಪ ನನಗೆ ಸೀರೆ, ಉಳಿದ ಆ ಇಬ್ಬರಿಗೆ ಬಟ್ಟೆ ತೆಗೆದುಕೊಂಡು ನನ್ನ ದಾರಿ ಕಾಯುತ್ತಿದ್ದುದನ್ನು ನೋಡಿ ನನಗೆ ಆಶ್ಚರ್ಯವಾಯಿತು. ಪ್ರಶ್ನಾರ್ಥಕವಾಗಿ ಅಪ್ಪನ ಕಡೆ ನೋಡಿದಾಗ ಸೌಮ್ಯವಾಗೇ ಉತ್ತರಿಸಿದ.

ನೋಡು ಪದ್ಮ, ಏನೋ ಇಲ್ಲೀವರೆಗೆ ನಾನು ನಿಮ್ಮನ್ನು ಶತ್ರುವಿನ ಮಕ್ಕಳಂತೆ ನೋಡಿಕೊಂಡೆ. ನಿಮ್ಮ ತಾಯಿಯನ್ನೂ ಕೊಂದ 'ವ್ಯಾಧ' ಅಂದರೂ ಸಲ್ಲುತ್ತೆ. ನನಗೇ ನನ್ನ ವಿಷಯವಾಗಿ ಬೇಜಾರಾಗಿದೆ. ಇನ್ನಾದರೂ ತಂದೆಯ ಕರ್ತವ್ಯದಿಂದ ತಪ್ಪಿಸಿಕೊಳ್ಳೋದು ಬೇಡಾಂತ ಅನ್ನಿಸುತ್ತಿದೆ. ನಿನಗೂ ಕೆಲಸ ಸಿಕ್ಕಿದೆಯಂತೆ ಪುಟ್ಟು ಹೇಳಿದ... ನೋಡು ನೀನು ನನಗೆ ಅವಕಾಶ ಕೊಟ್ಟರೆ ನಾನು ಇಲ್ಲಿ ಇರುತ್ತೇನೆ. ಇಲ್ಲ ಇಲ್ಲಿಂದ ದೂರದಲ್ಲಿಯಾವುದಾದರೂ ಊರಿಗೆ ಹೊರಟು ಹೋಗುತ್ತೇನೆ ದೈನ್ಯತೆ ಇರುವ ಹಾಗೆ ಅನಿಸಿತು.

ಅಪ್ಪನ ವಿಚಿತ್ರ ಪರಿವರ್ತನೆ ಪ್ರಶ್ನೆಯಾಗಿತ್ತು. ಅಪ್ಪನಿಗೆ ಮಕ್ಕಳನ್ನು ಬೇಡಿಕೊಳ್ಳುವ ಗ್ರಹಚಾರ ಬೇಡವೆಂದು ಹೇಳಿದೆ. ಅಪ್ಪ ಕೊಟ್ಟ ಬಟ್ಟೆಗಳನ್ನು ತೆಗೆದಿಟ್ಟೆ.

ಹಿಂದಿನ ರಸ್ತೆಯ ರಂಗಮ್ಮನ ಸ್ನೇಹವಿದೆಯೆಂದು ಜನ ಅಪ್ಪನ ಬಗ್ಗೆ ಆಡಿಕೊಳ್ಳುತ್ತಿದ್ದರು. ಆದರೆ ನನಗೆ ಆ ವಿಷಯಗಳೆಲ್ಲಾ ಬೇಕಾಗಿರಲಿಲ್ಲ. ಬೀದಿಯವರಿಗೆಲ್ಲಾ ನಾವೇನೋ ವಿಚಿತ್ರ ಮೃಗಗಳಂತೆ ಕಾಣುತ್ತಿದ್ದಿರಬೇಕು. ಪ್ರತಿಯೊಂದು ವಿಷಯದ ವಿವರಣೆಯೂ ಅವರಿಗೆ ಬೇಕಾಗಿತ್ತು. ಅದರಲ್ಲೂ ನನ್ನ ಪ್ರತಿಯೊಂದು ಚಲನೆಯಲ್ಲಿಯೂ ಅವರಿಗೆ ಭಾರಿ ಆಸಕ್ತಿ. ಕಾಲೇಜು ಓದುವುದು, ಕೆಲಸಕ್ಕೆ ಸೇರುವುದೂ.... ಎಲ್ಲವೂ ಅವರಿಗೆ ವಿಚಿತ್ರವಾಗಿ ಅನಿಸಿರಬೇಕು. ನನ್ನ ತಂಗಿ ತಮ್ಮನಿಂದ ನನ್ನ ವಿಷಯವಾಗಿ, ನಾನು ಕೆಲಸಕ್ಕೆ ಹೋಗುವ ಜಾಗ, ಬರುವ ಸಂಬಳ ನನ್ನೊಂದಿಗೆ ಕೆಲಸ ಮಾಡುವವರು ಗಂಡಸರೇ ಹೆಂಗಸರೇ ಅನ್ನುವ clarification....ಎಲ್ಲವನ್ನೂ ಕೇಳಿ ತಿಳಿದುಕೊಳ್ಳುತ್ತಿದ್ದರು. 'ತಥ್' ಈ ಜನಕ್ಕೆ ಮಾಡುವುದಕ್ಕೆ ಮತ್ತೇನೂ ಕೆಲಸವಿಲ್ಲವೇ ಎನಿಸುತ್ತಿತ್ತು.

ಬೇಕಾಗಿ ಅವರನ್ನು ಪ್ರಚೋದಿಸಲು ಅವರಿಂದ ಬರುವ ವಿಮರ್ಶೆಯನ್ನು ಶೇಖರಿಸಲು ನಾನು ಇತ್ತೀಚೆಗೆ ನನ್ನ ಬಾಯ್ ಫ್ರೆಂಡ್ಸನ್ನು ಕರೆದು ತರುತ್ತಿದ್ದೆ. ಎಲ್ಲವನ್ನೂ ಬಹಳ ಕಷ್ಟದಿಂದ ಸಹಿಸಿಕೊಂಡಿರುತ್ತಿದ್ದೆ. ಬೀದಿ ಮಂದಿಯೆಲ್ಲಾ ಏನೋ ಅನಾಹುತವಾದ ಹಾಗೆ ಸಾಮೂಹಿಕವಾಗಿ, ಒಂದು ದಿನ ಬಂದು ನಮ್ಮಪ್ಪನಿಗೆ ನನ್ನ ನಡತೆಯ ಬಗ್ಗೆ ದೂರು ಕೊಟ್ಟರು....ನನಗೆ ಬೀದಿಗಿಳಿಯುವುದೇ ಕಷ್ಟವಾಯಿತು. ಬೀದಿ ಪೋಲಿ ದನಗಳೆಲ್ಲಾ ನನ್ನ ಹೆಸರು ಹಿಡಿದು ಕೂಗುವುದು, ಚುಡಾಯಿಸುವುದು ಮೊದಲಾಯಿತು. ಅಪ್ಪನಿಗೆ ಇದು ನುಂಗಲಾರದ ತುತ್ತಾಗಿತ್ತು. ಅವರಿಗೂ ಒಳಗೊಳಗೆ ಇದು ಸರಿಯಲ್ಲವೆನಿಸಿರಬೇಕು. ಆದರೆ ಅಸಹಾಯಕತೆ ಅವರ ಬಾಯನ್ನು ಕಟ್ಟಿ ಹಾಕಿತ್ತು. ನಾನು ಸಂಪಾದನೆಗೆ ಮೊದಲಿಟ್ಟಾಗಿನಿಂದ ನನಗೆ ಯಾರ ಹಂಗೂ ಇಲ್ಲ ಅನ್ನೋ ಭಾವನೆ ಬರತೊಡಗಿತ್ತು. ಯಾರೂ ನನಗೆ ಲೆಕ್ಕಕ್ಕಿರಲಿಲ್ಲ. ನನ್ನ ಬದುಕಿಗೆ ಲಂಗು ಲಗಾಮಿಲ್ಲದೆ ಹೋಯಿತು. ನೋಡುವುದಕ್ಕೆ ಸ್ವಲ್ಪ ಚೆನ್ನಾಗಿದ್ದ ನನ್ನನ್ನು ಫ್ರೆಂಡ್ಸ್ ಹೊಗಳಿ ಉಬ್ಬಿಸಿದರು. ನನ್ನ ಅಲಂಕಾರ ಸಾಮಾಗ್ರಿಗಳು ಹೆಚ್ಚಾದವು. simplicityನ ತುಂಬಾ like ಮಾಡುತ್ತಿದ್ದ ನನಗೆ ಯಾಕೆ ಈ ಅಲಂಕಾರದ ಭೂತ ಬೆನ್ನು ಬಿತ್ತೋ ? ತಿಳಿಯದಾಯಿತು.

ತಂಗಿ ತಮ್ಮನ ಕಡೆ ಸಂಪೂರ್ಣವಾಗಿ ನಿರ್ಲಕ್ಷ್ಯಭಾವ ತಾಳಿದೆ. ಹೇಳುವವರಿಲ್ಲದೆ ತಮ್ಮ ಅಡ್ಡ ದಾರಿಗೆ ಬಿದ್ದ. ಸ್ಕೂಲಿಗೆ ಚಕ್ರ ಸುತ್ತಿ ಪೋಲಿ ತಿರುಗ ಹತ್ತಿದ. ನನಗೇ ಒರಟು ಒರಟಾಗಿ ಉತ್ತರ ಕೊಡುತ್ತಿದ್ದ. ಚಿಗುರು ಮೀಸೆ ಮೂಡುತ್ತಿದ್ದ ಅವನಿಗೆ ಸಿನೇಮಾ, ಸಿಗರೇಟು ಷೋಕಿ ಹತ್ತಿತು. ನೋಡುತ್ತಿದ್ದರೆ ಇವನೂ ಅಪ್ಪನ ಬಣ್ಣಕ್ಕೇ ತಿರುಗುತ್ತಿದ್ದ. ಯಾಕೋ ಅವನ ವಿಷಯದಲ್ಲಿ ತುಂಬಾ ಭಯವೆನ್ನಿಸ್ತಾ ಇತ್ತು. ಅವನಲ್ಲಿ ತನ್ನ ಮಾತಿಗೆ ಬೆಲೆಯಿಲ್ಲವೆನಿಸಿದಾಗ ತುಂಬಾ ನೋವಾಗುತ್ತಿತ್ತು. ಆದರೂ ಮಾಡುವುದೇನೂ ಇರಲಿಲ್ಲ. ಇದರಲ್ಲಿ

ನನ್ನದೇ ತಪ್ಪು. ಎಳೆಯ ವಯಸ್ಸಿನಿಂದಲೇ ಅವರಿಗೆ ಸರಿಯಾದ ಬುದ್ಧಿ ಕಲಿಸಿದ್ದರೆ ಹೀಗಾಗುತ್ತಿರಲಿಲ್ಲ.

ತಂಗಿಯ ವಿಷಯದಲ್ಲಿ ಆ ರೀತಿಯ ಭೀತಿ ಇಲ್ಲದೇ ಹೋದರೂ ಅವಳ ಭವಿಷ್ಯದ ಬಗ್ಗೆ ಯೋಚನೆ ಕಾಡುತ್ತಿತ್ತು. "ಅಕ್ಕ ನನಗೆ ಸ್ಕೂಲಿಗೆ ಹೋಗೋಕೆ ಇಷ್ಟವಿಲ್ಲ. ಓದುವುದು ನನ್ನಿಂದ ಆಗುವುದಿಲ್ಲ"—ಎಂದು ಸ್ಪಷ್ಟವಾಗಿ ಹೇಳಿದ್ದರಿಂದ ನಾನೂ ಸಹ ಬಲವಂತವಾಗಿ ಓದಿಸುವುದರಲ್ಲಿ ಅರ್ಥವಿಲ್ಲವೆಂದುಕೊಂಡು ಒಪ್ಪಿಗೆ ಕೊಟ್ಟೆ. ಈಗ ಅವಳೂ ವಯಸ್ಸಿಗೆ ಬಂದಿದ್ದಾಳೆ. ಮುಂದೆ ಹೇಗೆ....ಅವಳ ಬದುಕಿನ ನೆಲೆ ಯಾವುದು?.... ಪರಿಹಾರ ಕಾಣುತ್ತಿಲ್ಲ. ಓದಿಲ್ಲ, ದುಡ್ಡಿಲ್ಲ, ನನಗಿಂತ ಹೆಚ್ಚಾಗಿ ಸುಂದರವಾಗಿಯೂ ಇಲ್ಲ. ಅಂಥಾದ್ದರಲ್ಲಿ ಇವಳನ್ನು ಮದುವೆಯಾಗಲು ಯಾವ ಮಗರಾಯ ಬರುತ್ತಾನೋ' ಎಂದು ಮನಸ್ಸು ಚಿಂತಿಸುತ್ತಿತ್ತು. ಅಪ್ಪ ಆ ಚಿಂತೆಯನ್ನು ಹಚ್ಚಿಕೊಂಡರೆ ನನಗೆ ಸ್ವಲ್ಪ ಹಾಯೆನಿಸು ತ್ತಿತ್ತು. ಆದರೆ.... ಆದರೆ.... ಅಪ್ಪನಿಗೆ ಈಗೀಗ ಏನೂ ಬೇಡ. ಯಾವುದರಲ್ಲೂ ಆಸಕ್ತಿಯಿರಲಿಲ್ಲ. ಬಂದರೆ ಮುದುಡಿಕೊಂಡು ಮೂಲೆ ಯಲ್ಲಿ ಮಲಗುತ್ತಿದ್ದ. ಆದ್ದರಿಂದಲೇ ಅಪ್ಪ ಇದ್ದರೂ ಇಲ್ಲದಂತೆ ಭಾವಿಸಿ ನಾನು ಸ್ವಚ್ಛಂದವಾಗಿ ವರ್ತಿಸುತ್ತಿದ್ದೆ. ಈ ದಿನ ಬೆಳಗ್ಗೆ ಏಳು ಗಂಟೆಗೆ ಮನೆಬಿಟ್ಟು ಈಗ ರಾತ್ರಿ ಹೊತ್ತು ಮೀರಿ ಮನೆಗೆ ಬಂದಿದ್ದೆ. ಬಹುಶಃ ಅದಕ್ಕೇ ಅಪ್ಪ ನನ್ನನ್ನು ಕೂಗಿದ್ದಿರಬೇಕೆಂದುಕೊಂಡೆ.... ಅಪ್ಪನಿಗೆ ಸಮಾಧಾನ ಹೇಳಬೇಕಾಗಿಲ್ಲವೆಂದುಕೊಂಡೆ. ಅದಕ್ಕೇ ಸುಮ್ಮನೆ ನಿಂತೆ. ಅಪ್ಪನೇ ಬಾಯಿ ತೆಗೆದ,

"ನೋಡು ಪದ್ಮ, ಈಗೀಗ ನೀನು ಬಹಳ ಹದ್ದು ಮೀರಿ ನಡೆಯು ತ್ತಿರುವಂತಿದೆ. ನಿಮ್ಮಪ್ಪ ಜೀವಂತವಾಗಿದ್ದುಕೊಂಡೂ ನೀನು ಈ ರೀತಿ ನಡೆದುಕೊಳ್ಳುವುದು ನೋಡಿದರೆ, ನಿನಗೆ ಎಳ್ಳಷ್ಟೂ ನನ್ನ ಕಡೆ ಲಕ್ಷ್ಯ ವಿಲ್ಲವೆನಿಸುತ್ತೆ. ಹೌದು ತಾನೇ?"—ಎಂದ.

ಏನು ಸಮಾಧಾನ ಹೇಳಬೇಕೋ ತಿಳಿಯಲಿಲ್ಲ. ಇವತ್ತು ಲಕ್ಷ್ಯ ವಿಲ್ಲದಿರುವುದು ತಿಳಿಯೋದು, ಎಂದಾದರೂ ಲಕ್ಷ್ಯವಿದ್ದಿದ್ದರೆ ತಾನೇ— ಎಂದುಕೊಂಡೆ.

ಆದರೂ ಹೇಳಿದೆ—

"ಅಪ್ಪ ನನ್ನ ಒಳ್ಳೇದು ಕೆಟ್ಟದ್ದರ ಬಗ್ಗೆ ನನಗೆ ಪ್ರಜ್ಞೆಯಿದೆ. ದಾರಿ ತಪ್ಪುವ ಭಯವಿರುವುದಾದರೆ....ನಾನು ಎಂದೋ ದಾರಿ ತಪ್ಪುತ್ತಿದ್ದೆ. ನನ್ನ ವ್ಯಕ್ತಿತ್ವವನ್ನು ಉಳಿಸಿಕೊಂಡು ಭದ್ರವಾಗಿ ಕಾಯುತ್ತಿದ್ದೇನೆ. ಅದರ ಬಗ್ಗೆ ನೀನು ಸುಮ್ಮನೆ ತಲೆ ಕೆಡಿಸಿಕೊಳ್ಳಬೇಡ"— ಸ್ಪಷ್ಟವಾಗಿತ್ತು ನನ್ನ ಮಾತು.

"ನಿನಗೆ ಮದುವೆ ಮಾಡಬೇಕೆಂದು ನಿಶ್ಚಯಿಸಿದ್ದೇನೆ"—ನಿರ್ಧಾರದ ಧ್ವನಿಯಲ್ಲಿ ಹೇಳಿದ.

ನನಗೆ ಮದುವೆ ಅನ್ನೋ ಮಾತನ್ನು ಕೇಳಿ ಬಿದ್ದು ಬಿದ್ದು ನಗ ತೊಡಗಿದೆ. ಈ ಮಾತು.... ಅದೂ ಅಪ್ಪನ ಬಾಯಿಂದ ತೀರ ತಮಾಷೆಯೆನಿಸಿತು. ಹೇಳಿದೆ—

ಏನಪ್ಪ ಇದ್ದಕ್ಕಿದ್ದಂತೆ ನನ್ನ ಮದುವೆ ವಿಚಾರ ನಿನ್ನ ತಲೆಗೆ ಇಳಿದು ಬಿಟ್ಟದೆ.

ನನಗೆ ಮದುವೆ ....ಎಲ್ಲಿಂದ....ಹೇಗೆ ಮಾಡ್ತೀಯಪ್ಪ. ಯಾರವನು ಮಹಾನುಭಾವ ನನ್ನನ್ನು ಮದುವೆಯಾಗುವವನು ?.... ಎಂದು ಒತ್ತಾಯಿಸಿ ಪ್ರಶ್ನಿಸುತ್ತಿರಲು ಹೊರಗಿನಿಂದ ವಾಸು ಬಂದು, "ನಾನೇ ಪದ್ಮ"— ಎಂದು ಉತ್ತರಿಸಿದ.

"Dramatic change"—ವ್ಯಂಗವಾಗಿ ಹೇಳಿದಳು.

"ಯಾಕೆ ಪದ್ಮ ನಾನು ನಿನ್ನನ್ನು ಮದುವೆಯಾಗ್ತೀನಿ ಅಂದದ್ದು 'ಅನ್ ನ್ಯಾಚುರಲ್' ಅನ್ನಿಸುತ್ತಾ ?" ಪ್ರಶ್ನಿಸಿದ.

"ಛೆ ಛೆ, ಅಂಥಾದ್ದೇನೂ ಇಲ್ಲ. ಅದರೂ ಸ್ವಲ್ಪವೂ ಕ್ಲೂ ಇಲ್ಲದೆ ಹೀಗೆ ಇದ್ದಕ್ಕಿದ್ದ ಹಾಗೆ ಸಿನಿಮಾದಲ್ಲಿ ಬರೋ ಹೀರೋ ಹಾಗೆ ಬಂದರೆ.... ನಿಮಗೆ ಏನು ಅನ್ನಿಸುತ್ತೆ ? ನೀವೇ ಹೇಳಿ ?

'ವಾಸು ಮನಸ್ಸಿನಲ್ಲಿಯೇ ಲಾಜಿಕಲ್ ಪ್ರಶ್ನೆ'— ಎಂದುಕೊಂಡ. ವಿಶ್ಲೇಷಣೆಗೆ ತೊಡಗಿದ.... 'ಹೌದು ತಾನು ಯಾಕೆ ಪದ್ಮಳನ್ನು ಮದುವೆಯಾಗ್ತೀನಿ' ಎಂದೆ ? ಔದಾರ್ಯವೇ ಇಲ್ಲ ತ್ಯಾಗವೇ ?....ತಾನೇನೂ ಪದ್ಮಳನ್ನು ಪ್ರೀತಿಸಿಲ್ಲ. ಬೀದಿ ಜನವೆಲ್ಲ ಅವಳ ವಿಷಯವಾಗಿ, ತುಚ್ಛ

ವಾಗಿ ಮಾತಾಡಿಕೊಂಡಾಗ ಇವನಿಗೆ ಕುಟುಕಿದಂತಾಗಿ ಹೇಗಾದರೂ ಆವಳಿಗೆ ಬುದ್ಧಿ ಹೇಳಬೇಕು-ಅಂದುಕೊಂಡವನು ಸುಮ್ಮನಾಗಿದ್ದ. ಆದ್ದ ರಿಂದಲೇ ಪದ್ಮಳ ತಾರ್ಕಿಕ ಪ್ರಶ್ನೆಗೆ ಉತ್ತರ ಕೊಡುವುದಕ್ಕೆ ತಡಬಡಿಸ ಬೇಕಾಗಿ ಬಂದಿದೆ.

ಅಪ್ಪ, ವಾಸು ಮಧ್ಯೆ ಪ್ರವೇಶಿಸಿ ತನ್ನ ಅಭಿಪ್ರಾಯವನ್ನು ತಿಳಿಸಿ ದಾಗ ಸ್ವಲ್ಪ ಹಿಗ್ಗಿದ. ಪದ್ಮಳ ಅಡ್ಡ ಪ್ರಶ್ನೆಗಳಿಗೆ ಮುಗ್ಗರಿಸಿದಂತಾ ಗಿದ್ದ ವಾಸುವನ್ನು ಕಂಡು ಅಪ್ಪನಿಗೆ ಕನಿಕರವೆನಿಸಿತು. ಇಷ್ಟು ದಿವಸಗಳ ಮೇಲೆ ಕನಿಕರಕ್ಕೆ ಅಪ್ಪನಲ್ಲಿ ಜಾಗ ಸಿಕ್ಕಿತು ಅದಕ್ಕೆ ಅವನ ಪರವಾಗಿ ಹೇಳಿದ.

"ವಾಸುಗಿಂತ ಗಂಡ ನಿನಗೆ ಈ ಜನ್ಮದಲ್ಲಿ ಸಿಗುವುದಿಲ್ಲ. ತಲೆಯೆಲ್ಲ ಮಾತಾಡಿ, ಬಂದಿರೋ ಅವಕಾಶವನ್ನು ಹಾಳು ಮಾಡಬೇಡ"

"ಮದುವೆ ನನ್ನ ವೈಯುಕ್ತಿಕ ವಿಷಯ. ಅದರಲ್ಲಿ ಯಾರಿಗೂ ತೊಂದರೆ ಬೇಡ. ವಾಸು, ಸ್ನೇಹಕ್ಕೂ ಮದುವೆಗೂ ವ್ಯತ್ಯಾಸವಿದೆ. ಸ್ನೇಹ ಯಾರೊಂದಿಗಾದರೂ ಸರಿ. ಆದರೆ ಮದುವೆ ಆತುರದಲ್ಲಿ ಯಾರು ಯಾರ ಜೊತೆಯುಲ್ಲೋ ಆಗುವುದಲ್ಲ. ಗೊಂಬೆ ಮದುವೆಯಾದರೆ ಪರವಾ ಗಿಲ್ಲ. ಆದರೆ ಇದು ಎರಡು ಜೀವಿಗಳ ಶಾಶ್ವತ ಬೆಸುಗೆ. First of all ನಿಮ್ಮ ಅಪ್ಪ ಅಮ್ಮನನ್ನು ಎದುರಿಸಿ ನಿಲ್ಲುವ ಶಕ್ತಿಯಿದೆಯೇ ನೋಡಿ ಕೊಳ್ಳಿ. ಎಲ್ಲೋ ನೀವು ಕನಸಿನಿಂದ ಎದ್ದು ಬಂದು ಮಾತನಾಡು ತ್ತಿರಬೇಕು... ಮದುವೆ ಮಾತು ಮರೆತುಬಿಡಿ'—ತುಂಡಾಗಿ ನುಡಿದಳು.

ಅಲ್ಲಿಗೇ ಅಧ್ಯಾಯ ಮುಗಿಯಿತು. ವಾಸುವಿಗೆ ಮನಸ್ಸು ಮೋಸ ಮಾಡಿತೆಂದು ಅರ್ಥವಾಯಿತು. ಅಪ್ಪ ಒಂದು ರಾತ್ರಿ ಮಲಗಿದವನು ಬೆಳಗ್ಗೆ ಏಳಲೇ ಇಲ್ಲ.

ಈಗೀಗ ತಮ್ಮನಿಂದಾಗಿ ಹಳೆಯ ವಿಷಯಗಳನ್ನು ಎಳೆದು ನನ್ನನ್ನು ಆಡಿಕೊಳ್ಳುತ್ತಾ ಜನ ಬಾಯಿ ತೀಟೆ ತೀರಿಸಿಕೊಳ್ಳುತ್ತಿದ್ದರು, ನನಗೆ ವಯಸ್ಸು ಇಪ್ಪತ್ತೈದು ದಾಟಿತ್ತು. ಮನಸ್ಸು ತೀರಾ ಹುಣ್ಣಾಗಿತ್ತು. ನನ್ನ ಬಾಳಿನ ಸುತ್ತ ಗೋಜಲು ಗೋಜಲಾದ ಬಲೆ ಹೆಣೆದುಕೊಂಡಿರುವಂತೆ ಅನಿಸುತ್ತಿತ್ತು. ಯಾವುದೋ ಹುಡುಗಿಯನ್ನು ಕೆಡಿಸಿ ತಮ್ಮ ಮನೆ

ಬಿಟ್ಟು ಓಡಿದ್ದ. ತಮ್ಮ, ತಂಗಿ, ಅಮ್ಮ, ಅಪ್ಪ—ಈ ಕರುಳ ಬಂಧುತ್ವ ಸೆಳೆತ ಯಾವುದೂ ನನಗಿಲ್ಲವೆನಿಸಿತ್ತು. ಇರುವ ತಂಗಿ ಎದುರು ಬಂದಾಗ ತಂಗಿ ಬಂಧುತ್ವ ನೆನಪಿಗೆ ಬರುತ್ತಿತ್ತು. ಇಲ್ಲವಾದರೆ ತೀರ ಒಂಟಿತನದ ಅರಿವಾಗಿ ನೇಣು ಹಾಕಿಕೊಳ್ಳಬೇಕೆನಿಸುತ್ತಿತ್ತು.

Officeನಲ್ಲಿಯೂ ಯಾರೊಂದಿಗೂ ಮಾತಾಡುತ್ತಿರಲಿಲ್ಲ. ಯಾರಾದರೂ ಆಕಸ್ಮಾತಾಗಿ ಮಾತನಾಡಿದರೆ ಒಳಗೆ ಹೆಪ್ಪುಗಟ್ಟಿದ ದುಃಖಕರಗಿ ಹರಿಯುತ್ತಿತ್ತು. ಆದರೂ ಯಾರ ದಯೆಯೂ ನನಗೆ ಬೇಡವಾಗಿತ್ತು. ಅವರ ಮರುಕ ನನ್ನ ಅಸಹಾಯಕತೆಯನ್ನು ಗುರುತಿಗೆ ತರುತ್ತಿದ್ದುದರಿಂದ ಅಸಹ್ಯವಾಗುತ್ತಿತ್ತು. ನನ್ನ office colleague ಶಂಕರ್, ನನ್ನನ್ನು ಮದುವೆಯಾಗುತ್ತೇನೆಂದಾಗ ಯಾಕೋ ಈ ಬಾರಿ ಯಾವ ಪ್ರತಿಭಟನೆಯೂ ಇಲ್ಲದೆ, ಕೊಸರಾಟವಿಲ್ಲದೆ ಮೂಕ ಸಮ್ಮತಿ ಕೊಟ್ಟೆ. ಮದುವೆಯಾಗಬೇಕಿದ್ದ ತಂಗಿಯಿರುವುದನ್ನೂ, ಅವಳ ಜವಾಬ್ದಾರಿ ತನ್ನ ಮೇಲಿರುವುದನ್ನೂ ಮರೆತು ಸ್ವಾರ್ಥದ ಮೊಟ್ಟೆಯಾಗಿ ಕೆರಳುತ್ತಿರುವ ಕಾಮನೆಗಳನ್ನು ತೃಪ್ತಿಪಡಿಸುವುದಕ್ಕಾಗಿ ಒಪ್ಪಿಗೆ ಕೊಟ್ಟು ದೇವಸ್ಥಾನವೊಂದರಲ್ಲಿ ಮದುವೆಯಾದೆ.

* * *

ಹತ್ತು ವರ್ಷಗಳು ದಾಟಿವೆ. ಮದುವೆಯಾಗಿ ಮೊದಲೆರಡು ವರ್ಷಗಳು ಸುಖವಾಗಿಯೇ ಕಳೆದುಹೋಗಿದ್ದವು. ಮೂರು ಮಕ್ಕಳಾಗಿದ್ದರೂ ಈಗ ಉಳಿದಿರುವುದು ಒಂದೇ. ಶಂಕರ್ ಪದ್ಮ ಉದ್ಯೋಗ ಮಾಡುವುದನ್ನು ವಿರೋಧಿಸಿದ. ಕೆಲಸ ಬಿಟ್ಟು ಮನೆ ಚಾಕರಿಗೆ ಮಾತ್ರ ಉಳಿದಳು. ತಂಗಿ ಅವಳಿಗೆ ಹೊರೆಯೆನಿಸುತ್ತಿತ್ತು. ಶಂಕರ್ ಮನೆಗೆ ಸರಿಯಾಗಿ ದುಡ್ಡು ಕೊಡದೆ office ಕೆಲಸದ ನೆಪ ಹೇಳಿ ತಿಂಗಳುಗಟ್ಟಲೆ ಊರು ಬಿಟ್ಟು ಹೊರಡುತ್ತಿದ್ದ. ಕೆಲಸ ಬಿಟ್ಟ ಮೂರ್ಖತನಕ್ಕೆ ತನ್ನನ್ನೇ ನಿಂದಿಸಿಕೊಂಡಳು. ತಂಗಿ ಮೂಕವೇದನೆಯೊಂದಿಗೆ ಹೊತ್ತು ಕಳೆಯು

ತ್ತಿದ್ದಳು. ಆದರೆ ಮನುಷ್ಯನ ಮನಸ್ಸು ತೀರಾ ಸೂಕ್ಷ್ಮವಾದುದು. ಸಾಮರ್ಥ್ಯಕ್ಕಿಂತ ಹೆಚ್ಚು ಸಹಿಸಲು ಆಗುವುದಿಲ್ಲ.

ತಂಗಿ ಜ್ವರದಿಂದ ನರಳಿ ಔಷಧಿ ಉಪಚಾರಕ್ಕೆ ಅನುಕೂಲವಿಲ್ಲದೆ, ಅಕ್ಕನಿಂದ ಈ ಪ್ರಪಂಚದಿಂದ ಬೀಳ್ಕೊಂಡಳು. ಪದ್ಮಳಿಗೆ....ಹಾಯೆನಿಸಿತ್ತು.

ತಮ್ಮ, ತಂಗಿ, ಅಮ್ಮ, ಅಪ್ಪ....ಚಕ್ರಾಕಾರದಲ್ಲಿ ಅವಳ ಕಣ್ಮುಂದೆ ತಿರುಗುತ್ತಿದ್ದರು.

ಜೀವನವೆಲ್ಲಾ ಬರಿಯ ಗಂಟುಗಳು ಸಿಕ್ಕು. ಸಿಕ್ಕು ಬಿಡಿಸಲು ಪ್ರಯತ್ನಿಸಿದಷ್ಟೂ ಹೆಚ್ಚು ಹೆಚ್ಚಾಗಿ ಬಿಗಿದುಕೊಳ್ಳುತ್ತದೆ. ಸುಲಭವಾಗಿ ಬಿಡಿಸಲು ಸಾಧ್ಯವಿಲ್ಲವೇ ?... ಸಾಧ್ಯವೇ ಇಲ್ಲವೇ ಎಂದು ಮತ್ತೆ ಮತ್ತೆ ಕೇಳುತ್ತಿದ್ದಳು.

ಪದ್ಮಳು ಶಂಕರ್ ಬಂದು ಅಲುಗಿಸಿದಾಗಲೇ ಕಣ್ಣು ರೆಪ್ಪೆ ಮಿಟುಕಿಸಿದ್ದು ! ತೊಡೆಯ ಮೇಲೆ ಮಲಗಿದ್ದ ಮಗುವಿನ ನೆನಪು ಬಂದದ್ದು !.... ಆದರೆ ಆದರೆ ಮಗು ಮಲಗೇ ಇತ್ತು....ಎಬ್ಬಿಸಿದರೂ ಏಳದ ನಿದ್ರೆಯಲ್ಲಿ ಮುಳುಗಿತ್ತು. ಮೊಲೆಗಾಗಿ ತೆರೆದ ತುಟಿ ಹಾಗೇ ಇತ್ತು....

'ಪದ್ಮ' ಎಂದು ಕಿರುಚಿದ ಶಂಕರ್. ಪ್ರಜ್ಞೆ ತಿಳಿದ ಪದ್ಮಳಿಗೆ ತೊಡೆಯ ಮೇಲಿನ ಮಗು ಕಣ್ಣಿಗೆ ಬಿತ್ತು. 'ಪುಟ್ಟ, ಪುಟ್ಟ' ಎಂದು ಅಲುಗಾಡಿಸಿದಳು. ಆದರೆ ನಿಶ್ಚಲವಾಗಿ ಮಲಗಿದ್ದ ಮಗುವೇ ತನ್ನ ಸ್ಥಿತಿಯನ್ನು ಅರ್ಥ ಮಾಡಿಸಿತು. ಬಿಕ್ಕಿ ಬಿಕ್ಕಿ ಅತ್ತಳು.

'ಏನಾಯ್ತು ಮಗುವಿಗೆ ? ಬಂಡೆಕಲ್ಲಿನ ಹಾಗೆ ಕುಳಿತಿದ್ದೆಯಲ್ಲ.... ತಿಳಿದುಕೊಳ್ಳೋಕೆ ಆಗಲಿಲ್ಲವಾ ?—ಎಂದು ಬೇಸರ, ಸಿಟ್ಟಿನ ಧ್ವನಿಯಲ್ಲಿ ನುಡಿದ.

ಪದ್ಮ ನಿರುತ್ತರಳಾಗಿದ್ದಳು. ಮಗುವಿನಗಲಿಕೆಗೆ ನೊಂದ ತನ್ನ ದುರ್ಬಲ ಮನಸ್ಸನ್ನು ಹಳಿದಳು. ತನಗೇನೋ ತುಂಬಾ ಅಕ್ಕರೆಯಿದ್ದಂತೆ ಮಾತಾಡಿದ ಗಂಡನ ಬಗ್ಗೆ ರೋಷದ ಬೆಂಕಿ ಭುಗಿಲೆದ್ದಿತು, ವಾರದ ಮೇಲೆ ಮರಳಿದ ಅವನ ಬಗ್ಗೆ ತಾತ್ಸಾರ ಮೂಡಿತು. ಸಂಬಂಧಗಳನ್ನೆಲ್ಲ ಕಳೆದುಕೊಂಡು ಜಡವಾಗಬೇಕೆಂದುಕೊಂಡ ತನ್ನ ಕೊರಲಿಗೆ,

ಅವನು ಕ್ಷಣದ ಕಾಮದ ಪರಿಣಾಮದ ಉರುಲು ಹಾಕಿದ್ದ. ತೇವಗೊಂಡ ಕಣ್ಣುಗಳು ಬತ್ತಿದ್ದವು. ಮಗುವಿನ ಸಾವೂ ಅವಳಿಗೆ ಗೋಜಲು ಗಂಟು ಬಿಡಿಸಿಕೊಂಡಂತಾಯಿತು.

# ರಾಜೀನಾಮೆ

ಗಂಟೆ ಹತ್ತಾಗಿತ್ತು. ಆಫೀಸ್ ಟೈಂ 10.30 ಆದರೂ ಮಾಲತಿ ಹತ್ತು ಗಂಟೆಗೆ ಹಾಜರಿದ್ದಳು. ಇನ್ನು ಬೇರೆ ಯಾರೂ ತನ್ನ ಕೊಲೀಗ್ಸ್ ಬಂದಿರಲಿಲ್ಲ. ಮಾಡುವುದೇನೆಂದು ತೋಚದೆ office ಕ್ಯಾಂಟೀನ್‌ಗೆ ಹೋಗಿ ಕುಳಿತಳು. ಗೆಳತಿಯರು ಯಾರೂ ಜೊತೆಗಿಲ್ಲದೆ ಕ್ಯಾಂಟೀನ್‌ಗೆ ಹೋಗುವುದೆಂದರೆ ಕಸಿವಿಸಿ. ಬೇರೆ ದಾರಿಯಿಲ್ಲದೆ ಹೋಗಿ ಮೂಲೆಯ ಟೇಬಲ್ ಒಂದರ ಮುಂದೆ ಕುಳಿತಳು. ಅಕ್ಕಪಕ್ಕದ ಕೆಲವು ಆಫೀಸ್‌ಗಳು ಬೆಳಗೆ 9ಕ್ಕೆ ಪ್ರಾರಂಭವಾಗಿರುತ್ತಿದ್ದುದರಿಂದ, ಅಲ್ಲಿನ ಜನ ಈ ಕ್ಯಾಂಟೀನ್‌ಗೆ ಕಾಫಿಗಾಗಿ ಬರುತ್ತಿದ್ದುದರಿಂದ ಸ್ವಲ್ಪ ಗಲಿಬಿಲಿ ಇತ್ತು. ಕಾಫಿ ಕುಡಿಯುವ ಅಭ್ಯಾಸ ಇಲ್ಲದಿದ್ದರೂ ಕ್ಯಾಂಟೀನ್‌ಗೆ ಸುಮ್ಮನೆ ಬಂದು ಕೂಡುವುದು ಸರಿಯಲ್ಲಂತ ಅನಿಸಿ ಪರಿಚಯದ ಮಾಣಿಯನ್ನು ಕರೆದು ಕಾಫಿಗೆ ಆರ್ಡರ್ ಮಾಡಿದಳು. ಮಾಣಿಗೆ ಮಾಲತಿ ಒಬ್ಬಳೇ ಬಂದದ್ದು ಆಶ್ಚರ್ಯ. ಅವನ ಕುತೂಹಲ ತಡೆಯುವಂಥಾದ್ದಲ್ಲ. ಅದಕ್ಕೇ "ಇದ್ಯಾಕೆ ಮೇಡಂ ಇವತ್ತು ನಿಂ ಜೊತೆಯವರು ಯಾರೂ ಬರಲಿಲ್ವೆ? ಅಲ್ದೇ ಇವತ್ತು ಆಫೀಸ್‌ಗೆ ತುಂಬ ಬೇಗ ಬಂದಂಗಿದೆ!" ಎಂದು ಕೇಳಿಯೇಬಿಟ್ಟ.

"ಹೌದಪ್ಪ ಬಸ್ ಸಿಕ್ತು, ಹತ್ತಿ ಬಂದ್ಬಿಟ್ಟೆ, ಇನ್ನೊಂದು ಅರ್ಧ ಗಂಟೇನೇ ಅಲ್ವ? ಕಾಫಿ ಕುಡ್ದು ಹೋಗೋಷ್ಟೊತ್ತಿಗೆ ಟೈಂ ಸರಿ ಹೋಗುತ್ತೆ—ಸಮಾಧಾನವಾಗಿಯೇ ಉತ್ತರಿಸಿದಳು.

ಮಾಣಿ ಮರು ಮಾತನಾಡದೆ ಸಮಾಧಾನಗೊಂಡಂತೆ ಹೋಗಿ ಒಂದೆರಡು ಸೆಕೆಂಡುಗಳಲ್ಲಿ ಕಾಫಿ ಗ್ಲಾಸ್ ಹಿಡಿದು ಬಂದು, ಇನ್ನೊಂದರಲ್ಲಿ ಸ್ವಲ್ಪ ಡಿಕಾಕ್ಷನ್ ತಂದಿಟ್ಟ. ಕಾಫಿಗೆ ಸಕ್ಕರೆ ವಿಪರೀತವಾಗಿರುತ್ತಂತ, ಮಾಲತಿ ಯಾವಾಗ್ಲೂ ಒಂದು ಸ್ವಲ್ಪ ಎಕ್ಸ್ಟ್ರಾಡಿಕಾಕ್ಷನ್ ಕೇಳೋದು ವಾಡಿಕೆ. ಅದಕ್ಕೇ ತುಂಬಾ ಬುದ್ಧಿವಂತಿಕೆಯಿಂದ ಮಾಣಿ ಹೇಳಿಸಿಕೊಳ್ಳದೆ ತಂದಿಟ್ಟ. ಕಾಫಿ ಗ್ಲಾಸಿಗೆ ಡಿಕಾಕ್ಷನ್ ಬೆರೆಸಿ ಒಂದು ಗ್ಲಾಸ್ ಸ್ಟ್ರಾಂಗ್ ಕಾಫಿ ಮಾಡಿಕೊಂಡಳು. ಒಂದೊಂದೇ ಗುಟುಕು ಗುಟುಕರಿಸುತ್ತಾ ಆಲೋಚನೆಗೆ ಬಿದ್ದಳು. ಯಾಂತ್ರಿಕವಾಗಿ ಕಾಫಿ ಗ್ಲಾಸ್ ಹಿಡಿದ ಕೈ ತುಟಿಯ ಬಳಿಗೆ ಹೊಗುತ್ತಿದ್ದೆ. ಆದರೆ ಅವಳಿಗೆ ಮಾತ್ರ ಪರಿವೆ ಇದ್ದಂತೆ ಇಲ್ಲ.

ಸುಮಾರು ಎಂಟು ಹತ್ತು ವರ್ಷಗಳಿಂದ ಒಂದೇ ಆಫೀಸಿನಲ್ಲಿ ಗಾಣದೆತ್ತಿನ ಹಾಗೆ ದುಡೀತಿದ್ದಾಳೆ. ಯಾವ ಕೆಲಸಕ್ಕೆ ಸೇರಿದ್ದಳೋ ಅದೇ ಕೆಲಸದಲ್ಲಿ ಕೊಳೆತು ನಾರುತ್ತಿದ್ದಾಳೆ. ತನ್ನ ಹಿಂದೆ ಬಂದವರೆಲ್ಲ ತನ್ನನ್ನು ದಾಟಿ ಮೇಲೇರುತ್ತಿದ್ದರೂ ತನಗೆ ಹತ್ತಲಿಕ್ಕೆ ಆಗದಷ್ಟು ದುರ್ಬಲವೇನೋ ಎನಿಸಿತ್ತು. ಪ್ರಮೋಶನ್ ಇವಳ ನೆರಳಿಗೇ ಹೆದರುತ್ತಿತ್ತೇನೋ ಎನಿಸಿತ್ತು.

ಎಲ್ಲರ ಬದುಕಿನಲ್ಲಾಗುತ್ತಿದ್ದ ಬದಲಾವಣೆಗಳಿಗೆ ಜೀವಂತ ಮೂಕ ಸಾಕ್ಷಿಯಾಗಿದ್ದಳು. ಎಲ್ಲರ ಅಣಕ ಅಪಹಾಸ್ಯಗಳ ಹಾವಳಿಗೆ ತುತ್ತಾಗಿದ್ದಳು. ಕಾರಣ ಎಲ್ಲರಂತೆ ತಾನಿಲ್ಲದಿರುವುದೇ ಆಗಿತ್ತು. ಅವರ ನಗುವಿನಲ್ಲಿ ನಗು, ಅಳುವಿನಲ್ಲಿ ಅಳು, ಅಪಮಾನದಲ್ಲಿ ಅಪಮಾನ, ಮಾನದಲ್ಲಿ ಮಾನ ಕಾಣಬೇಕಿತ್ತು. ಸ್ವಂತ ವ್ಯಕ್ತಿತ್ವದಿಂದ ನಿಂತ ಅವಳ ಮನಸ್ಸನ್ನು ಇನ್ನೊಬ್ಬರ ಇಚ್ಛೆ–ಅನಿಚ್ಛೆಗಳಿಗೆ ಹೊಂದಿಸುವುದು ಅವಳಿಂದ ಆಗದಾಗಿತ್ತು. ಮುಂದುವರಿಯಬೇಕಾದರೆ ಬಾಲ ಮೂಸಬೇಕಿತ್ತು. ಹಾಗೆ ಮಾಡದೆ ಬೇರೆ ರೀತಿಯಿದ್ದರೆ ವಿಚಿತ್ರ ಮೃಗದ ಹಾಗೆ ಕಾಣುವ ದೃಷ್ಟಿಯನ್ನು ಎದುರಿಸಬೇಕಿತ್ತು. ಒಳ್ಳೆಯವರೆಂದುಕೊಂಡವರೇ ಕೆಟ್ಟವರಾಗಿ ನಿರೂಪಿತರಾದಾಗ ಆಗುವ ಘಾತ ಎಲ್ಲಕ್ಕಿಂತ ಹೆಚ್ಚಿನದು. ತನ್ನ ಸುತ್ತಲ ಬಳಗದವರು ಯಾರು ? ಕಮಲಾ, ರಂಜನಿ, ಫಾತಿಮಾ,

ಪಿಂಟೋ, ಆರ್ಮುಗಂ, ಪೀಟರ್ ... ಒಬ್ಬೊಬ್ಬರ ಮುಖವಾಡದ ಪದರಗಳನ್ನು ಕಳಚಬೇಕು. ಹೌದು ಅವರೇ ಸುತ್ತುತ್ತಾ ಇದ್ದಾರೆ. ಆ ನಗು....ವಿಕಟನಗು...ಮುಳ್ಳು ಮುಳ್ಳಾಗಿ ಚುಚ್ಚಿ....ರಕ್ತ ಸುರಿಸುತ್ತಿವೆ. ಇವರು ಯಾರಿಗೂ ಹೃದಯ ಇಲ್ಲ....ಬರಿಗೊಂಬೆಗಳು....ಅದೂ ಕಲ್ಲಿನವು... ಕುಸ್ತಿಗೆ ನಿಂತರೆ ತಲೆಗೆ ಹೊಡೆಯುತ್ತವೆ....ಅಬ್ಬಬ್ಬ ; ಇವರು... ಇವರನ್ನೆಲ್ಲಾ ಸಾಲಾಗಿ ನಿಲ್ಲಿಸಿ ರೋಪ್ಮನ್ ಕೊಂದ ಹಾಗೆ ಕೊಲ್ಬೇಕು ಸಾಯಿತ್ತಿರೋದೂ ತಿಳಿಯೋ ಹಾಗೆ ಕೊಲ್ಬೇಕು. ತಲೆಕೆಳಗಾಗಿ ನೇತು ಬಿಟ್ಟು ಆಕ್ಯುಪಂಕ್ಚರ್ ಮಾಡ್ಬೇಕು. ಅಸಲಿ ಬಣ್ಣದವರೆಗೆ ಹೋಗ್ಬೇಕಾದ್ರೆ ತು-ಬಾ ಪದರ ಹರೀಬೇಕು. ಅವರ ಬಣ್ಣ ಆಳಕ್ಕಿದೆ ಗೊತ್ತಾಗೊಲ್ಲ ...ಆರೆ ಎಲ್ಲಾ ಒಟ್ಟಾಗಿ ಅದೇನು ಸಂಚು ಮಾಡ್ತಿದ್ದಾರೆ....ಹೌದು ನನ್ನನ್ನು ಕೊಂದ್ಬಿಡ್ತಾರೆ. ಯು ಆರ್ ಅನ್‌ಫಿಟ್ ಅಂತ ಬೋರ್ಡು ಕಟ್ಟಿ ನನ್ನನ್ನ ಮುಳುಗಿಸ್ತಾರೆ. ನನ್ನ ಕತ್ತು ಹಿಸುಕೋಕೆ ಬರ್ತಿದ್ದಾರೆ ....ಅಯ್ಯೋ ಕ್ರೂರವಾಗಿ ನೋಡ್ತಿದ್ದಾರೆ. ದೇವರೇ ...ದೇವರೇ ನಾನು ಹೇಗೆ ಇವರಿಂದ ತಪ್ಪಿಸ್ಕೊಳ್ಳಿ ? ... ಬಂದ್ರು ಬಂದ್ರು ... ಅಯ್ಯೋ ಬಂದ್ಬಿಟ್ರು....ಪಳ್ ಅಂತ ಗ್ಲಾಸ್ ಹೊಡೆದ ಶಬ್ದಕ್ಕೆ ಜನರೆಲ್ಲ ಈ ದಿಕ್ಕಿಗೆ ತಿರುಗಿದ್ರು. ತನ್ನ ವರ್ತನೆ ಶೀರಾ ಸಿಲ್ಲಿ ಅನ್ನಿಸ್ತು. ಆದರೂ ಅಸಹ್ಯವಾಗಿದ್ದ ಅವರೆಲ್ಲರ ದೃಷ್ಟಿಯನ್ನು ಎದುರಿಸದೆ ಗತ್ಯಂತರವಿರಲಿಲ್ಲ. ತಾನು ಆಲೋಚನೆಯಲ್ಲಿ ಮೈ ಮರೆತಿದ್ದಾಗ ಮಾಣಿ ಬಿಲ್ ತಂದಿಟ್ಟದ್ದೂ ಗೊತ್ತಾಗಿರಲಿಲ್ಲ. ಪರ್ಸ್ ತೆಗೆದು ಎಂಟಾಣೆ ಬಿಲ್ಲೆಯನ್ನು ಆ ಬಿಲ್ ಮೇಲಿಟ್ಟು ಚಕಚಕನೆ ಹೊರಗೆ ನಡೆದಳು. ಹತ್ತೂವರೆ ಗಂಟೆಗೆ ಇನ್ನೊಂದೆರಡು ಸೆಕೆಂಡ್ ಇತ್ತು. ಮೈ ಬೆವರುತ್ತಿತ್ತು. ತುಟಿ ಕಂಪಿಸುತ್ತಿತ್ತು. ಭೀತಿ ಕಣ್ಣಲ್ಲಿ ತುಂಬಿದ ಹಾಗಿತ್ತು ಯಾರಾದರೂ ನೋಡಿದರೆ ಮಾಲತಿ ಸ್ವಸ್ಥವಾಗಿಲ್ಲ ಅನ್ನೋದು ಸ್ಪಷ್ಟವಾಗಿ ತಿಳೀತಿತ್ತು. ಆಫೀಸ್ ಮೆಟ್ಟಲು ಹತ್ತುತ್ತಿದ್ದ ಹಾಗೆ ಗೀತಾ ಎದುರಾದಳು. ಮಾಲತಿಯ ಮುಖ ನೋಡಿ ಆಶ್ಚರ್ಯವಾಯಿತು ಆಗ ತಾನೆ ಆಫೀಸ್‌ಗೆ ಬರುತ್ತಿದ್ದ ಮಾಲತಿ ಮಾಮೂಲಿನಂತೆ ಫ್ರೆಷ್ ಆಗಿ ಇರಬೇಕಿತ್ತು.

ಆದರೆ ಈಗ ನೋಡಿದರೆ ದಿನ ಪೂರ್ತಿ ದುಡಿದು ಬೆಂದ ಮುಖದ ಹಾಗಿದ್ದುದಲ್ಲದೆ ಅವಳ ಮುಖದಲ್ಲಿ ಪ್ರೇತಕಳೆ ತುಂಬಿದ ಹಾಗಿತ್ತು. ಮೈಗೆ ಹುಷಾರಿಲ್ಲದಿರಬಹುದೆಂದು ಭಾವಿಸಿದ ಗೀತಾ 'ಲೀವ್ ಯಾಕೆ ಅಪ್ಲೈ ಮಾಡ್ಬಾರ್ದಾಗಿತ್ತೇ ಮಾಲತಿ? ಪ್ರಪಂಚ ಮುಳುಗಿ ಹೋಗೋಂತ ಕೆಲಸವೇನೂ ಇಲ್ವಲ್ಲ ಆಫೀಸ್‌ನಲ್ಲಿ! ಅಥವ ನನಗೆ ತಿಳೀದೇ ಏನಾದ್ರೂ ಇದೆಯೋ ಅರ್ಥಗರ್ಭಿತವಾಗಿ ಹುಸಿನಗುತ್ತಾ ಕೇಳಿದಳು.

ಮಾಲತಿಯ ಹೃದಯದ ತಂತಿಗಳು ಮುರಿದು ಹೋಗುವಷ್ಟು ಬಿಗಿಯಾಗಿದ್ದುವು. ಬೇರೆ ಯಾರಾದರೂ ಅವಳನ್ನು ಮಾತಾಡಿಸಿದ್ದರೂ ಸಿಡಿದು ಬೀಳುತ್ತಿದ್ದಳು. ಆದರೆ ಮಾಲತಿಗೆ 'ತನ್ನವರು' ಎಂದು ಹೇಳಿಕೊಳ್ಳೋಕೆ ಗೀತಾ, ಗೋಪಿ ಇಬ್ಬರೇ. ಈಗ ಗೀತಾಳ ಮೇಲೆ ಸಿಟ್ಟಾದರೆ ಕೆಲ್ಸ ಕೆಡುತ್ತೆ. ಅದಕ್ಕೇ ಮನಸ್ಸಿಲ್ಲದ ಮನಸ್ಸಿನಿಂದ ಉತ್ತರಿಸಿದಳು. ನಿನಗ್ಗೊತ್ತಿದ್ದೂ ನನ್ನನ್ನು ಲೀವ್ ಅಪ್ಲೈ ಮಾಡೋಕೆ ಹೇಳ್ತಿಯಲ್ಲೇ. ಈ ಹೊಸಾ ಬಾಸ್ ಬಂದಾಗಿಂದ ಮನುಷ್ಯರನ್ನು ನೋಡಿದ್ರೆ ಅಸಹ್ಯ ಹುಟ್ಟೋ ಹಾಗೆ ಆಗ್ತಿದೆ. ನಿನಗೇ ಗೊತ್ತಲ್ಲ. ಒಂದು ದಿವ್ಸ ಲೀವ್ ಹಾಕಿದರೆ ಎಷ್ಟು ರಂಪಾ ಮಾಡ್ತಾನೇಂತ....' ಹೇಳುತ್ತಲೇ ಗೀತೆಯ ಜೊತೆಗೆ ತನ್ನ ಕೊಠಡಿಯತ್ತ ಹೆಜ್ಜೆಯಿಟ್ಟಳು. ಸಂಜೆ ಮನೆಗೆ ಹೋಗುವಾಗ ಭೇಟಿಯಾಗೋಣಾಂತ ಹೇಳಿ ಬೇರೆ ಬೇರೆಯಾದರು.

ಮೊದಲು ಗೀತಾ, ಮಾಲತಿ, ಗೋಪಿ ಮೂವರೂ ಒಂದೇ ಸೆಕ್ಷನ್‌ನಲ್ಲಿದ್ದರು. ಆದರೆ ಯಾಕೋ ಹೊಸಾ ಬಾಸ್ ಬಂದಾಗಿನಿಂದ ಈ ಮೂವರನ್ನೂ ವಿದ್ರೋಹಿ ಬಂದಿಗಳನ್ನು ಬೇರೆ ಬೇರೆಯಾಗಿ ಇಡೋ ಹಾಗೆ, ಬೇರೆ ಬೇರೆ ಸೆಕ್ಷನ್ಸ್‌ಗೆ ಟ್ರಾನ್ಸ್‌ಫರ್ ಮಾಡ್ಬಿಟ್ಟ. ಊಟದ ಹೊತ್ತಲ್ಲಿ ಮೂವರೂ ಒಂದು ಕಡೆ ಸೇರಿ ಆಯಾ ದಿನದ ತಮ್ಮ ಸೆಕ್ಷನ್‌ಗಳಲ್ಲಿ ನಡೆದ ಘಟನೆಗಳು, ಅನುಭವಗಳು ಜೋಕ್ಸ್-ಎಲ್ಲಾನ್ನೂ ಎಕ್ಸ್‌ಚೇಂಜ್ ಮಾಡ್ಕೊಳ್ತಿದ್ರು.

ಗೋಪಿ ತುಂಬಾ active. ಅವನ ಪರಿಚಯ ಎಲ್ಲರಿಗೂ ಅನಿವಾರ್ಯವಾಗಿ ಆಗೇ ಇತ್ತು. Union ಅದೂ ಇದೂಂತ ಇಲ್ಲದಿರೋ ಹವ್ಯಾಸ

ಗಳೆಲ್ಲ ಇಟ್ಕೊಂಡಿದ್ದ. ಜೊತೆಗೇ ಕೆಲಸದಲ್ಲಿ ತುಂಬಾ ಶಿಸ್ತಿನಿಂದ ಇರ್ತಿದ್ದ. Files ಎಲ್ಲಾ ಅವತ್ತಿಂದು ಅವತ್ತೆ clear ಮಾಡಿ ಇಟ್ಟಿರ್ತಿದ್ದ. ಆಕಸ್ಮಾತ್ ಆಗದಿದ್ದರೂ ಸಂಜೆ ಹೊತ್ತು ಕೂತೋ ಇಲ್ಲ ಬಾಸ್ ಪರ್ಮಿಷನ್ ತಗೊಂಡು ಬೆಳಿಗ್ಗೆ ಬೇಗ ಬಂದು ಮುಗಿಸಿ ಬಿಡುತ್ತಿದ್ದ. ಅಧಿಕಾರಿಗಳು ಬಂದರೆ ತುಂಬಾ Frank ಆಗೇ ಆಫೀಸಿನ ಹುಳುಕುಗಳನ್ನೆಲ್ಲಾ ಅವರ ಗಮನಕ್ಕೆ ತಂದುಬಿಡುತ್ತಿದ್ದುದರಿಂದಲೇ ತುಂಬಾ ಜನಕ್ಕೆ 'ಗೋಪಿ' ಅಸಹ್ಯವಾಗಿದ್ದ. ಅಸೂಯೆಯಿಂದ ಅವನನ್ನು ಸಿಕ್ಕಿಸುವುದಕ್ಕೆ ಶತ ಪ್ರಯತ್ನ ಮಾಡಿದ್ರೂ ಆಗುತ್ತಿರಲಿಲ್ಲ. ಹಳೇ Bossಗೆ ಅದಕ್ಕೇ ಗೋಪೀನ ಕಂಡರೆ ತುಂಬಾ ಇಷ್ಟ-ಮನಸ್ಸು ಮೃದುವಾಗಿದ್ದರೂ ಮಾತು ಕ್ರೂರವಾಗಿ ಇರುತ್ತಿತ್ತು. ಅವನ ಒಂದೊಂದು ಅಕ್ಷರಾನೂ ಎದುರಾಳಿಗಳಿಗೆ ಖಾರವಾಗಿ ಇರುತ್ತಿತ್ತು. ಅದಕ್ಕೇ ಗೋಪಿಗೆ ಸ್ನೇಹಿತರ ಬರ. ಸ್ನೇಹಿತರು ಬೇಕೂಂತ ಬಯಸಲೂ ಇಲ್ಲ ಗೋಪಿ.

ಮಾಲತಿಗೆ ಇದೇ ಗೋಪಿಯ ಮನಸ್ಸತ್ವಗಳು ಹೆಚ್ಚು ಸಾಮಿಪ್ಯಕ್ಕೆ ದಾರಿ ಅವಳಿಗೆ ಇವನ ಈ ಸಾಮಾನ್ಯ ನಂಬಿಕೆಗಳಿಗಿಂತ ಬೇರೇನೂ ಬೇಕಿರಲಿಲ್ಲ. ಇವರಿಬ್ಬರ ಪರಿಚಯ ಆದದ್ದೂ ಒಂದು ವಿಚಿತ್ರ ರೀತಿಯಲ್ಲಿ.

ಮದುವೆಯಾದ ಹೊಸದಿನಗಳು. ಮಾಲತಿಯ ಮನಸ್ಸು ಗರಿಗೆದರಿ ಹಾರಾಡುವಷ್ಟು ಹಗುರವಾಗಿರುತ್ತಿತ್ತು. ಸುಂದರ ಕಲ್ಪನೆಗಳ ಬೆನ್ನು ಹತ್ತುವುದರಲ್ಲಿ ಆಫೀಸಿನ ಕಹಿ ಅನುಭವಗಳು ಮರೆತು ಹೋಗುತ್ತಿದ್ದವು. ಆದಷ್ಟೂ ಆ ಕಹಿಯನ್ನು ಆಫೀಸಿಗೆ ಸೀಮಿತಗೊಳಿಸಬೇಕೆಂಬ ನಿರ್ಧಾರ ವನ್ನು ಮಾಡಿದ್ದಳು.

ಸಂಜೆ ಐದರ ಮೇಲೆ ಆಫೀಸಿನ executive ಮೀಟಿಂಗಿತ್ತು. ಮಾಲತಿ ಸ್ಟೆನೋ ಆಗಿದ್ದುದರಿಂದ Boss ಜೊತೆಗೇ ಇದ್ದು ಮೀಟಿಂಗ್‌ನ Proceding Resolutions ಎಲ್ಲವನ್ನೂ ರೆಕಾರ್ಡ್‌ಮಾಡ್ಬೇಕಿತ್ತು. ಸಂಜೆ ಬರುವುದು ತಡವಾಗುತ್ತೇಂತ ಮನೆಯಲ್ಲಿ ಹೇಳಿದ್ದ ಸುಮಾರು 7 ಗಂಟೆ ಹೊತ್ತಿಗೆ ಆಫೀಸ್ ಬಳಿ ಬರಬೇಕೆಂದು ಗಂಡನಿಗೆ ಹೇಳಿದ್ದಳು.

ತಿಳಿ ನೀಲಿ ಸೀರೆಯುಟ್ಟು ಉದ್ದವಾಗಿ ಸೆರಗು ಬಿಟ್ಟಿದ್ದಳು. ಮೊದಲೇ ಉದ್ದ ಕೂದಲು ಜಡೆಗೆ ಸ್ವಚ್ಛ ಬಿಳುಪಿನ ಗುಲಾಬಿ ಮುಡಿದಿದ್ದಳು ಸಂಜೆ ಐದು ಗಂಟೆಗೆ ಆಫೀಸ್ ಮುಗಿದ ಮೇಲೆ ಲೇಡೀಸ್ ರೂಂಗೆ ಹೋಗಿ ನೀಟಾಗಿ ಬಾಚಿ ಹೆರಳು ಹೆಣೆದುಕೊಂಡಳು. ಪರ್ಸ್ ಒಳಗಿಂದ compact powder ಬಳಿದುಕೊಂಡಳು. ಹರಡಿದ ಕಣ್ಣು ಕಾಡಿಗೆಯನ್ನು ಕರವಸ್ತ್ರದಿಂದ ಒರೆಸಿ, ಹೊಸದಾಗಿ ಉಗುರಿನಿಂದಲೇ ಬ್ರಷ್‌ಗಿಂತ ನೀಟಾಗಿ ಕಾಡಿಗೆ ತೀಡಿದಳು. High heels ಚಪ್ಪಲಿ ಯೇರಿಸಿ ಹೆಜ್ಜೆಯಿಡುತ್ತಾ ಹೊರಟರೆ ಅಪ್ರಯತ್ನವಾಗಿ ಹೆಣ್ಣು ಗಂಡು ಭೇದವಿಲ್ಲದೆ ಎಲ್ಲರ ಕಣ್ಣೂ ಇವಳೆಡೆ ತಿರುಗಿ ಅರಳುತ್ತಿದ್ದುವು

ಮೀಟಿಂಗ್ ಹಾಲೊಳಗೆ ಕಾಲಿಡುತ್ತಿದ್ದಂತೆಯೇ ಬಾಸ್ ಪ್ರಶಂಸಾತ್ಮಕವಾಗಿ ನೋಡಿದ. ಅವಳಂದವನ್ನು Acknowledge ಮಾಡಿದನೇ ಹೊರತು ಆ ದೃಷ್ಟಿಯಲ್ಲಿ ಹೊಲಸು ವಾಸನೆಯಿರಲಿಲ್ಲ. ಇಂಥ ಸೆಕ್ರೆಟರಿ ಇರುವುದು ಹೆಮ್ಮೆ ವಿಷಯ ಅನ್ನೋ ಹಾಗೆ ವರ್ತಿಸಿದ.

ಒಬ್ಬೊಬ್ಬರೇ ಬರತೊಡಗಿದರು. ಮಾಲತಿ ತನ್ನ ಜಾಗದಲ್ಲಿ ಪೇಪರ್ ಪೆನ್ ರೆಡಿ ಮಾಡಿಕೊಂಡು ಕುಳಿತಳು. ಕಂಪೆನಿಯ ಆಯವ್ಯಯ ಪ್ರಗತಿಗೆ ಮುಂದು ಕೈಗೊಳ್ಳಬೇಕಾದ ಯೋಜನೆಗನು—ಎಲ್ಲಾ ವಿಚಾರಗಳೂ ಚರ್ಚೆಗೆ ಬಂದುವು. ಒಮ್ಮತ ನಿರ್ಣಯಗಳಿಗೆ ಬರುವುದು ಸ್ವಲ್ಪ ಕಷ್ಟವೇ ಆಯಿತು. ಎಲ್ಲಾ ಮುಕ್ತಾಯವಾಗುವಷ್ಟು ಹೊತ್ತಿಗೆ ನಿರೀಕ್ಷಿಸಿದ್ದಕ್ಕಿಂತ ಹೆಚ್ಚಿನ ವೇಳೆಯಾಗಿ ಹೋಗಿತ್ತು. ಸಂದೀಪ್ (ಮಾಲತಿಯ ಗಂಡ)ನಿಗೇನೋ 7 ಗಂಟೆಗೆ ಬರ ಹೇಳಿದ್ದಳು. ಆದರೆ ಎಂಟು ಗಂಟೆ ಆಗಿದೆ. ಎಂದೂ ಇಷ್ಟು ತಡವಾಗಿರ್ಲಿಲ್ಲ. ಸಂದೀಪ್ ಬಂದು ಕಾದಿದ್ದರೆ ಸರಿ ಹೋಗುತ್ತೆ, ಇಲ್ಲದಿದ್ದರೆ ತನ್ನ ಗತಿ ? ಸಂದೀಪ್ ಬಂದೇ ಬರುತ್ತಾನೆ—ಅನ್ನೋ ಭರವಸೆಯೇನೋ ಇದ್ದೇ ಇತ್ತು. ಗೇಟು ದಾಟಿ ಮುಂದಿನ ಫುಟ್‌ಪಾತ್ ಮೇಲೆ ನಿಂತಳು. ಸುತ್ತಲೂ ನೋಡಿದಳು. ಸಂದೀಪ್ ಎಲ್ಲಿಯೂ ಕಾಣಲಿಲ್ಲ. ಯಾಕೋ ಎದೆ ಡವಗುಟ್ಟತೊಡಗಿತು. ತನ್ನುಸಿರಾಟದೊಂದಿಗೆ ಸಣ್ಣದಾಗಿ ಇನ್ನೊಬ್ಬರ ಉಸಿರಾಟ ಕೇಳಿಸಿತು. ಹೊಟ್ಟೆಯತ್ತ ದೃಷ್ಟಿ ಹರಿಸಿ ಮುಸಿನಗೆ ನಕ್ಕಳು.

ಸ್ವಲ್ಪ ಮನಸ್ಸಿಗೆ ಹಿತ ಅನ್ನಿಸಿತು ಏನೋ ಮಧುರ ಅನುಭವ ? ಇನ್ನೂ ಸ್ವಲ್ಪ ದಿವಸ ಹೋದ ಮೇಲೆ Surprise ಕೊಡಬೇಕಂತ ಅಂದು ಕೊಂಡದ್ದರಿಂದ ಸಂದೀಪನಿಗೆ ಹೇಳಿರಲಿಲ್ಲ. ಅಕಸ್ಮಾತ್ ಹೇಳಿದರೂ ಅವನ ಕುಚೇಷ್ಟೆಗಳು ಸಹಿಸುವುದಕ್ಕೆ ಆಗುತ್ತಿರಲಿಲ್ಲ. ಅಮ್ಮನಿಗೇ ಅಂಟಿ ಕೊಂಡಿರುವ ಮಗುವಿನ ಹಾಗೆ ಸಂದೀಪ್ ತನಗೆ ಬೆನ್ನು ಬೀಳುತ್ತಿದ್ದ, ಆಫೀಸಿನಲ್ಲಿ ಇರುವಷ್ಟು ಕಾಲ ಅದು ಹೇಗೆ ತನ್ನನ್ನು ಬಿಟ್ಟಿರುತ್ತಾನೋ, ಅಂತ ಆಶ್ಚರ್ಯವಾದರೆ ಇನ್ನೊಂದು ಕಡೆ ಪಾಪ! ಎನ್ನಿಸಿತ್ತು. ಹೀಗಿರೋ ಸಂದೀಪ್ ತನ್ನನ್ನು ಕರೆದುಕೊಂಡು ಹೋಗೋದಕ್ಕೆ ಯಾಕೆ ಬರಲಿಲ್ಲವೋ' ಎಂದು ಚಿಂತಿಸುತ್ತಿತ್ತು ಮಾಲತಿಯ ಮೆದುಳು. ಆಫೀಸಿ ನಿಂದ ಬರುವುದು ಒಂದೈದು ನಿಮಿಷ ತಡವಾದರೆ ಏನೋ ಆಗಿ ಹೋದವರ ಹಾಗೆ ಆಡ್ತಿದ್ದ...ಇರಲಿ ಇವತ್ತು ಮನೆಗೆ ಹೋದ್ಮೇಲೆ ಮಾತೇ ಆಡಿ ಸೋಲ್ಲ. ಹೇಳ್ತೀನಿ ನಿನ್ನ ಪ್ರೀತಿ ಎಲ್ಲಾ ನಾಟಕ. ನಿನ್ಮೇಲೆ ನನಗೆ ನಂಬಿಕೆಯಿಲ್ಲ. ನಿನ್ನೊಂದಿಗೆ ನಾನು ಇರೋದೇ ಇಲ್ಲ' ಅಂತ ಹಟ ಹಿಡೀತೀನಿ. ಆಗ ಗೊತ್ತಾಗುತ್ತೆ ಕಾಲು ಹಿಡಿದರೂ ಮೂರು ದಿವಸ ಮಾತಾಡದೆ ಆಟ ಆಡಿಸ್ತೀನಿ'—ಅಂತ ಏನೇನೋ ಸೇಡು ತೀರಿಸಿಕೊಳ್ಳುವ ವಿಧಾನಗಳನ್ನು ಆಲೋಚಿಸಿದಳು... ಗಂಟೆ ನೋಡಿದರೆ 9 ಆಯಿತು. ಅಲ್ಲಿಗೆ ಬಂದು ನಿಂತು ಒಂದು ಗಂಟೆಯಾಯ್ತು. ಇನ್ನು ಬರುವ ಭರವಸೆ ಯಿಲ್ಲ....ಒಂದು ಮನಸ್ಸು ಆಲೋಚಿಸಿತು. ಬರುವ ತನಕ ಎಷ್ಟು ಹೊತ್ತಾದರೂ ಇಲ್ಲಿಯೇ ಸಾಯ್ತಾ ಬಿದ್ದಿರೋಣ. ತುಂಬಾ ಹೊತ್ತಾಗೋ ತನಕ ಮನೆ ಸೇರದಿದ್ರೆ ಹುಡುಕಿಕೊಂಡು ಬಂದೇ ಬರ್ತಾನೆ ಹುಚ್ಚು ಹಟ ತಲೆ ಹೋಗುತ್ತಿತ್ತು. ಹೆಂಗಸು ಅಷ್ಟು ಹೊತ್ತು ಅದೂ ನೀರೆರೆದು ಕೊಂಡವಳು. ಅಲ್ಲಿ ಮರಗಳಡಿಯಲ್ಲಿ ಇರುವುದು ಸರಿಯಲ್ಲ ಅನ್ನೋ ವಿವೇಕ ಮರೆತು ಹೋಗಿದ್ದಳು. ಜಗುಲಿಯ ಹಾಗೆ ಚಾಚಿದ್ದ ಗೋಡೆಯ ಮೇಲೆ ಕುಳಿತುಕೊಂಡಳು. 9-30 ಆಯ್ತು. ಆಗ ತಾನೇ ಸಿನಿಮಾ ಬಿಟ್ಟಿದ್ದರು. ತನಗೆ ಪರಿಚಯುದವರ್ಯಾರಾದರೂ ಸಿಕ್ಕುತ್ತಾರೇನೋ ಎಂದು ನೋಡಿದಳು. ದೂರದಲ್ಲಿ ವ್ಯಕ್ತಿಯ ನೆರಳೊಂದು ಚಲಿಸುತ್ತಾ ಇವಳೆಡೆಗೆ ಬರುವಂತಿತ್ತು. ಕತ್ತಲಲ್ಲಿ ಯಾರೆಂದು ಗುರುತು ಹತ್ತದೆ

ಸ್ವಲ್ಪ ಸ್ವಲ್ಪವಾಗಿ ಕಾಲು ಕಂಪಿಸತೊಡಗಿತು. ತಲೆ ಸುತ್ತು ಬರುವಂತಾಯಿತು. ಹೊಟ್ಟೆಯಲ್ಲಿ ಸಂಕಟ. ಕ್ರಮೇಣ ನೋವಿಗೆ ತಿರುಗಿತು ಏನೋ ಭೀತಿ. ಕಪ್ಪನೆಯ ಆಕಾರದ ಆ ನೆರಳು ವ್ಯಕ್ತಿ ಹತ್ತಿರ ಬಂದಾಗ ಕಂಬದ ಬೆಳಕು ಬಿದ್ದು ಗೋಪಿ ಎಂಬುದು ಗೊತ್ತಾಯಿತು. ಸ್ವಲ್ಪ ಸಮಾಧಾನವಾಯಿತು. ಆದರೆ ಗೋಪಿಗೆ ಮಾತ್ರ ಮಾಲತಿ ಇಷ್ಟು ಹೊತ್ತಿನಲ್ಲಿ ಇನ್ನೂ ಆಫೀಸ್ ಬಳಿ ಒಬ್ಬಳೇ ಇದ್ದುದು ತೀರಾ ವಿಚಿತ್ರವೆನಿಸಿತು.

ಹೊಟ್ಟೆ ಹೊಸಕಿಕೊಳ್ಳೋಣ ಎನಿಸುವಂತಾಗುತ್ತಿತ್ತು. ಮುಖ ಬರಬರುತ್ತಾ ಕಪ್ಪಿಡತೊಡಗಿತು. ಗೋಪಿ ಮಂದ ಬೆಳಕಲ್ಲಿ ಅವಳ ಮುಖವನ್ನು ಗಮನಿಸಿದ. 'ಯಾಕೆ ಇಷ್ಟು ಹೊತ್ತಲ್ಲಿ ಈ ಸ್ಥಿತೀಲಿ ಇಲ್ಲಿ ನಿಂತಿದ್ದೀರಿ ಮೇಡಂ' ಅಂತ ಕೇಳೋಣಾಂತ ಅನಿಸಿದರೆ ಅವಳು ಪಡುತ್ತಿರುವ ಬಾಧೆ ನೋಡಿ ಗೋಪಿಗೆ ಏನೂ ತೋಚದಾಯಿತು. ಅವಳ ಒದ್ದಾಟ ಕರುಳು ಹಿಂಡುವಂತಾಗುತ್ತಿತ್ತು. 'ಮೇಡಂ, ಮೇಡಂ, ನಾನು ಗೋಪಾಲ. ಇಲ್ಲಿ ನೋಡಿ. ನಿಮ್ಮನ್ನು ಮನೆ ತಲುಪಿಸುತ್ತೇನೆ. ನಂ ಜೊತೆ ಬನ್ನಿ' ಎಂದು ಕರೆದ. ಮಾಲತಿಗೆ ಉತ್ತರಿಸುವಷ್ಟು ಶಕ್ತಿ ಇಲ್ಲದಾಗುತ್ತಿತ್ತು. ಮೌನ ಬಾಧೆ ನೋಡಿ, ಇನ್ನು ಬೇರೆ ದಾರಿ ಕಾಣದೆ ಹತ್ತಿರದಲ್ಲಿ ಸುಳಿದ ಆಟೋವನ್ನು ಕರೆದು ಹತ್ತಿಸಿದ. ತಾನೂ ಒಳಗೆ ಕುಳಿತುಕೊಳ್ಳುವುದು ಅನಿವಾರ್ಯವಾಗಿದ್ದರೂ ಮನಸ್ಸಿಗೆ ಯಾಕೋ ಅಳುಕು. ಯಾರಾದರೂ ನೋಡಿದವರು ಏನಂದುಕೊಂಡಾರು? —ಅನ್ನೋ ಕಳವಳ. ದೇವರೇ! ಕಾಪಾಡು' ಎಂದು ಮೊರೆಯಿಟ್ಟು ಕೊಂಡು ಹತ್ತಿದ. ಆಟೋ ಡ್ರೈವರ್ 'ಎಲ್ಲಿಗೆ ಸಾರ್' ಎಂದು ಕೇಳಿದ. ಗೋಪಿಗೆ ಮಾಲತಿಯ ಮನೆ ಗೊತ್ತಿಲ್ಲ. ಮಾಲತಿಯನ್ನು ಮಾತಾಡಿಸಿದರೆ ಮಾತಾಡುತ್ತಿಲ್ಲ. ವಿಪರೀತ ನೋವಿನಿಂದಾಗಿ ಪ್ರಜ್ಞೆ ತಪ್ಪಿದಂತಾಗಿತ್ತು. ಗೋಪಿಗೆ ಗಾಬರಿಯಾಯಿತು ಎಲ್ಲಿಂದು ಅವರ ಮನೆ ಹುಡುಕೋದು ? ಯಾರನ್ನು ವಿಚಾರಿಸುವುದು ?' ಒಂದೂ ಬಗೆ ಹರಿಯುತ್ತಿಲ್ಲ.... 'ಎಲ್ಲಿಗೆ ಸಾರ್'—ಮತ್ತೊಮ್ಮೆ ಡ್ರೈವರ್‌ನ ಧ್ವನಿ ಪ್ರಶ್ನಿಸಿತು ....ಸಮಯ ಸ್ಫೂರ್ತಿಯಿಂದ ಹೇಳಿದ—'ಯಾವುದಾದರೂ ನರ್ಸಿಂಗ್

ಹೋಂ ಹತ್ತಿರದಲ್ಲಿದ್ದರೆ ನಡೆಯಪ್ಪ ಡ್ರೈವರ್ ಯೋಚಿಸಿ, 'ಇಲ್ಲೇ ಒಂದೆರಡು ಫರ್ಲಾಂಗ್ ದೂರದಲ್ಲಿ 'ನಂದಿನಿ ನರ್ಸಿಂಗ್ ಹೋಂ ಇದೆ. ಅಲ್ಲಿಗೆ ಬಿಡ್ಲಾ ಸಾರ್' ಎಂದ. ಯಾವುದಾದರೂ ಸರಿ ಬೇಗ ನಡೆ ಅಂತ ಗೋಪಿ ಆತುರ ಪಡಿಸಿದ.

ನರ್ಸಿಂಗ್ ಹೋಂ ಬಾಗಿಲು ಮುಚ್ಚಿತ್ತು. ಹೊರಗೆ ಘೂರ್ಕ ನಿಂತಿದ್ದ ತುಂಬಾ ಅರ್ಜೆಂಟ್ ಕೇಸ್ ಒಳಗೆ ಬಿಡು ಅಂತ ಕೇಳಿದ್ದಕ್ಕೆ ಅವನು ಒಳಗೆ ಹೋಗಿ ಒಂದೆರೆಡು ನಿಮಿಷದಲ್ಲಿ ಬಂದು ಇವರನ್ನು ಕರೆದು ಕೊಂಡು ಹೋದ. ಗೋಪಿ ಆಟೋದವನಿಗೆ ಮೀಟರ್ ಛಾರ್ಜು ಕೊಡುತ್ತಾ ಥ್ಯಾಂಕ್ಸ್ ಹೇಳ ಹೋದ. ಆದರೆ ವಿಚಿತ್ರವಾಗಿ ಆಟೋ ದವನು ದುಡ್ಡು ತೆಗೆದುಕೊಳ್ಳದೆ 'ಬೇಡ ಸಾರ್. ಪಾಪ ಪೇಶಂಟ್ ತುಂಬಾ ಸೀರಿಯಸ್ಸಾಗಿ ಇರೋ ಹಾಗಿದೆ. ನೀವು ಅವರನ್ನು ಚೆನ್ನಾಗಿ ಗಮನಿಸಿಕೊಳ್ಳಿ—ಅಂತ ಹೇಳಿ ಗೋಪಿಯ ಮಾತಿಗೂ ಅವಕಾಶ ಕೊಡದೆ ಗಾಡಿ ಸ್ಟಾರ್ಟ್ ಮಾಡಿದ. ಗೋಪಿ ತಬ್ಬಿಬ್ಬಾದ. ಅವನ ವರ್ತನೆ ಅವನಿಗೆ ತೀರಾ ವಿಚಿತ್ರ ಅನ್ನಿಸಿತು. ಹೊತ್ತಲ್ಲದ ಹೊತ್ತಲ್ಲಿ ಒಂದ ಕ್ಕೆರಡರಷ್ಟು ಮೀಟರ್ ಬಾಡಿಗೆ ಕೇಳೋ ಕಾಲದಲ್ಲಿ ಇವನೆಂಥಾ ಪೆದ್ದ. ಕೊಟ್ಟಿದ್ದನ್ನು ಬೇಡಾಂತಾನೆ, ಅನ್ನಿಸಿತು. ಘೂರ್ಕ ತಂದ wheel chair ನಲ್ಲಿ ಮಾಲತಿಯನ್ನು ಕೂಡಿಸಿದ ಘೂರ್ಕ ಆ ಚೇರನ್ನು ಸ್ವಲ್ಪ ದೂರ ತಳ್ಳಿಕೊಂಡು ಹೋಗಿ ನರ್ಸಿಂಗ್ ಹೋಂ ಆಯಾ ಕೈಗೆ ಒಪ್ಪಿಸಿದ. ಅವಳು Emergency ವಾರ್ಡೊಳಗೆ ಮಾಲತಿಯನ್ನು ಕರೆದುಕೊಂಡು ಹೋಗಿ ಮೊದಲ ಚಿಕಿತ್ಸೆಗಳನ್ನೆಲ್ಲಾ ಮಾಡಿ, Oxygen ಕೊಟ್ಟು ಹೊರಗೆ ಬಂದಳು. ಡಾ|| ಬರ್ತಾರೆ. ಈಗ ಫೋನ್ ಮಾಡಿದ್ದೇನೆ. ನೀವು ಕುಳಿತುಕೊಳ್ಳಿ ಎಂದು ಹೇಳಿ ಹೊರಟು ಹೋದಳು.

ಸ್ವಲ್ಪ ಹೊತ್ತಿಗೆ ಡಾ|| ಬಂದು ನೋಡಿದ ಮೇಲೆ, ಗೋಪಿಗೆ ಡಾ|| ಕರೆ ಕಳುಹಿಸಿದಳು ಗೋಪಿ ಡಾಕ್ಟರಿಗೆ ಮಾಲತಿಯ ವಿಚಾರವಾಗಿ ಎಲ್ಲ ಹೇಳಿದ. ನಾಳೆ ಆಫೀಸಲ್ಲಿ ಅಡ್ರೆಸ್ ತಿಳಿದುಕೊಂಡು ಅವರ ಮನೆಯವರಿಗೆ ತಿಳಿಸಿ ಆಕೆಗೆ ಸ್ಮೃತಿ ಬಂದರೆ ನಾನೂ ಕೇಳಿ, ಅವರ ಮನೆಯಲ್ಲಿ phone ಇದ್ದರೆ ಫೋನ್ ಮಾಡುತ್ತೇನೆ. ನೀವೇನೂ ಹೆದರಬೇಡಿ just simple

ಎಲ್ಲ ಸರಿಹೋಗುತ್ತೆ. ತುಂಬಾ ವೀಕ್ ಆಗಿ ಇರೋದ್ರಿಂದ ಹಾಗಾಗಿದೆ "ಅಷ್ಟೇ ಅಂತ ಧೈರ್ಯ ಹೇಳಿದ. ಮೇಲೆ ಮಾಲತಿಯನ್ನು ಇನ್ನೊಮ್ಮೆ ನೋಡಿ ಮನೆಗೆ ಮರಳಿದ.

*    *    *

ಸಂದೀಪನ ಹೆಣವನ್ನು ಎಷ್ಟು ಹೊತ್ತು ಹಾಗೆ ಇಟ್ಟಿರಬೇಕೋ ತಿಳಿಯಲ್ಲಿಲ್ಲ. ಒಂದು ಕಡೆ ಸಂದೀಪನ ಸಾವಿನ ನೋವಾದರೆ, ಮಾಲತಿ ಕಾಣದೆ ಹೋದದ್ದು ಇನ್ನೊಂದು ಭಯಂಕರ ಸುದ್ಧಿಯಾಗಿತ್ತು. ಒಬ್ಬೊಬ್ಬರು ಒಂದೊಂದು ಕಡೆ ಹುಡುಕಾಡಿದರೂ ಪ್ರಯೋಜನವಾಗ

ಬೆಳಗಾಗುವುದೇ ಆಫೀಸಿಗೆ ಫೋನ್ ಮಾಡಿದಾಗ ಆಶಾದಾಯಕ ಉತ್ತರವೇನೂ ಸಿಗಲಿಲ್ಲ- ಬಾಸ್ ಇನ್ನೂ ಬಂದಿನಲಿಲ್ಲ. ಮಾಲತಿಯ ವಿಚಾರವಾಗಿ ಆಫೀಸಿನಲ್ಲಿ ಗುಲ್ಲೋಗುಲ್ಲು, ಪರವಾಗಿ ಕೆಲವರು ಮಾತ ನಾಡಿದರೆ ಇಲ್ಲ ಸಲ್ಲದ ಊಹಾಪೋಹಗಳಿಂದ ಕತೆ ಕಟ್ಟಿ ಅವಳ ನಡತೆಯ ಬಗ್ಗೆ ಕ್ಷುಲ್ಲಕವಾಗಿ ಮಾತನಾಡುತ್ತಾ ನಾಲಗೆಯ ತೀಟೆ ತೀರಿಸಿಕೊಂಡರು.

ಗೋಪಿ ಬೆಳಿಗ್ಗೆ ನರ್ಸಿಂಗ್ ಹೋಂಗೆ ಹೋಗಿದ್ದ ಮಾಲತಿಗೆ ಗೋಪಿ ಯನ್ನು ನೋಡುತ್ತಿದ್ದ ಹಾಗೆ ಅಳು ಉಕ್ಕಿ ಬಂತು. ಎಷ್ಟು ಅಸಹ್ಯ ವಾಗಿ ನಡೆದುಕೊಂಡೆ ! ಆ ಗೋಪಿ ನನ್ನ ವಿಚಾರದಲ್ಲಿ ಹೇಗೆ ಭಾವಿಸಿರ ಬೇಕು. ತಾನು ಸಂದೀಪ್‌ನಿಗೆ ಕಾದಿದ್ದು. ಹೊಟ್ಟೆ ಬೇನೆ ಶುರುವಾದು ದ್ದರ ನೆನಪು ಮಾತ್ರವೇ ಇತ್ತು. 'ಇಲ್ಲಿಗೆ ಹೀಗೆ ಬಂದೆ' ಎಂದು ಕೇಳ ಬೇಕೆನಿಸಿದರೂ ಕೇಳುವ ಮನಸ್ಸಾಗಲಿಲ್ಲ. ಮನೆಯವರ ಗಾಭರಿ ನೆನಪಿಗೆ ಬಂದು ಗಡಗಡನೆ ನಡುಗಿದಳು. Mr. ಗೋಪಿ, ಡಾಕ್ಟರ್ನ ಕೇಳಿ ನನ್ನನ್ನು ಮನೆಗೆ ತಲುಪಿಸಿ. ನಾನು ಸಂದೀಪನನ್ನು ನೋಡಲೇಬೇಕು. ಯಾಕೋ ನನ್ನ ಮನಸ್ಸಿಗೆ ತುಂಬಾ ಭೀತಿಯಾಗ್ತಿದೆ' ಎಂದು ಅಂಗಲಾ ಚಿದಳು. ಗೋಪಿ ಅವಳ ಮುಖ ನೋಡಿದ. ಮುದುಡಿದ್ದ ಗುಲಾಬಿ ಯಷ್ಟೇ ಬಾಡಿದ ಮುಖ. ಹೊರಳಾಡಿ ಅಸ್ತವ್ಯಸ್ತವಾದ ಕೂದಲು ಬಿಳಿಯ ಮುಖದ ಮೇಲೆ ಬಿದ್ದಿದ್ದರಿಂದ ಮುಖ ಅಸ್ಪಷ್ಟ ಚಂದ್ರನ

ಹಾಗಿತ್ತು. ನೋಡಿದರೆ ತುಂಬಾ ವೀಕಾಗಿದ್ದ ಅವಳನ್ನು ಹೇಗೆ ಕರೆದು ಕೊಂಡು ಹೋಗುವುದು ? ಯೋಚಿಸಿದ ಗೋಪಿ. ಆದರೆ ಮನೆಯವರ ಕಳವಳದ ಗಂಭೀರತೆ ಮನಸ್ಸಿಗೆ ಬಂದ ಕೂಡಲೇ ಹೇಗಾದರೂ ಸುರಕ್ಷಿತ ವಾಗಿ ಮನೆ ತಲುಪಿಸಿದರೆ ತನ್ನ ಜವಾಬ್ದಾರಿ ತೀರುತ್ತದೆಂದು ಭಾವಿಸಿ, ಡಾಕ್ಟರ ಬಳಿಗೆ ಬಂದು ಮಾಲತಿಯನ್ನು ಕಳುಹಿಸಿಕೊಡಲು ಕೇಳಿ ಅವಳ ವಿಷಯವನ್ನು ಪೂರ್ತಿಯಾಗಿ ತಿಳಿಸಿದ.

ಡಾಕ್ಟರೂ ಒಪ್ಪಿದರು. ಗೋಪಿ ಬಿಲ್ ಹಣವನ್ನು ಕೊಟ್ಟು ಮಾಲತಿಗೆ ವಿಷಯ ತಿಳಿಸಲು ನಡೆದ. "ತುಂಬಾ ಥ್ಯಾಂಕ್ಸ್ Mr. ಗೋಪಿ. ನಿಮ್ಮ ಉಪಕಾರಾನ ಎಂದೂ ಮರೆಯೋಲ್ಲ. ನನಗೆ ಆಟೋ ತರಿಸಿ ಕೊಡಿ ನಾನೇ ಹೋಗ್ತೀನೆ. ಈಗ ಅಷ್ಟೇನೂ ನನಗೆ ವೀಕ್‌ನೆಸ್ ಇಲ್ಲ. ಎಂದು ಮೆಲ್ಲನೆ ನಕ್ಕಳು. ಈ ನಗುವಿನ ಅರ್ಥ ಆಗ ಏನೆಂದು ಯಾರಿಗೂ ಊಹಿಸಿಕೊಳ್ಳಲಾಗುವುದಿಲ್ಲ. ಸಂದೀಪನೊಂದಿಗೆ ಸೇಡು ತೀರಿಸಿಕೊಳ್ಳುವು ದಕ್ಕೆ ಪೂರ್ವಭಾವಿ ಸಿದ್ಧತೆಯೋ ಅಥವಾ ಬದುಕಿನಲ್ಲಿ ನಗುವುದೇ ಕೊನೆ ಎಂದು ಅರ್ಥವೋ ತಿಳಿಯಲಿಲ್ಲ,

ಆಟೋ ಬಂದು ನಿಂತಿತು. ಡಾಕ್ಟರಿಗೆ ಗೋಪಿಗೆ ಥ್ಯಾಂಕ್ಸ್ ಹೇಳಿ ಆಟೋ ಹತ್ತಿದಳು. ಗೋಪಿ ತಾನು ಬಂದು ಬಿಡುತ್ತೇನೆಂದು ಎಷ್ಟು ಹೇಳಿದರೂ ಕೇಳಲಿಲ್ಲ. ಆಫೀಸಿಗೆ ತಾನು ಬರುವುದಿಲ್ಲವೆಂಬುದನ್ನು ತಿಳಿಸುವುದಕ್ಕೆ ಹೇಳಿ, ದಿಗ್ವಿಜಯವನ್ನು ಸಾಧಿಸಿದಷ್ಟು ಹೆಮ್ಮೆಯಿಂದ ಬೀಗಿ ಕುಳಿತು ಗೋಪಿಗೆ ಕೈ ಬೀಸಿ ಡ್ರೈವರ್‌ಗೆ "ಕಮಲಾಪಾರ್ಕ್ ರೋಡ್" ಎಂದಳು.

* * *

ಒಂದು ತಿಂಗಳು ರಜೆ ಮುಗಿಯಿತು. ಅವಳ ಮುಂದೆ ಒಂದು ಪ್ರಪಾತವೇ ಬಾಯಿ ತೆರೆದ ಹಾಗಿತ್ತು. ಸಂದೀಪನ ನೆನಪು ಕರಗುವುದು ಇಷ್ಟು ಬೇಗ ಸಾಧ್ಯವೂ ಇರಲಿಲ್ಲ. ತನ್ನ ಉತ್ಸಾಹ, ಖುಷಿ ಎಲ್ಲಕ್ಕೂ

ಪೂರ್ಣ ವಿರಾಮ. ಯಾಂತ್ರಿಕವಾಗಿ ಆಫೀಸಿನ ಕೆಲಸ ನಿರ್ವಹಿಸುತ್ತಿದ್ದಳು. ಸ್ಟಾಯಿಕ್ ಆಗಿ ಇರಬೇಕೆಂದು ಎಷ್ಟು ಪ್ರಯತ್ನಿಸಿದರೂ ಇನ್ನೂ ಹಸಿಯಾಗಿದ್ದ ನೆನಪುಗಳು ಮನಸ್ಸನ್ನು ಸಡಿಲಿಸುತ್ತಿತ್ತು. ಮೊದಲೇ ಸ್ಟ್ರಿಕ್ಟ್ ಆಗಿ ಇರುತ್ತಿದ್ದ ಮಾಲತಿ ಈಗ ಮತ್ತಷ್ಟು ಬಿಗಿಯಾದಳು. ಬಾಸ್ ಜೊತೆಗೆ ಕ್ಯಾಂಪುಗಳ ಮೇಲೂ ಹೋದಳು. ಮಾಲತಿಗೆ ಈ ಬಾಸ್‌ನ ಕಂಡರೆ ತುಂಬಾ ಗೌರವ. ಹರೆಯದಲ್ಲಿರುವ ತಾನು ಹೇಗೆ ಬಾಸ್ ಜೊತೆ ಹೋಗುವುದೆಂದು ಮೊದಮೊದಲು ಯೋಚಿಸಿದರೂ ಬಾಸ್‌ನೊಂದಿಗೆ ಪರಿಚಯ ಹೆಚ್ಚಾದ ಮೇಲೆ ನಿರ್ಭಯವಾಗಿ ಕ್ಯಾಂಪ್‌ನಿಗೆ ಹೋಗುತ್ತಿದ್ದಳು. ಬಾಸ್ ಅವಿವಾಹಿತ. ಹೆಣ್ಣಿನ ಬಗ್ಗೆ ಬಾಸ್‌ನ ವಿಚಾರಗಳು ಉದಾತ್ತವಾಗಿದ್ದವು. ಹೆಣ್ಣು ಕೇವಲ ಗಂಡಸಿನ ಅಲಂಕಾರ ವಸ್ತುವಾಗಲೀ ಅಥವಾ ಸೆಕ್ಸ್‌ಟಾಯ್ ಆಗಲಿ ಅಲ್ಲ. ಗಂಡಸಿನಷ್ಟೇ ಗೌರವ ಮಾನ್ಯತೆಗಳಿಗೆ ಪಾಲುದಾರಳಾಗಿರುವುದಲ್ಲದೆ ಸ್ವತಂತ್ರ ವಿಚಾರ ಶಕ್ತಿ, ವಿವೇಕ, ಹೃದಯಗಳಿರುವ ಮನುಷ್ಯಳು ಮದುವೆ ಆದಕ್ಕೇ ಅವನಿಗೆ ತ್ಯಾಜ್ಯ ವಿಷಯವಾಗಿತ್ತು. ಎಷ್ಟು ಓದಿದ್ದರೂ ಎಷ್ಟು ಪ್ರಗತಿಪರಳಾಗಿದ್ದರೂ ಹೆಣ್ಣು ಒಂದಲ್ಲ ಒಂದು ರೀತಿಯಲ್ಲಿ ಮದುವೆಯಿಂದ ಗುಲಾಮಳಾಗುತ್ತಾಳೆಂದು ಭಾವಿಸಿದ್ದ. ಹೆಣ್ಣು ಭೋಗದ ವಸ್ತುವಾಗಿರುವುದಕ್ಕಿಂತ ಹೆಚ್ಚಾಗಿ ಸೃಷ್ಟಿಯ ಅದ್ಭುತ ಕಲಾಕೃತಿ ಅನ್ನೋ ಭಾವನೆಯಿತ್ತು. ಒಂದೊಂದು ಸಲ ಬಾಸ್ ಮಾತಾಡುತ್ತಿದ್ದರೆ ಮಾಲತಿಗೆ ಚಪ್ಪಾಳೆ ಹೊಡೆದು ಕುಣಿದು ಕುಪ್ಪಳಿಸಬೇಕು ಎನಿಸುತ್ತಿತ್ತು ; ಅಷ್ಟು ಮೃದು. ಒಂದೊಂದು ಅಕ್ಷರ ಒಂದೊಂದು ರಸಬಿಂದುವಾಗಿರುತ್ತಿತ್ತು. ಇವರ್‍ಯಾಕೆ ಈ ಶುಷ್ಕವಾದ ಆಫೀಸರ್ ಬದುಕಿಗೆ ಜೋತು ಬಿದ್ದಿದ್ದಾರೆ ? ಖಂಡಿತವಾಗಿಯೂ ಒಬ್ಬ ರಸಿಕ ಕವಿಯಾಗಿರುವುದಕ್ಕೆ ಲಾಯಕ್ಕಾಗಿದ್ದರಲ್ಲ !" ಎಂದು ಯೋಚಿಸುತ್ತಿದ್ದಳು. ಮಾಲತಿ ಬಾಸ್ ತುಂಬಾ ಚೆನ್ನಾಗಿ ಹೊಂದಿಕೆಯಾಗಿದ್ದರೆ, ಬೇರೆ ಯಾರಿಗೂ ಸರಿಹೋಗುತ್ತಿರಲಿಲ್ಲ. ಕೆಲಸದ ವಿಷಯದಲ್ಲಿ ತಾತ್ಸಾರದಿಂದ ಇರೋದಕ್ಕೆ ಈಗ ಯಾರಿಗೂ ಸಾಧ್ಯವಿರಲಿಲ್ಲ. ರೆಹನಾಗಂತೂ ಒಳಗೊಳಗೇ ಉರಿ. ಪತಂಗದ ಹಾಗೆ ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ

ಓಡಾಡುತ್ತಾ ಎಲ್ಲ ಬಾಸ್‌ಗಳನ್ನೂ ಬೆರಳಲ್ಲಿ ಕುಣಿಸುತ್ತಿದ್ದ, ಅವಳಿಗೆ ಈ ಬಾಸ್ ಬಂದದ್ದೇ ಬಾಲಕತ್ತರಿಸಿಕೊಂಡಂತಾಗಿತ್ತು. ಬಾಸ್ ಮಾಲತಿ—ಮಾಲತಿ ಗೋಪಿ—ಮಾಲತಿ ಗೋಪಿ, ಗೋಪಿ ಗೀತಾ....ಹೀಗೆ ಜೊತೆ ಕಟ್ಟಿ ತೀರಾ vulgar ಆಗಿ ಕತೆಗಳನ್ನು ಹಬ್ಬಿದರು. ಹೇಗಾದರೂ ಮಾಡಿ ಈ ಬಾಸ್‌ನ ವರ್ಗಾಯಿಸಬೇಕು. ಸಂಚಿಗೆ ಸಂಘ ಕಟ್ಟಿದರು. ಮಂತ್ರಿಗಳ ಪರಿಚಯದವರು ಮಂತ್ರಿಗಳ ಮೂಲಕ ಸನ್ನಾಹ ನಡೆಸಿದರು. 'ಮಂತ್ರಿ' ಅನ್ನೋ 'ದ್ವಕ್ಷ್ಯರ' ಬೀಜ ಮಂತ್ರಕ್ಕೆ ಶರಣು ಹೋದರೆ ಕೆಲಸ ಆಗದಿರುವುದು ಊಹೆಗೆ ಮೀರಿದ್ದು! ಅಂತೂ ಇಂತೂ ಅಂದು ಕೊಂಡಂತೆ ಹೊಸಬ ಬಂದ.

ವರ್ಷಗಳು ಉರುಳಿದವು. ಹೊಸ ಬಾಸ್ ಬಂದಿದ್ದಾನೆ. ಹುಡುಗು ಬುದ್ಧಿ, ಹೇಳಿದವರ ಮಾತೆಲ್ಲ ಕೇಳೋದು. ಚಾರ್ಜ್ ತೆಗೆದುಕೊಳ್ಳೋ ಮುಂಚೇನೆ ಎಲ್ಲರ ಜಾತಕಗಳ ಪರಿಚಯ ಮಾಡಿಸಿದ್ದಾರೆ. ಹೀಗೆ ಒಬ್ಬೊಬ್ಬರ ವಿಷಯದಲ್ಲೂ ಒಂದೊಂದು ಮನೋಭಾವ ಏರ್ಪಡಿಸಿಕೊಂಡಿ ದ್ದಾನೆ. ಪಿಂಟೋ, ಪೀಟರ್, ಆರ್ಮುಗಂ, ಕಮಲಾ, ರೆಹಾನಾ ಇವರಿ ಗೆಲ್ಲಾ ಸುಗ್ಗಿ. ಆಫೀಸಿಗೆ ಎಷ್ಟು ಹೊತ್ತಿಗಾದರೂ ಬರಬಹುದು. ಒಂದು ಸಹಿ ಹಾಕಿ ಕಾಫಿಗೆ ಹೋದರೆ ಎರಡು ಮೂರು ಗಂಟೆ ಬಿಟ್ಟು ಬರೋದು. ಪೀಟರ್ ಅಂತೂ ಬಾಸ್‌ನನ್ನು ಜೇಬಿನಲ್ಲಿ ಇಟ್ಟುಕೊಂಡಿ ದ್ದಾನೆ. ಬಾಸ್‌ನ ವಿಲಾಸಿ ಮನಸ್ಸಿಗೆ ರೆಹಾನಾ ತುಂಬ ಹಿಡಿಸಿದಳು. "She is very free, I love her very much" ಅಂತ ಪಬ್ಲಿಕ್ಕಾಗಿ ಸ್ತುತಿಮಾಡ್ತಿರ್ತಾನೆ.

ಇಂಥಾ ಬಾಸ್‌ಗೆ ತಾನು ಸ್ಟೆನೋ ಆಗಿ ಸೆಕ್ರೆಟರಿಯಾಗಿ ಕೆಲಸ ಮಾಡುವುದು ಕುತ್ತಿಗೆಗೆ ಬಂದ ಹಾಗಿದೆ. ಗಂಡಸಿನ ರಕ್ಷಣೆಯಿಲ್ಲದೆ ಪ್ರಪಂಚ ದಲ್ಲಿ ಅದೂ ಈ ರೀತಿಯ ವಿಷಜಂತುಗಳ ನಡುವೆ ಬಂದುದು ತೀರಾ ಪ್ರಯಾಸವೆಂಬ ಭಾವನೆ ಬಂದಾಗ ಸಂದೀಪನ ನೆನಪು ಮತ್ತೆ ಮತ್ತೆ ತಿವಿಯುತ್ತಿದೆ. ಸಂದೀಪ ಯಾಕೆ ಸಾಯಬೇಕಿತ್ತು' ಎಂದು ಯೋಚಿಸು ತ್ತಾಳೆ. ಸಾವು ಬದುಕು ನಮ್ಮ ಕೈಯಲ್ಲಿ ಇಲ್ಲವೆಂದು ತಿಳಿದಿದ್ದರೂ ವೃಥಾ ಸಂದೀಪದ ವಿಚಾರವಾಗಿ ಸಿಡಿಮಿಡಿಗೊಳ್ಳುತ್ತದೆ ಮನಸ್ಸು.

ಸಂದೀಪ ತಾನೇ ಸ್ವಇಚ್ಛೆಯಿಂದ ಸತ್ತ ಹಾಗೆ, ಸಾವಿನ ಅಪಾದನೆಯನ್ನು ಅವನ ಮೇಲೇ ಹಾಕುತ್ತಾಳೆ. ಒಂಟಿಯಾಗಿದ್ದಾಗ ಇಳಿದ ಬಸಿರಿನತ್ತ ದೃಷ್ಟಿ ಹರಿಸಿ, 'ಒಳ್ಳೇದೇ ಆಯಿತು. ಇದೊಂದು ಅವನ ಸ್ಮೃತಿಯಾಗಿ ಉಳಿದಿದ್ದರೆ, ಮರೆಯಬೇಕೆಂದರೂ, ಮರೆಯಲಾಗುತ್ತಿರಲಿಲ್ಲ' ಎಂದು ಗೊಣಗಿಕೊಂಡರೂ, ಪುಟ ಪುಟದು ಕೆನೆಯುತ್ತಾ ಬರುತ್ತಿರುವ ಮಗುವಿನ ಚಿತ್ರ ಕಣ್ಮುಂದೆ ಸುಳಿದಾಗ ಹೃದಯದ ಮೂಲೆಯಲ್ಲೆಲ್ಲೋ ಸಣ್ಣಗೆ ನೋವಾಗಿ ಕಣ್ಣು ಹನಿಯುತ್ತದೆ.

ಬಾಸ್‌ನ ಹಾವಳಿ ತುಂಬಾ ಹೆಚ್ಚಾಗುತ್ತಿತ್ತು. ವಿನಾ ಕಾರಣ ಸಿಡಿಮಿಡಿಗೊಳ್ಳುವುದು, ಡಿಕ್ಟೇಷನ್‌ನಲ್ಲಿ ತಪ್ಪುಗಳಿಲ್ಲದಿದ್ದರೂ ತಪ್ಪಿದೆ ಅಂತಾ ಕಿರುಚಾಡುವುದು, ಆಫೀಸ್ ಟೈಂಗೆ ಕರೆಟ್ಟಾಗಿ ಬರುತ್ತಿಲ್ಲಾಂತ ದೂರುವುದು—ಇದು ಮಾಮೂಲು ಕಾರ್ಯಕ್ರಮವಾಯಿತು. ಅದೂ ಮೊನ್ನೆ ನಡೆದ ಘಟನೆಯಿಂದ ಮತ್ತಷ್ಟು ಹೆಚ್ಚಾಯಿತು.

ಬಾಸ್ ಕ್ಯಾಂಪ್ ಕೆಲಸದ ಮೇಲೆ ಬರಬೇಕಂತ ಮಾಲತಿಗೆ ತಿಳಿಸಿದ ಸುದ್ದಿ ಕೇಳಿದಾಗಿನಿಂದ ವಿಪರೀತ ಭಯಕ್ಕಿಟ್ಟುಕೊಂಡಿತು. ತನಗೆ ಮೈ ಹುಷಾರಿಲ್ಲವಾದ್ದರಿಂದ ಬರಲಿಕ್ಕೆ ಆಗುವುದಿಲ್ಲವೆಂದು ಹೇಳಿದಳು. ಮೊದಲೇ ಬಾಸ್ ಹಠವಾದಿ. ಹೇಗಾದರೂ ಸರಿ ಬರಲೇಬೇಕು. ಇಲ್ಲ ಅವಳನ್ನು ಡಿಸ್‌ಮಿಸ್ ಮಾಡುತ್ತೇನೆಂದು ಬೆದರಿಸಿದ. ಯಾವುದಕ್ಕೂ ಬಗ್ಗದ ಮಾಲತಿ 'ಡಿಸ್ ಮಿಸ್' ಅನ್ನೋ ಶಬ್ದ ಕೇಳಿದ್ದೇ ಸೋತಳು. ಅಮ್ಮ ಅಪ್ಪ ಇಲ್ಲದ ಮಾಲತಿಗೆ ಮುದಿ ಅತ್ತೆ ಮಾವ ಇದ್ದರು. ಮಾವ ರಿಟೈರ್ಡ್ ಆಗಿದ್ದ. ಆ ಎರಡು ಮುದಿ ಜೀವಿಗಳಿಗೆ ಆಧಾರ ಮಾಲತೀನೇ. ಹೀಗಿರುವಾಗ ಕೆಲಸ ಹೋದರೆ ಬದುಕಿಗೆ ಮಾರ್ಗ? ಚಿಂತೆಗಿಟ್ಟುಕೊಂಡಿತು.

ಶನಿವಾರ ಮಧ್ಯಾಹ್ನ ಆಫೀಸ್ ಮುಗಿದ ಮೇಲೆ ಮಾಲತಿ ಗೋಪಿಯನ್ನು ಕಂಡು ವಿಷಯ ಹೇಳಿದಳು. ಗೋಪಿಗೂ ಈ ಬಾಸ್‌ನ ವಿಚಾರವಾಗಿ ಒಳ್ಳೇ ಅಭಿಪ್ರಾಯವೇ ಉಳಿದಿರಲಿಲ್ಲ. ಬಾಸ್ ಬಳಿ ಹೋಗಿ ಮಾಲತಿ ವಿಷಯವಾಗಿ ಮಾತನಾಡುವುದು ಮತ್ತೂ ಅಪಾಯ. ಈ ವಿಷಯದಲ್ಲಿ ಏನು ಹೇಳಲೂ ಆಗದೆ ತನ್ನ ಅಸಹಾಯಕತೆಯನ್ನು ವ್ಯಕ್ತ

ಪಡಿಸಿದ. ಈ ಒಂದು ಸಲ ಮಾಲತಿ Risk ತೆಗೆದುಕೊಳ್ಳದೆ ತಪ್ಪಿದಲ್ಲ' ಎಂದೆನಿಸಿ ಧೈರ್ಯವಾಗಿ ಹೋಗಿ ಬಾ. ಮುಂದೆ ಏನಾದರೂ ಆದರೆ, ಅವನೇನಾದರೂ ವಿಪರೀತವಾಗಿ ನಡೆದುಕೊಂಡರೆ, ಏನ್ಮಾಡಬೇಕು ಆಲೋಚಿಸೋಣ' ಅಂದ.

ಮಂಗಳವಾರ ಮಾಮೂಲಿನಂತೆ ಆಫೀಸಿಗೆ ಬಂದಳು. ತನ್ನ ಸೀಟಲ್ಲಿ ಕುಳಿತು ಹಳೆಯ ಡಿಕ್ಟೇಷನ್‌ನ ಟೈಪ್ ಮಾಡತೊಡಗಿದಳು. ಸ್ತಬ್ಧ ಮೌನ. ಆ ನಿಸ್ತಬ ತೆ ಹಿತವಾಗಿರಲಿಲ್ಲ. ಗುಡುಗು ಸಿಡಿಲು ಮಳೆಗೆ ಮೊದಲಿನ ಪ್ರಶಾಂತತೆಯಂತ್ತಿತ್ತು. ಬರುವ ಭಯಂಕರ ಘಟನೆಗೆ ನಾಂದಿಯಂತಿತ್ತು. ಈ ನಿಶ್ಯಬ್ಧತೆಯನ್ನು ಟೈಪ್‌ರೈಟರ್ ಕೀಗಳ ಟಕ್ ಟಕ್ ಟಕ್ ಶಬ್ಧವೊಂದೇ ಕೆಡಿಸುತ್ತಿದ್ದುದು. ಸೆಕ್ಷನ್‌ನಲ್ಲಿ ಯಾರೂ ಮಾತಾಡಿಸಲಿಲ್ಲ. ಆದರೆ ಮಾಲತಿ ಬಂದದ್ದು ಎಲ್ಲರ ಗಮನವನ್ನೂ ಸೆಳೆಯಿತು. ಒಬ್ಬೊಬ್ಬರೂ ಪರಸ್ಪರ ಅರ್ಥಗರ್ಭಿತವಾಗಿ ನೋಡಿಕೊಂಡರು.

"ಇವರೆಲ್ಲ ಯಾಕಿರಬಹುದು ಹೀಗೆ? ಅವರಿಗೇನಾದರೂ ವಿಷಯ ತಿಳಿಯಿತಾ?" ಎಂದು ಯೋಚಿಸುತ್ತಿರುವಷ್ಟರಲ್ಲಿ ಕಿಸಕಿಸ ನಗು ಕೇಳಿಸಿತು. ತಲೆಯೆತ್ತಿದಳು, ರೆಹನಾ ಪಿಂಟೋ ನಗುತ್ತಿದ್ದಾರೆ. ಸಿಟ್ಟು ನೆತ್ತಿಗೇರಿತು ಕೆನ್ನೆಗೆ ಛಳಿಸೋಣವೆನಿಸಿತು ಉದ್ವಿಗ್ನಳಾಗಿ ಗುಡುಗಿದಳು. 'stop that hateful laugh' ಎಂದೂ ಎಲ್ಲರೂ ಬೆಪ್ಪಾಗಿ ಇವಳತ್ತ ನೋಡಿದರು. ಪೀಟರ್ ಹಲ್ಲು ಕಿಸಿಯುತ್ತಾ ಅವರ ಪರವಾಗಿ "ನೀವು ಬಿಡಿ ಮೇಡಂ, ಅವರ ಪಾಡಿಗೆ ಅವರು ನಕ್ಕರೆ ನಿಮಗೇನಾಯಿತು! ನೀವು ಸೆಕ್ಷನ್ ಹೆಡ್ ಇರಬಹುದು, ಆದರೆ ನಮ್ಮ ಸ್ವಭಾವಗಳಿಗೆ ನೀವು ಹೆಡ್ ಅಲ್ಲ ನಮ್ಮ ವ್ಯಕ್ತಿತ್ವವನ ನೀವು command ಮಾಡಬೇಡಿ" ಎಂದು ವಾದಿಸಿದ. "ಆ ಪಾಠಾನ ನೀವು ನನಗೆ ಹೇಳಿಕೊಡಬೇಕಿಲ್ಲ. ಆಫೀಸಿನಲ್ಲಿ ನಿಮಗೆ ಇಷ್ಟ ಬಂದ ಹಾಗೆ ನಡೆದುಕೊಳ್ಳೋಕೆ ಇದು ಮನೆಯಲ್ಲ, ಆಫೀಸ್ ತಿಳೀತಾ? ಇಲ್ಲಿ ಬೇಕಾಗಿರೋದು ಶಿಸ್ತು, ಸಂಯಮ ಮರ್ಯಾದೆ, ವ್ಯವಹಾರ ಅರ್ಥವಾಯಿತಾ! ನಿಮ್ಮ ನಿಮ್ಮ ಕೆಲಸ ನೀವು ನೋಡ್ಕೊಳ್ಳಿ" ಎಚ್ಚರಿಸುವ ಧ್ವನಿಯಾಗಿತ್ತು. ರೆಹನಾಗೆ ಇವಳ ಸಿಟ್ಟು ಕಚಕುಳಿ

ಬಿಟ್ಟ ಹಾಗಿತ್ತು. ಎಲ್ಲರೂ ಒಟ್ಟಾಗಿ ಇವಳನ್ನು Attack ಮಾಡೋಕೆ ಮೊದಲೇ ತಯಾರಿ ಮಾಡಿಕೊಂಡಂತಿತ್ತು. ಎಲ್ಲ ಒಟ್ಟಿಗೆ ತಿರುಗಿ ಬಿದ್ದರು. "ನಮಗ್ಗೊತ್ತು ನಿಮ್ಮ ಶಿಸ್ತು ಮರ್ಯಾದೆ. ಮೊದಲಿದ್ದ ಬಾಸ್ ನೀವು ಹೇಳಿದ ಹಾಗೆ ಕುಣೀತಿದ್ದ. ನೀವೂ ಅದಕ್ಕೇ ತುಂಬಾ ಹೆಚ್ಚಿದ್ದಿರಿ. ಈ ಬಾಸ್‌ಗೆ ನಿಮ್ಮ ವಿಷಯ ಎಲ್ಲ ಗೊತ್ತಿದೆ. ನಮಗೂ ನಿಮ್ಮ ವಿಚಾರ ಎಲ್ಲಾ ಗೊತ್ತಿದೆ. ಅವತ್ತು ರಾತ್ರಿ ಗೋಪಿ ಜೊತೆ ತಿರುಗಾಡಿ ಆಸ್ಪತ್ರೆಗೆ ಹೋಗಿದ್ದು, ಗಂಡನನ್ನ ವಿಷಕೊಟ್ಟು ಕೊಂದು ಏನೂ ತಿಳೀದಂತೆ ಬಾಸ್‌ನ ಬುಟ್ಟೀಗೆ ಹಾಕ್ಕೊಂಡಿದ್ದು, ಸಾಲದ್ದಕ್ಕೆ ಈಗ ಈ ಬಾಸ್‌ನೂ ಹಾಗೇ ಕೈಯ್ಯಲ್ಲಿ ಇಟ್ಕೊಳ್ಳೋಕೆ ಮೊನ್ನೆ ಕ್ಯಾಂಪಿಗೆ ಹೋದಾಗ ಪ್ರಯತ್ನಿಸಿದ್ದು, ಎಲ್ಲಾ ಗೊತ್ತಿದೆ. ಸುಮ್ನೆ ನಮಗೆ ಬುದ್ಧಿ ಹೇಳೋಕೆ ಬರಬೇಡಿ

ಏನನ್ನಾದರೂ ಸಹಿಸಬಹುದು. ಆದರೆ ಇವರು ತನ್ನ ಶೀಲದ ಬಗ್ಗೆ ಕೀಟಲೆ ಮಾಡುತ್ತಿದ್ದಾರೆ. ಮನಸ್ಸು ಕುದಿಯತೊಡಗಿತು. ಹಲ್ಲು ಕಟ ಕಟ ಕಡಿದಳು. "ಓಹ್ ಇದನ್ನು ಸಹಿಸೋದು ಹೇಗೆ ದೇವರೇ" ಎಂದು ದೈನ್ಯವಾಗಿ ಮೊರೆಯಿಟ್ಟಳು. ಜ್ವಾಲಾಮುಖಿ ಮನಸ್ಸು ಸ್ಫೋಟಕ್ಕೆ ಸಿದ್ಧವಾಯಿತು ಒಬ್ಬೊಬ್ಬರ ತಲೆಯನ್ನು ಬಂಡೆಗಪ್ಪಳಿಸ ಬೇಕೆನಿಸಿತು. ಬುರುಡೆಗಳೊಳಗಿಂದ ಗುಂಡು ಹಾರಿಸಬೇಕೆನಿಸಿತು. ಇವರ ನಾಲಿಗೆಗಳನ್ನು ಕಿತ್ತು ಉರಿಯುವ ಚಿತೆಗೆ ಎಸೆಯಬೇಕೆನಿಸಿತು. ದೇಹದ ಒಂದೊಂದು ಭಾಗವನ್ನೇ ಮುರಿ ಮುರಿದು ಮೆಣಸಿನ ಖಾರ ಹಚ್ಚ ಬೇಕೆನಿಸಿತು. ಆದರೆ....ಆದರೆ.... ತನ್ನ ಅಧಿಕಾರ ಸೀಮಿತ. ಮೊದಲಿನ ಬಾಸ್ ಇದ್ದಿದ್ದರೆ ಇವರಿಗೆ ಬುದ್ಧಿ ಕಲಿಸಬಹುದಾಗಿತ್ತು. ಈ ಹೊಸ ಬಾಸ್ ಇದ್ದರೂ ಅಷ್ಟೇ ಇಲ್ಲದಿದ್ದರೂ ಅಷ್ಟೇ. ಮೊನ್ನಿನ ಘಟನೆ ಯಿಂದ ಮತ್ತಷ್ಟು ಮನಸ್ಸು ರೋಸಿ ಹೋಗಿತ್ತು. ಆರ್ಥಿಕ ಮುಗ್ಗಟ್ಟು ಇಲ್ಲದಿದ್ದರೆ ಎಂದೋ ರಾಜೀನಾಮೆ ಕೊಟ್ಟು ಹೊರಟು ಹೋಗು ತ್ತಿದ್ದಳು. ಈಗ ಇವರ ಮೇಲೆ ಹಾರಾಡಿದರೆ ಪ್ರಯೋಜನವಿಲ್ಲ ನನ್ನ ಕೋಪ, ಅಸಹಾಯಕತೆ ಇವರಿಗೆ ಮೋಜಾಗಿದೆ. ನಾನು ನೊಂದಷ್ಟ

ಈ ಈಡಿಯಟ್ಸ್‌ಗೆ ಖುಷಿಯಾಗುತ್ತೆ. ಏನೂ ಮಾಡಲಾಗದೆ ಹಲ್ಲು ಕಿತ್ತ ಹಾವಿನಂತೆ ಬುಸ್ ಎಂದು ಹೆಡೆ ಬಿಚ್ಚಿದಷ್ಟೇ ಸಪ್ಪಗೆ ಕುಸಿದಳು. ನಿನ್ನ ಆ ಸೀಟಲ್ಲಿ ಕುಳಿತುಕೊಳ್ಳುವುದಕ್ಕೇ ಸಾಧ್ಯವಾಗಲಿಲ್ಲ. ಮುಳ್ಳಿನ ಮೇಲೆ ಕುಳಿತಷ್ಟೇ ಹಿಂಸೆಯಾಗಿತ್ತು. ಈಗೊಂದು ವೇಳೆ ರಾಜೀನಾಮೆ ಕೊಡಲೇಬೇಕಾದ ಸಂದರ್ಭ ಬಂದರೆ....? ಭಯಂಕರ....ಒಂಟಿಯಾಗಿ ಸಹರಾದೊಳಗೆ ಅಲೆಯುತ್ತಿದ್ದಾಳೆ. ಬಿರುಗಾಳಿ....ಅವಳನ್ನು ಹಾರಿಸಿ ಕೊಂಡು ಹೋಗುವಷ್ಟು ಜೋರಾಗಿದೆ. ಬೀಸುವ ಗಾಳಿಯಲ್ಲಿ ಅಸಹ್ಯ ಕರ್ಕಶ ಶಬ್ದಗಳು ಕೇಳಿ ಬರುತ್ತಿವೆ. ಜೋರಾಗಿ ಒಮ್ಮೆ ಗಾಳಿ ಬೀಸಿತು. ಮಾಲತಿ ತರಗೆಲೆಯಂತೆ ಆ ಗಾಳಿಯಲ್ಲಿ ತೇಲುತ್ತಾ ಹೋಗುತ್ತಿದ್ದಾಳೆ. ಕೆಳಗೆ ಘೋರ ಕಂದಕಗಳು, ಪ್ರಪಾತಗಳು, ಕೆಳಗೆ ಕಣ್ಣು ಹಾಯಿಸಿದಾಗ ತಲೆ ಸುತ್ತಿ ಬರುತ್ತಿದೆ. ದೇವರೇ ಈ ಗಾಳಿ ಎಲ್ಲಿಗೆ ಕರೆದೊಯ್ದು ಅಪ್ಪಳಿಸುತ್ತೋ ಇಲ್ಲ ಯಾವುದಾದರೂ ಪ್ರಪಾತದಲ್ಲಿ ಎಸೆಯುತ್ತೋ ? ಗಾಳಿಯ ಬಿರುಸು ಕಡಿಮೆಯಾಯಿತು. ಹಾರಿಸಿಕೊಂಡು ಹೋಗುವುದಿಲ್ಲ. ನೆಲದ ಮೇಲೆ ಅದೂ ಓಯಸಿಸ್ ಇರೋ ಜಾಗದಲ್ಲೇ ಬೀಳುತ್ತೇನೆ' ಅನ್ನೋ ಭಾವನೆ ಬಲವಾಗುತ್ತಿದೆ. ಹೌದು ನಿಜ ನಾನಂದುಕೊಂಡಷ್ಟು ಪ್ರಕೃತಿ ವಿರೋಧವಾಗಿಲ್ಲ. ಇದೋ ಇಲ್ಲೇ ಇದೆ ಓಯಸಿಸ್' ಅಂತ ಕಣ್ಣು ಬಿಟ್ಟು ಸಮಾಧಾನದ ನಿಟ್ಟುಸಿರುಬಿಟ್ಟಳು.

ಜವಾನ ಬಂದು ಮಾಲತಿಯ ಟೇಬಲ್ ಮುಂದೆ ನಿಂತಿದ್ದಾನೆ. 'ಏನ್ಬೇಕು ರಾಮಯ್ಯ' ಅಂತ ಮೃದುವಾಗಿಯೇ ಕೇಳಿದಳು.

"ಬಾಸ್, ನಿಮ್ಮನ್ನ ಬಾ ಅಂತ ಕರೀತಾವ್ರೆ" ಎಂದ.

ರಾಮಯ್ಯನಿಗೆ ಅವಳನ್ನು ನೋಡುತ್ತಿದ್ದಂತೆ "ಅಯ್ಯೋ" ಎನಿಸಿತು. ಅವನಿಗೆ ಅವಳ ಬಗ್ಗೆ ಏನೋ ವಾತ್ಸಲ್ಯ. ಮೊದಲಿನಿಂದಲೂ ಅವಳನ್ನು ನೋಡುತ್ತಿದ್ದಾನೆ. ಯಾರು ಎಷ್ಟು ಹೇಳಿದರೂ ಮಾಲತಿಯ ಬಗ್ಗೆ ಆದರ ಪ್ರೀತಿ ಇದೆ. ಎಷ್ಟೋ ಸಲ ಸಿಡಿಮಿಡಿಗೊಂಡಿದ್ದಾಗ ಮಾಲತಿ, ರಾಮಯ್ಯ ಆಕೆನ ಸಮಾಧಾನ ಮಾಡಿ, "ಮಾಲತಮ್ಮ ನೀವು ಸುಮ್ಮನೆ ಇದ್ದು ಬಿಡಿ. ಇವರ ಸಹವಾಸ ಅಂದ್ರೆ ಹೇಲ ಮೇಲೆ ಕಲ್ಲು ಹಾಕಿ ಮುಖದ ಮೇಲೆ ಸಿಡಿಸಿಕೊಂಡ ಹಾಗೆ, ಕೆಟ್ಟ ಜನ ಗೋಳು.

ಒಳ್ಳೇ ಥರಾ ಇದ್ದರೇ ಈ ಆಫೀಸ್ನಾಗೆ ಉಳಿಯೋಲ್ಲ. ನಿಮ್ಮ ಪಾಡಿಗೆ ನೀವು ಕೆಲಸ ಮುಗಿಸ್ಕೊಂಡು ಒಂಟೋಗಿ. ಎಲುಬಿಲ್ಲದ ನಾಲಗೆ. ಏನೇನೋ ಮಾತಾಡ್ಕೊಳ್ತಾರೆ. ಒಳ್ಳೇವ್ರ ಯಾರ್ನೂ ಬಿಡಾಕಿಲ್ಲ ಇವ್ರು ಸುಂಕೆ ಉರಸ್ಕೊಳ್ತಾರೆ. ದೇವರಂಥಾ ಮನುಷ್ಯ ಗೋಪಣ್ಣ ಅವರ ಸಂಬ್ಳದಾಗೆ ಎಷ್ಟು ಅವ್ರು ಉಪಯೋಗಿಸ್ಕೊಳ್ತಾರೋ ಏನೋ, "ಅಯ್ಯೋ ಅಂದ್ರೆ" ಮೂತಿ ಮಕಾ ನೋಡ್ದೆ ಕೊಟ್ಬಿಡ್ತಾರೆ. ನಾನು ಬುದ್ಧಿ ಏಳಿದ್ರೆ, ನನಗ್ಯಾಕೆ ರಾಮಯ್ಯ, ನನಗೇನು ಎಂಡ್ತಿ ಮಕ್ಳು ಅಪ್ಪಾ. ಅಮ್ಮಾವ್ರಾ, ನಾನು ದುಡಿದು ಸಂಪಾದ್ಸೋದು ನನ್ನೊಬ್ಬನಿಗೆ ಜಾಸ್ತೀನೆ ಆಗುತ್ತೆ. ಅದಕ್ಕೆ ಯಾರಿಗೆ ಅಗತ್ಯ ಬೀಳುತ್ತೋ ಅವರಿ ಕೊಟ್ಬಿಡ್ತೀನಿ" ಅಂತ ಬಾಯ್ಮುಚ್ಚಿಸ್ಬಿಡ್ತಿದ್ರು! ಅಂತ ಹೇಳ್ತಾಲೇ ಇದ್ದ.

ಅಲ್ಲ ರಾಮಯ್ಯ, ಈಗಲೇ ಬರಬೇಕಂತೇನೂ ? ಒಂದೆರಡು ಲೆಟರ್ಸ್ ಟೈಪ್ ಮಾಡೋದಿದೆ, ಮಾಡ್ಬಿಟ್ಟು ಬರಲಾ ?

"ಬೇಡಿ ಅಮ್ಮ, ಈಗಲೇ ಸಾಹೇಬ್ರು ಬರೇಳಿದ್ದಾರೆ. ಯಾಕೋ ಧುಮಧುಮಾಂತ ಇದ್ರು. ಅವರೇನಾದರೂ ಮಾತಾಡಿದರೆ ತುಟಿ ಪಿಟಕ್ಕೆನ್ಬೇಡಿ ಸುಮ್ಕೆ ಇದ್ಬಿಡಿ. ಸಿಟ್ಟು ತಾನಾಗೇ ಇಳಿಯುತ್ತೆ" ಅಂತ ಮುನ್ನೆಚ್ಚರಿಕೆ ಕೊಟ್ಟು ತನ್ನ ಜೊತೆಗೆ ಕರೆದು ಕೊಂಡು ಹೋದ.

ಮಾಲತಿಗೆ ಗೊತ್ತಿತ್ತು ಈ ಹಗರಣ ಎಲ್ಲ ತಾನು ಅವನಿಗೆ ಬಗ್ಗದ್ದು ಹೆಣ್ಣು ಅನ್ನೋದು ಅಗ್ಗದ ಮಾಲು ಅಂದ್ಕೊಂಡಿರಬೇಕು. ಎಂದಾದರೂ ಒಂದು ದಿನ ಅವನಿಗೆ ಹೆಣ್ಣಿನ ಬಗ್ಗೆ ಇರೋ ಈ ಭಾವನೇನ ತಿದ್ದಿ ಬುದ್ಧಿ ಕಲಿಸಬೇಕಾಗಿತು. ಅದಕ್ಕೆ ಒಳ್ಳೆ ಅವಕಾಶ ಸಿಕ್ತು. ಸರಿಯಾಗಿ ಬುದ್ಧಿ ಕಲಿಸಿದ್ದೇನೆ ಅಂದುಕೊಂಡಳು. ಆದರೆ ಆವೇಶದಲ್ಲಿ ಹಾವಿನ ಜೊತೆಗೆ ಸೆಣಸಾಟವಾಡುತ್ತಿದ್ದೇನೆ. ಅನ್ನೋ ಪ್ರಜ್ಞೆ ಜಾರಿದಂತಿತ್ತು. ಚೆನ್ನಾಗಿ ಬಲ ಪ್ರಯೋಗಿಸಿ ಹಸಿದ ಹುಲಿ ಹಾಗೆ ಬಿದ್ದ ಬಾಸ್ ಕೆನ್ನೆ ಥಳಿಸಿದ್ದಳು ; ಬಹುಶಃ ಇನ್ನೂ ಮುದ್ರೆ ಇತ್ತೋ ಏನೋ ! ಹೊಸಾ ಬಾಸ್‌ಗೆ ಇದು ಭರಿಸಲಾಗದಿತ್ತು. ಮಾಲತಿ ಪರಿಣಾಮವನ್ನು ನಿರ್ಧರಿಸಿ ಕೊಂಡೇ ಒಳಗೆ ಹೋದಳು 'Good morning Sir'—ನಯವಾಗಿ

ನುಡಿದಳು Revolving hairನಲ್ಲಿ ಕುಳಿತಿದ್ದ ಬಾಸ್ ಗೋಡೆಯ ಕಡೆಗೆ ಮುಖ ತಿರುಗಿಸಿದ್ದ. ಮಾಲತಿಯ ಅಭಿವಂದನೆಗೆ ಉತ್ತರ ಬರಲಿಲ್ಲ. ಬಾಸ್ ಗಮನವನ್ನು ತಿರುಗಿಸಲು ಸಣ್ಣಗೆ ಕೆಮ್ಮಿದಳು. 'sit down silently' ಹುಂಕಾರದಿಂದ ನುಡಿದ. ಹಾಗೆಯೇ ಒಂದು ಕುರ್ಚಿ ಎಳೆದು ಕೊಂಡು ಕುಳಿತಳು. ರೊಯ್ಯೆಂತ ಕುರ್ಚಿಯನ್ನು ಇವಳಿಗೆ ಎದುರಾಗಿ ತಿರುಗಿಸಿದ. ಕಿಡಿಯುಗುಳುವಂತಿದ್ದ ಆ ಭಯಂಕರ ಕಣ್ಣುಗಳನ್ನು ನೋಡುತ್ತಿದ್ದ ಹಾಗೆ ಗುಂಡಿಗೆ ಬಡಿತ ನಿಂತ ಹಾಗಾಯಿತು. ಆದರೂ ಹೃದಯವನ್ನು ಒತ್ತಿ ಹಿಡಿದಳು. ಬಡಿತದ ವೇಗ ಹೆಚ್ಚುತ್ತಿತ್ತು. ಏನು ಕೇಳುತ್ತಾನೋ ಅನ್ನೋ ಕುತೂಹಲ. ರಾಮಯ್ಯನ ಕೆಮ್ಮು ಕೇಳಿಸಿತು. 'ಮಾಲತಮ್ಮ ಹೆದರ್ಬೇಡ. ಏನಾದರೂ ಹೆಚ್ಚು ಕಡಿಮೆ ಯಾದರೆ ನಾನು ನೋಡ್ಕೊಳ್ತೀನಿ' ಅನ್ನುವ ಅರ್ಥ ಇರೋ ಹಾಗಿತ್ತು! ಆ ಕೆಮ್ಮಿನ ಅರ್ಥ. ಸ್ವಲ್ಪ ಧೈರ್ಯ ಬಂತು. ಬಾಸ್‌ನ ಎದುರಿಸುವು ದಕ್ಕೆ ಸಿದ್ಧತೆಯನ್ನು ಮಾಡಿಕೊಂಡಳು. 'ಲೆಟರ್ಸ್ ಎಲ್ಲಾ ಟೈಪ್ ಮಾಡಿಯಾಯ್ತಾ—ಮೊಟುಕಾಗಿ ಪ್ರಶ್ನಿಸಿದ. 'ಒಂದೋ ಎರಡೋ ಉಳಿದಿದೆ ಸಾರ್—ವಿನಯವಾಗಿತ್ತು ಉತ್ತರ. 'ಅಪ್‌ಟು ಡೇಟ್ ಮಾಡ್ಬೇಕಂತ ಹೇಳಿರಲಿಲ್ಲ ನಿನಗೆ?.... ನನಗೊತ್ತು ನಿನಗೆಲ್ಲಿ ಬಿಡು ವಿರುತ್ತೆ? ಗಿರಾಕಿಗಳನ್ನು ಹುಡುಕುವುದಕ್ಕೇ ಸಾಕಾಗೊಲ್ಲ ನಿನಗೆ ಟೈಂ. ಆಫೀಸ್ ಕೆಲಸಕ್ಕೆ ಇನ್ನು ಹೇಗೆ ಸಾಕಾಗುತ್ತೆ?'—ವ್ಯಂಗ್ಯ ತುಂಬಿತ್ತು ಧ್ವನಿಯಲ್ಲಿ. ನಿನ್ಮೇಲೆ ನನಗೆ ಸಾಕಷ್ಟು ಕಂಪ್ಲೈಂಟ್ಸ್ ಬಂದಿದೆ. ನಿನ್ನ ಸಬಾರ್ಡಿನೇಟ್ಸೆಲ್ಲಾ, ನೀನು ಅವರ ಜೊತೆಗೆ ಡೀಸೆಂಟಾಗಿ ನಡಕೊಳ್ಳಾಲ್ಯಂತ ಹೇಳ್ತಿದ್ದಾರೆ. ಅಲ್ದೆ ಆಫೀಸ್ ಅವರ್ಸ್‌ಲ್ಲಿ ನೀನು ಗೋಪಾಲನ್ನ ನೋಡೋಕೆ ಅವನ ಸೆಕ್ಷನ್‌ಗೆ ಹೋಗ್ತಿರ್ತೀಯಂತೆ. ನನಗೆ ಆ ಸೆಕ್ಷನ್‌ನವರೂ ಸಾಕ್ಷಿ ಹೇಳಿದ್ದಾರೆ. ಇನ್ಮೇಲೆ ಹೀಗೆಲ್ಲ ಮಾಡಿದರೆ ಖಂಡಿತ ನೀನು ಆಫೀಸ್‌ನಲ್ಲಿ ಇರೋಕೆ ಸಾಧ್ಯವಿಲ್ಲ. understand? ಗದ್ದರಿಸಿದ. 'ಇನ್ನೂ ಒಂದು ವಿಷಯ. ನೀನು ಅಪಾಲಜಿ ಲೆಟರ್ ಕೊಡಬೇಕು. 'I will dictate, take down'—ಅಧಿಕಾರವಾಣಿಯಲ್ಲಿ

ನುಡಿದ. ಮತ್ತೆ ಚೇರನ್ನು ತಿರುಗಿಸಿ ಗೋಡೆಯ ಕಡೆಗೆ ಮುಖ ಮಾಡಿ ಹೇಳ ತೊಡಗಿದ. ಮಾಲತಿ ಪೇಪರೊಂದನ್ನು ಟ್ರೇಯಿಂದ ತೆಗೆದುಕೊಂಡು ಕುಳಿತಳು. ಡ್ರಾಫ್ಟ್ ಮಾಡು ನಾನು ವಿಷಯ ಏನು ಬರೀಬೇಕು ಅಂತ ಹೇಳ್ತೀನಿ.' ಮತ್ತೊಮ್ಮೆ ನುಡಿದ. ಒಂದೆರಡು ನಿಮಿಷಗಳ ತರುವಾಯ ಮಾಲತಿ 'ರೆಡಿ ಸರ್' ಅಂದಳು. ಇಷ್ಟು ಸುಲಭವಾಗಿ ಮಾಲತಿ ಮುದುಡಿದ್ದು ನೋಡಿ ಬಾಸ್‌ಗೆ ಆಶ್ಚರ್ಯ. ಮೂಗಿನ ಮೇಲೇ ಕೋಪ. ಜೊತೆಗೆ ಅಂಥಾ ಹ್ಯುಮಿಲಿಯೇಷನ್ ಅವಳಿಗೆ ಒಗ್ಗಿದ್ದು. ಅಂಥಾದ್ದರಲ್ಲಿ ಅಪಾಲಜಿ ಲೆಟರ್ ಬರೆದುಕೊಡೋಕೆ ಹೇಗೆ ಒಪ್ಪಿದ್ದಾಳೆನ್ನೋದು ಆಶ್ಚರ್ಯವಾಗಿ ಅವಳ ಮುಖ ನೋಡಬೇಕೆನಿಸಿತು. ಆದರೆ ಧೈರ್ಯ ಬರಲಿಲ್ಲ. ಕೊಟ್ಟು ಹೋಗುವ ತನಕವೂ ನಂಬಿಕೆಯಿರಲಿಲ್ಲ. ಹೊಂಚಿದ್ದು ಎದುರು ಬೀಳುವ ಸ್ವಭಾವ. ಅದಕ್ಕೆ ಮುಖ ತಿರುಗಿಸದೆ ಹೇಳತೊಡಗಿದ 'ಸರ್' ಆಯ್ತು ಮುಂದೆ ಹೇಳಿ ನಿಶ್ಚಲವಾಗಿ ನುಡಿದರು. ನಾನು, ಮಾಲತಿ, ನನ್ನ ಸಹೋದ್ಯೋಗಿಗಳೊಂದಿಗೆ ಸರಿಯಾಗಿ ನಡೆದುಕೊಳ್ಳದಿದ್ದುದಕ್ಕಾಗಿ ತಮ್ಮಲ್ಲಿ ಕ್ಷಮೆ ಯಾಚಿಸುತ್ತೇನೆ. ಅಲ್ಲದೆ ಇಂದಿನಿಂದ ನನ್ನ ದುರ್ನಡತೆ ಯನ್ನು ತಿದ್ದಿಕೊಂಡು ಮರ್ಯಾದೆಯಿಂದ ಇದ್ದು ಆಫೀಸಿನ ಗೌರವ ವನ್ನು ಕಾಪಾಡುತ್ತೇನೆ ಮತ್ತು ಆಫೀಸಿನ ವೇಳೆಗೆ ಸರಿಯಾಗಿ ಬಂದು ಕೆಲಸ ನಿರ್ವಹಿಸುತ್ತೇನೆ. ಮತ್ತೊಮ್ಮೆ ಕ್ಷಮೆಯಿರಲಿ'—ಡಿಕ್ಟೇಷನ್ ಮುಗಿಸಿ ಇವಳತ್ತ ತಿರುಗಿದ. ಸ್ಫೋಟಕ್ಕೆ ಸಿದ್ಧವಾಗಿರುವ ಜ್ವಾಲಾ ಮುಖಿಯಂತಿದ್ದಾಳೆ. ಆ ಲೆಟರನ್ನು ಮತ್ತೊಮ್ಮೆ ಓದಿ ತೋರಿಸಲು ಹೇಳಿದ. ಮಾಲತಿ, 'ಬೇಕಾದರೆ ನೀವೇ ಓದಿಕೊಳ್ಳಿ' ಎಂದು ರೊಯ್ಯಂತ ಅವನ ಮುಂದೆ ಎಸೆದಳು. ಬಾಸ್ ಕೈಗೆ ತೆಗೆದುಕೊಂಡು ನೋಡಿ ಸ್ತಂಭಿಸಿದ 'What is this nonsence—ಕಿರುಚಿದ.

'ಓದಿದರೆ ತಿಳಿಯೊಲ್ವೆ ಏನೂಂತ ? ಬಾಯ್ಬಿಟ್ಟು ಹೇಳಬೇಕೇ ?'

'ತಲೆಯಿದ್ದು ಮಾತಾಡ್ತಿದ್ದೀಯಾ ? ಇಲ್ಲ....'

'ಇವೇಂದ್ರೆ ಇದೆ. ಇಲ್ಲಾಂದ್ರೆ ಇಲ್ಲ—ಕಡಿದಾಗಿ ಉತ್ತರಿಸಿದಳು.

'ತಕ್ಷಣ Resign ಮಾಡಿದ್ರೆ ಹೇಗೆ ? ಅರ್ಜೆಂಟ್ ಲೆಟರ್ಸ್ ಇವೆ.'

'ಪ್ರಪಂಚ ವಿಶಾಲವಾಗಿದೆ, ಯಾರು ಬೇಕಾದರೂ ಸಿಕ್ತಾರೆ'

'ಸುಮ್ಮನೆ ತಲೆಹರಟೆ ಬೇಡ ಈಗಲೂ ನನ್ನ ಮಾತು ಕೇಳು. ಯಾರಿಂದಲೂ ನಿನಗೇನೂ ಆಗದ ಹಾಗೆ ನೋಡ್ಕೊಳ್ತೀನಿ, ಅಪಾಲಜಿ ಲೆಟರೂ ಕೊಡಬೇಕಾಗಿಲ್ಲ. ಗಂಡಸು ಇಲ್ಲದೆ ಹೆಂಗಸು ಒಂಟಿಯಾಗಿ ಬದುಕುವುದು ಸಾಧ್ಯವಿಲ್ಲ. ಸುಮ್ಮನೆ ಯಾಕೆ ತಾಪತ್ರಯಪಡ್ತೀಯ' ಇನ್ನು ಮಾಲತಿಗೆ ತಡೆಯಲು ಆಗಲಿಲ್ಲ. 'You dirty dog' ಎಂದು ಆಫೀಸೇ ನಡುಗುವ ಹಾಗೆ ಕಿರುಚಿದಳು.

'You bitch —ಇದು ಆಫೀಸು ಬಾಯ್ಮುಚ್ಚು. ನೀನು ಅಬ್ಬರಿಸಿದರೆ ಅಪಮಾನ ಆಗೋದು ನಿನಗೇನೇ 'mind that, ಎಚ್ಚರಿಸಿದ.

'Resignation ಕೊಟ್ಬಿಟ್ಟಿದ್ದೀನಿ. ನನ್ನ ಮೇಲೆ ನಿಮಗೆ ಅಧಿಕಾರ ಇಲ್ಲ. ನೀವೆಲ್ಲಾ ಮನುಷ್ಯ ರೂಪದಲ್ಲಿರೋ ರಾಕ್ಷಸರು. Gentlaman ಸೋಗಲ್ಲಿರುವ ಕೀಟಗಳು. ಹೊಲಸು ಹುಳುಗಳು. ನಿಮ್ಮಂಥ ನೀತಿಗೆಟ್ಟವರು ಒಂದೊಂದು ಆಫೀಸಿಗೆ ಒಬ್ಬೊಬ್ಬರಿದ್ದರೂ ಸಾಕು. ದ್ರೌಪದೀ ರಕ್ಷಣೆಗೆ ಕೀಚಕರನ್ನು ಕಾವಲಿಟ್ಟ ಹಾಗೆ. ಒಂದು ಹೆಣ್ಣು ಮರ್ಯಾದೆಯಿಂದ ಇರೋಕೆ ಸಾಧ್ಯವಿಲ್ಲ. ನೀವೆಲ್ಲ sex ಹಸಿದವರು. 'ಥೂ' ನಿಮ್ಮಂಥವರ ನೆರಳೂ ಅಪಾಯ ಕರ' ಎಂದು ಥೂಕರಿಸಿ ಸರಸರ ನಡೆದುಬಿಟ್ಟಳು. ಬಿರುಗಾಳಿಯಂತೆ ಹೊರಟ ಮಾಲತಿಯನ್ನು ತಡೆಯಲು ಯಾವ ಬೆಟ್ಟವೂ ಅಡ್ಡ ಬರಲಿಲ್ಲ.

ಚೌಕದಲ್ಲಿ ಬಸ್ಸಿಗಾಗಿ ಬಂದು ನಿಂತಳು. ಶೂನ್ಯ ಆಕಾಶದ ಕೊನೆ ಮೊದಲು ಕಾಣಲಿಲ್ಲ. ಒಂದು ಮನಸ್ಸು ದುಡುಕಿದೆ ಎಂದು ಸಿಡುಗುಟ್ಟಿದರೆ ಮತ್ತೊಂದು ಮಾಡಿದ್ದು. ಸರಿಯೆಂದು ತನ್ನ ಪ್ರತಿಯಾಗಿ ಪಿಸುಮಾತಿನಲ್ಲಿ ಸಮರ್ಥಿಸುವಂತಿತ್ತು. ಇವಳು ಆಲೋಚನೆಯಲ್ಲಿರಬೇಕಾದರೆ ಬಸ್ಸುಗಳು ಎರಡು ಮೂರು ಬಂದು ಹೋದವು. ಏನನ್ನೂ ಗಮನಿಸುವ ಸ್ಥಿತಿಯಲ್ಲಿರಲಿಲ್ಲ.

ಆಫೀಸಲ್ಲಿ ವಿಷಯ ಒಬ್ಬರಿಂದ ಒಬ್ಬರಿಗೆ ತಿಳಿಯಿತು. ಮಾಲತಿಯ ಸೆಕ್ಷನ್ ನವರಿಗೆ ಲಡ್ಡು ತಿಂದಷ್ಟು ಖುಷಿಯಾಯಿತು. ಗೀತಾಗೂ ತಿಳಿಯಿತು ಗೋಪಿಗೂ ತಿಳಿಯಿತು. ಗೀತಾಗೆ ಎದ್ದು ಹೋಗಿ ಮಾಲತಿಯನ್ನು ನೋಡಿ ಮಾತಾಡಿಸಬೇಕೆನಿಸಿತು. ಆದರೆ ಅವಳಿಗಾದ ಗತಿ

ತನಗೂ ಆದರೆ ಅನ್ನೋ ಭಯ ಅವಳನ್ನು ಅಲ್ಲಿಯೇ ಉಳಿಯುವಂತೆ ಮಾಡಿತು. ಆದರೆ ಗೋಪಿಗೆ ಸಿಲ್ಲಲಾಗಲಿಲ್ಲ. ಮೊದಲಿನಿಂದಲೂ ಮಾಲತಿಯ ಗಂಭೀರ ಸ್ಥಿತಿ ತಿಳಿದಿತ್ತು. ತುಂಬಾ ಸೆಂಟಿಮೆಂಟಲ್. ಘಾಯ ಗೊಂಡ ಮನಸ್ಸು. ಮಾಮೂಲಾಗಿ ಅವಳು ಬಸ್ಸಿಗೆ ಕಾಯುವ ಜಾಗ ಗೊತ್ತು. ಎದ್ದವನೇ ಅರ್ಧ ದಿನಕ್ಕೆ ರಜೆ ಬರೆದು ಗೆಳೆಯನ ಕೈಲಿ ಬಾಸ್‌ಗೆ ಕೊಡಲು ಹೇಳಿ ಈಚೆಗೆ ಬಂದ. ಅಷ್ಟರಲ್ಲಿ ರಾಮಯ್ಯ ಎದುರು ಬಿದ್ದು ಮಾಲತಿಯ ವಿಚಾರ ಮತ್ತು ಅವರಿಬ್ಬರಿಗೆ ನಡೆದ ಘರ್ಷಣೆಯನ್ನು ಸೂಕ್ಷ್ಮವಾಗಿ ತಿಳಿಸಿದ.

ಗೋಪಿ ನೇರಾಗಿ ಬಸ್ ಸ್ಟಾಪಿಗೆ ಬಂದ. ಅವನ ನಿರೀಕ್ಷೆ ಸರಿಯಾಗಿತ್ತು. ಮಾಲತಿ ಇನ್ನೂ ಅಲ್ಲೇ ಕಂಬಕ್ಕೊರಗಿಕೊಂಡು ಶೂನ್ಯದಲ್ಲೆಲ್ಲೋ ನೋಡುತ್ತಾ ನಿಂತಿದ್ದಳು. ಗೋಪಿ ಹತ್ತಿರ ಬಂದು ಮೆಲ್ಲನೆ 'ಮೇಡಂ' ಅಂದ. ಪರಿಚಿತ ಧ್ವನಿ ಅದೂ ಆತ್ಮೀಯತೆಯಿಂದ ತುಂಬಿದ ಧ್ವನಿ ಅವಳನ್ನು ಕೂಡಲೇ ಎಚ್ಚರಿಸಿತು. 'ನನಗೆ ವಿಷಯ ಎಲ್ಲ ತಿಳೀತು. ಆದರೆ ನೀವು ಈ ಕೆಲಸ ಮಾಡೋಕೆ ಮುಂಚೆ ಸ್ವಲ್ಪ ಯೋಚಿಸಬೇಕಿತ್ತು. ಅನ್ನಸ್ತೆ'

'ಮಿ|| ಗೋಪಿ ಆ ಪರಿಸ್ಥಿತೀಲಿ ಅದಕ್ಕಿಂತ ಬೇರೇನೂ ಮಾಡೋದು ಸಾಧ್ಯವಿರಲಿಲ್ಲ. ನನ್ನೊಬ್ಬಳ ವಿಷಯವಲ್ಲದೆ ನಿಮ್ಮನ್ನೂ ಮಾತಿನಲ್ಲಿ ಎಳೆದರು. ಎಲ್ಲಕ್ಕಿಂತ ಹೆಚ್ಚಾಗಿ ಅದು ಹಸಿದ ತೋಳ ಅಂತ ನನಗೆ ಖಚಿತವಾಯಿತು. ಅವನು ಇರೋತನಕ ನನ್ನ ಸ್ಥಿತಿ ಅಭದ್ರ. ನನ್ನ ಹೆಣ್ತನಕ್ಕೆ ಅಪಾಯ. ಹೋದರೆ ಬಂದರೆ ಆ ಹಸಿದ ಕಣ್ಣುಗಳನ್ನು ಎದುರಿಸಲಾರೆ'

'ಹಾಗಾದರೆ ಈಗ ಮುಂದೆ ದಾರಿ? ನಿಮ್ಮನ್ನು ಆಶ್ರಯಿಸಿ ಗುಟುಕಿಗೆ ಎದುರು ನೋಡೋ ಎರಡು ಮುದಿ ಹಕ್ಕಿಗಳವೆ ಅವುಗಳ ಗತಿ?'

ಹೌದು ಅವರದೇ ಯೋಚನೆಯಾಗಿದೆ ನನಗೆ. ನಾನಾದರೆ ಈ ವಿಶಾಲವಾದ ಪ್ರಪಂಚದಲ್ಲಿ ಯಾವುದೋ ಮೂಲೆಯಲ್ಲಿ ಏನಾದರೂ ಮಾಡಿಕೊಂಡು ಬದುಕುತ್ತೇನೆ. ಬೇಕಾದರೆ ತಿರಿದಾದರೂ ತಿಂತೇನೆ. ಈಗ

ನನಗೆ ನಾನು ಮಾಡಿದ್ದು ತುಂಬಾ ತಪ್ಪೇನೋ ಅಂತ ಅನ್ನಿಸ್ತಿದೆ. ಆದರೂ ಆ ಬಾಸ್ ಮುಖ ನೆನಪಿಗೆ ಬಂದರೆ ಮುಳ್ಳು ಹಂದಿಯಾಗುತ್ತೇನೆ' ಅಸಹಾಯಕತೆ ಬೆರೆತಿತ್ತು ಆ ಧ್ವನಿಯಲ್ಲಿ.

ನೋಡಿ ಮೇಡಂ ಆದದ್ದು ಆಗಿಹೋಯ್ತು. ನಾನೊಂದು suggestion ಕೊಡ್ತೇನೆ. ನಿಮಗೆ ಇಷ್ಟವಾಗಬಹುದು ಆಗದೆ ಹೋಗಬಹುದು. ನಿಮ್ಮ ಒಳ್ಳೇದಕ್ಕೆ ಹೇಳ್ತೇನೆ....' ಹಿಂಜರಿಯುತ್ತ ನುಡಿದ.

ಮಿ|| ಗೋಪಿ, ನೋಡಿ. ನನ್ನಂಥವರು ಬಹು ಸುಲಭವಾಗಿ ಕಳೆದು ಹೋಗೋ ಈ ಪ್ರಪಂಚದಲ್ಲಿ ನಿಮಗಿಂತ ನನಗೆ ಬೇರೆ ಯಾರೂ ಇಲ್ಲ. ಈಗಾಗಲೇ ನಿಮ್ಮಿಂದ ಒಂದು ಸಲ ಉಪಕೃತಳಾಗಿದ್ದೇನೆ. ಈಗಲೂ ನೀವೇನು ಹೇಳ್ತಿರೋ ಅದನ್ನೇ ಕೇಳೋದಿಕ್ಕೆ ಪ್ರಯತ್ನಪಡ್ತೇನೆ. ಕೊಟ್ಟ ಕೊನೆಯ ಆಸರೆ ನೀವೇ ಅನ್ನೋ ದೈನ್ಯತೆ ಇತ್ತು ಆ ಮಾತುಗಳಲ್ಲಿ.

ಏನಿಲ್ಲ ನೀವು ನಿಮ್ಮ ಮುದಿ ಅತ್ತೆ ಮಾವಂದಿರೊಂದಿಗೆ ನನ್ನ ಜೊತೆಗೆ ಬಂದು ಇದ್ದುಬಿಡಿ. ಹೇಗಿದ್ದರೂ ಇರೋದು ನಾನೊಬ್ಬನೇ. ನೀವು ಏಕಾಂಗಿಯಾಗಿ ಇರುವುದಕ್ಕಿಂತ ಹೆಚ್ಚಾಗಿ ಏಕಾಕಿತನ ನನ್ನದಾಗಿದೆ. ಹುಟ್ಟೋಕ್ಮುಂಚೆ ಅಪ್ಪ, ಹುಟ್ಟಿದ್ಮೇಲೆ ಅಮ್ಮನ್ನ ಕಳ್ಕೊಂಡೆ ಹಿಂದಿಲ್ಲ ಮುಂದಿಲ್ಲ. ಪರಪುಟ್ಟನ ಹಾಗೆ ಬೆಳೆದೆ. ಓದ್ಬೇಕನ್ನೋ ಆಸಕ್ತೀನ ಗುರುತಿಸಿ ತಂದೆ ಗೆಳೇರೊಬ್ಬರು ಓದಿಗೆ ಸಹಕರಿಸಿದರು. ನಸೀಬ್ ಚೆನ್ನಾಗಿತ್ತು. ಉದ್ಯೋಗ ಸಿಕ್ತು. ಸಂತೋಷವಾಗಿದ್ದೀನಿ. ಉಳಿದಿರೋದು ನಾಲ್ಕು ಜನರಿಗೆ ಒಳ್ಳೇವನ್ನಾಗಿ ಇರೋದು. ಅಷ್ಟೇ ನನ್ನ ಧ್ಯೇಯ.

ಅದು ಒಪ್ಪಿಕೊಂಡೆ ಮಿ|| ಗೋಪಿ. ಆದರೆ ನಿಮ್ಮ ಒಳ್ಳೇತನಾನ್ನೇ ನಿಮಗೆ ಮಾರಕ ಅಸ್ತ್ರವಾಗಿ ಮಾಡೋಕೆ ಕಾದಿರೋ ಜನ ಸುಮ್ನಿರ್ತಾರೆಯೇ ? ನೀವಂತೂ ಶುಚಿ ಮನಸ್ಸಿನಿಂದ ನನ್ನ ಸಹಾಯಕ್ಕೆ ಮುಂದಾಗಿದ್ದೀರಿ. ಆದರೆ ಮೊದಲೆ ನಾಲಗೆ ತೀಟೆ ತೀರಿಸ್ಕೊಳ್ಳೋಕೆ ಕಾದಿರೋ ಆಫೀಸಿನವರು ಸುಮ್ನಿರ್ತಾರೆಯೇ, ಕಥೆ ಕಟ್ಟಿ ರೆಕ್ಕೆ ಪುಕ್ಕ

ಹಚ್ಚಿ ಪ್ರಪಂಚದಲ್ಲೆಲ್ಲ ಹಾರಬಿಡ್ತಾರೆ. ಆಗೇನು? ಸಂಶಯ ಭೀತಿಯಿಂದ ಕೇಳಿದಳು.

'ಅದಕ್ಕೂ ಒಂದು ದಾರಿ ಹೇಳ್ತೀನಿ. ನಿಮ್ಮ ಮನಸ್ಸು ನೋಯಿಸೋದು ನನ್ನ ಉದ್ದೇಶ ಅಲ್ಲ. ನೀವು ಒಪ್ಪುವುದಾದರೆ ನಾನು ನಿಮ್ಮನ್ನು ಪಬ್ಲಿಕ್ಕಾಗಿ ಮದುವೆಯಾಗ್ತೀನಿ. ಹೊರಳಾಡೋ ನಾಲಗೆಗಳಿಗೆ ಪರಾಲಿಸಿಸ್ ಹೊಡೆದ ಹಾಗೆ ಆಗುತ್ತೆ. ನಿಮ್ಮಿಂದ ಇದಕ್ಕಿಂತ ಹೆಚ್ಚಾಗಿ ಏನನ್ನೂ ಯಾಚಿಸೋಲ್ಲ. ಸಂದೀಪ್‌ರಿಗೆ ನೀವು ಕೊಟ್ಟ ಸ್ಥಾನವನ್ನು ನಾನು ಒಯಸೋಲ್ಲ. ನನಗೆ ಅಂಥಾ ಸ್ವಾರ್ಥ ಇಲ್ಲ.

ಗೋಪಾಲನಿಂದ ಈ ಮಾತು ಬರುತ್ತೇಂತ ನಿರೀಕ್ಷಿಸಿರಲಿಲ್ಲ. ಹಾಗೇ ಮಾಡೋದೇ ಒಳ್ಳೇದು. ನೆರಳಿಲ್ಲದೆ ಹೆಣ್ಣು ಬದುಕೋದು, ಅದೂ ಮರ್ಯಾದೆಯಿಂದ, ಆಗದ್ದು. ತನ್ನಂಥ ಅಪಾಯಕರ ಸ್ಥಿತಿ ಮತ್ತೂ ಭಯಂಕರವಾಗುತ್ತೆ. ಮನಸ್ಸು ತುಂಬಿ ಬಂತು. ಅತ್ತೆ ಮಾವರಿಗೆ ತಿಳಿಯುವಂತೆ ಮಾಡಬೇಕು. ಅದನ್ನು ಹೇಗಾದರೂ ಸಾಧಿಸಬಲ್ಲೆ ಅನ್ನೋ ನಂಬಿಕೆ ಇತ್ತು. ಗಟ್ಟಿಯಾಗಿ 'ಗೋಪಿ ನೀವು ನನ್ನ ಓಯಸಿಸ್' ಅಂತ ಕಿರುಚಬೇಕೆನಿಸಿತು. ಆದರೆ ಭಾವಾವೇಶವನ್ನು ಹತ್ತಿಕ್ಕಿದಳು. ನಾಳೆ ಖಂಡಿತ ಮನೆಗೆ ಬರಲೇಬೇಕೆಂದು ಆಹ್ವಾನಿಸಿ ವ್ಯಾನಿಟಿ ಬ್ಯಾಗೊಳಗಿಂದ ತುಂಡು ಕಾಗದ ತೆಗೆದು ಅಡ್ರೆಸ್ ಬರೆದುಕೊಟ್ಟಳು. ಅಷ್ಟರಲ್ಲಿ ಬಸ್ ಬಂದು ನಿಂತಿತು. ಸರಸರನೆ ಹತ್ತಿ ಒಳಗೆ ಮರೆಯಾದಳು. ಬಸ್ ಹೊರಟಿತು. ಅದರೊಂದಿಗೆ ಗೋಪಿಯ ಮನಸ್ಸೂ ಚಲಿಸಿತು. ಬಸ್ಸಲ್ಲಿ ಕೂತಿದ್ದರೂ ಮಾಲತಿಗೆ ಕನಸು ತಪ್ಪಲಿಲ್ಲ. ಅದೇ ಆಫೀಸು—ಅದೇ ಬಾಸ್—ರಾಜೀನಾಮೆ. ಮರಳುಗಾಡು—ಪಿಂಟೊ, ...ಪೀಟರ್, ರೆಹಾನಾ ....ಅವರೇ....ಮುಳ್ಳುಪೊದೆಗಳು....ದೂರದಲ್ಲಿ ಓಯಸಿಸ್—ಗೋಪಿ.... ತಾನು. ಓಯಸಿಸ್....ಮರದ ನೆರಳು—ವಿಶ್ರಾಂತಿ...ಅದೇ ಅದೇ ನೆನಪು ಪುನರಾವರ್ತನೆಯಾಯ್ತು. ಸಂದೀಪ ಮಾಲತಿಗೆ ರಾಜೀನಾಮೆ ಕೊಟ್ಟ—ಮಾಲತಿ ಕೆಲಸಕ್ಕೆ ರಾಜೀನಾಮೆ ಕೊಟ್ಟಳು. ಗುಂಡಗಿರೋ ಭೂಮಿಯ ಸುತ್ತ ಬದಲಾಯಿಸುತ್ತೆ' ಅಂದುಕೊಂಡಳು.

## "ನೊಣ"

ಸಿಂಬಳದಲ್ಲಿ ಸಿಕ್ಕಿಹಾಕಿಕೊಂಡು ವಿಲಿ ವಿಲಿ ಒದ್ದಾಡುತ್ತಿದ್ದ ನೊಣ ವನ್ನು ನೋಡುತ್ತಾ ಇದ್ದ ಹಾಗೆಲ್ಲ ನನಗೊಂದು ಖುಷಿ. ಆದಕ್ಕೇ ಆಗಬೇಕು. ಕೆಟ್ಟ ಕೀಟ! ಹಾಳು ಸುರಿಯುವ ಕಡೆಯೆಲ್ಲ ಕೂತು ಹೊರ ಬಾರದ ರೋಗಾಣುಗಳನ್ನು ಹೊತ್ತು ಮನುಷ್ಯ ಜೀವಕ್ಕೇ ಮಾರಕ ವಾಗಿದೆ. ಇದು ಸಾಯಲೇಬೇಕು. 'ಥುತ್' ಎನಿಸಿತು. ಇದ್ದ ಕ್ಕಿದ್ದಂತೆ ಮನಸ್ಸು ಆ ನೊಣದ ಬಗ್ಗೆ ಮರುಕ ತಳೆಯಿತು. ಯಾವ ನಾದರೂ ವ್ಯಕ್ತಿಯೊಬ್ಬ ಇದೇ ರೀತಿ ಇಂತಹುದೇ ಪರಿಸ್ಥಿತಿಯಲ್ಲಿ ಸಿಕ್ಕಿಹಾಕಿಕೊಂಡಿದ್ದರೆ ನನಗೆ ನಿಜವಾಗಿಯೂ ಖುಷಿಯಾಗುತ್ತಿತ್ತೆ? ನನ್ನ ಮನಸ್ಸನ್ನೇ ಪ್ರಶ್ನಿಸಿಕೊಂಡೆ. ನನ್ನನ್ನೇ ನೊಣವಾಗಿಸಿಕೊಂಡೆ. ಬಿದ್ದೆ, ಒದ್ದಾಡಿದೆ. ದೇವರು ಗಂಟಲು ಕೊಟ್ಟಿದ್ದ. ಕಿರುಚಿದೆ. ಸಹಾಯಮಾಡಿ ಎಂದು ಹಾದುಹೋಗುವವರನ್ನೆಲ್ಲಾ ಬೇಡಿಕೊಂಡೆ. ಆದರೆ ಯಾರಿಗೆ ತಾನೇ ಕಿವಿ ಕೇಳಿಸೀತು. ತಮ್ಮ ತಮ್ಮ ಸ್ವಾರ್ಥದ ವಲಯದಲ್ಲಿ ಮಾತ್ರ ಅವರು ನಿಮಗ್ನರು. ವಲಯದಾಚೆಗಿನ ವ್ಯಕ್ತಿ ಗಳಾಗಲಿ. ವಸ್ತುಗಳಾಗಲೀ ತಮಗೆ ಬೇಕಿಲ್ಲ. ಛೇ! ಎಷ್ಟು ಸ್ವಾರ್ಥಿ ಗಳು ಈ ಜನ.

ನಾಜೂಕಿನ ಉಡುಪಿನಲ್ಲಿ ನೊಣಕ್ಕಿಂತ ಅಸಹ್ಯ ಮನುಷ್ಯರು ಒಳಗು ಕಾಣದೆ ಇರುವಾಗ, ಬುದ್ಧಿಯಿಲ್ಲದ, ನೊಣದಂತೆ ಜನ ಸುಲಭ ವಾಗಿ ಅವರು ಹರಡಿರುವ ಕೆಸರಿನ ಗುಂಡಿಯಲ್ಲಿ ಬಿದ್ದು ಸತ್ತವರು ಎಷ್ಟು ಜನ ಇಲ್ಲ—ಎಂದು ಯೋಚಿಸುತ್ತಿದ್ದಂತೆ ಮೈ ಮೇಲೆ ಏನೋ ಹರಿದಾಡಿದ ಅನುಭವವಾಯ್ತು. ಆ ಜಾಗಕ್ಕೆ ಕೈ ಹಾಕಿದೆ ಒಂದು ಸಣ್ಣ ಇರುವೆ. ಅದೂ ಕೆಂಪಿರುವೆ. ಬೆರಳುಗಳಿಂದ ತೆಗೆದು ಒಂದು ಕ್ಷಣ ಅದರತ್ತ ನೋಡಿ ಅದನ್ನು ಇಲ್ಲ ಅನ್ನುವಂತೆ ಹೊಸಕಿಬಿಟ್ಟೆ. ತೃಪ್ತಿಯ ನಿಟ್ಟುಸಿರು!.... ಹೌದು ಏನೋ ಯೋಚಿಸುತ್ತಿದ್ದೆ?— 'ನೊಣ'.... 'ನೊಣ'ದ ಬಗ್ಗೆ ಯಾರಾದರೂ ನನ್ನನ್ನು ಭಾಷಣಕ್ಕೆ ಯಾಕೆ ಕರೆಯ ಬಾರದು—ಎಂದು ನನಗೆ ನಾನೇ ಪ್ರಶ್ನಿಸಿಕೊಂಡೆ.

ಇದ್ದಕ್ಕಿದ್ದಂತೆ ಗೆಳತಿ ರಮಾಳ ನೆನಪು ಬಂತು. ಯಾಕೋ ಗೊತ್ತಾಗಲಿಲ್ಲ. ಹೇಗಿರಬಹುದೋ ಈಗ?—ಪಾಪ ಅವಳ ಕ್ಷೇಮದ ಬಗ್ಗೆ ನನ್ನ ಮನಸ್ಸು ಕಾತರ. ಹಾಗಾದರೆ ಇಷ್ಟು ದಿವಸ ಅವಳ ನೆನಪೇ ನನಗ್ಯಾಕೆ ಬರಲಿಲ್ಲ ಎಂದುಕೊಂಡೆ. ಅಪ್ಪ ಅಮ್ಮ ಮೋಸ ಹೋದರು. ಅವಳನ್ನ ಒಬ್ಬ ಹೋಮೋಸೆಕ್ಷುಯಲ್ ವ್ಯಕ್ತಿಗೆ ಕೊಟ್ಟು ಮದುವೆ ಮಾಡಿದರು—ಅಂತ ಯಾರೋ ಹೇಳಿದ್ದರ ನೆನಪು ಬಂತು....ಮಕ್ಕಳು? ಇನ್ನು ಮಕ್ಕಳು ಎಲ್ಲಿಂದ ಬರಬೇಕು? ತುಂಬಾ ಒಳ್ಳೆ ಅಳಿಯ—Mr. International ಗಂಡ ಸಿಕ್ಕಿದ ಅಂತ ಅವಳಿಗೆ ತುಂಬಾ ಜಂಬ ಬಂದಿದ್ದಿರಬೇಕು. ಈಗ ಹೋಗಿ ನೊಡ್ಬೇಕು ಅವಳು ಹೇಗಿದ್ದಾಳೇಂತ. ಗಂಡನ ವಿಷಯವಾಗಿ ಏನಾದ್ರೂ ಹೇಳ್ತಾಳೇನೋ ಕೇಳ್ಬೇಕು. ಆದರೆ ಹಾಳು ಮುಂಡೇವು ನಮ್ಮ ಹಿಂದೂ ಹೆಣ್ಣುಗಳು! ಗಂಡಂದಿರು ಚಂಡಾಲರಾದರೂ ಬಾಯಿ ಬಿಡೊಲ್ಲ. ಧೈರ್ಯ ಮಾಡಿ ಇನ್ನೊಬ್ಬನ್ನ ಮದುವೆಯಾಗೊಲ್ಲ. ಸುಮ್ಮನೆ ಬಿದ್ದುಕೊಂಡು ಈ ನೊಣದ ಹಾಗೆ ಸಾಯೋ ತನಕ ಒದ್ದಾಡುತ್ತಲೇ ಇರುತ್ತವೆ!!—ಇವಳಿಗಾದರೂ ನಾನು ಬುದ್ಧಿ ಹೇಳ್ಬೇಕು—ಅಂದುಕೊಂಡೆ.

ಹಳೆಯ ಡೈರಿಗಳಲ್ಲೆಲ್ಲಾ ಹುಡುಕಿ ಅವಳ ಅಡ್ರೆಸ್ ಪತ್ತೆ ಹಚ್ಚಿದೆ. ನಂ. 6, 10ನೇ ಬ್ಲಾಕ್, ಜಯನಗರ. ಆ ಅಡ್ರೆಸ್ಸಿನ ಪುಟವನ್ನು ಹರಿದು ಮಡಿಚಿ ವ್ಯಾನಿಟಿ ಬ್ಯಾಗಿನಲ್ಲಿ ಇಟ್ಟುಕೊಂಡೆ. ರಜ ಸಿಗುತ್ತಿರಲಿಲ್ಲ. ಆದರೂ ಒಂದು ದಿನ ರಜೆ ಹಾಕಿ ಅವಳ ಮನೆಗೆ ಹೋಗುವ ಸಾಹಸ ಮಾಡಿದೆ. ತುಂಬಾ ಸುತ್ತಾಡಿ ಅಲೆದ ಮೇಲೆ—ಮನೆ ಪತ್ತೆ ಆಯಿತು. ಬಾಗಿಲ ಬಳಿ ಹೋಗಿ ನಿಂತೆ. ಕಾಲಿಂಗ್ ಬೆಲ್ ಒತ್ತಬೇಕಾಗಿ ಬಂತು. ಯಾಕೋ ಎದೆ ದಡ ದಡ ಗುಟ್ಟುತ್ತಿತ್ತು. ನನ್ನನ್ನು ನೋಡಿ ತುಂಬಾ ಆಶ್ಚರ್ಯಪಡ್ತಾಳೆ. ಅಪ್ಪಿಕೊಂಡು ಅಳ್ತಾಳೆ' ಎಂದು ನಿರೀಕ್ಷಿಸಿದ್ದೆ. ಆದರೆ ಬಾಗಿಲು ತೆಗೆದಾಗ ನಾನು ಕಂಡ ದೃಶ್ಯ ನನ್ನನ್ನೇ ಸ್ತಂಭೀಭೂತವಾಗಿ ಮಾಡಿಬಿಟ್ಟಿತು. ಅಸ್ಥಿಪಂಜರ ಚರ್ಮ ಹೊದ್ದು ನಿಂತಂತೆ ಇತ್ತು. ಒಂದು ಕ್ಷಣ ಪರಸ್ಪರರಿಗೆ ಗುರುತು ಹತ್ತುವುದು ಕಷ್ಟವಾಯ್ತು. ನಂತರ ರಮಾಗೆ ನನ್ನ ಗುರುತು ಹತ್ತಿತ್ತು.

'ಓ' ನೀನಾ ಬಾ ಒಳಗೆ, ಎಷ್ಟು ವರ್ಷಗಳಾದವು ನಿನ್ನನ್ನು ನೋಡಿ? ಏನೇ ನೀ ಸ್ವಲ್ಪಾನೂ ಬದಲಾವಣೇನೇ ಆಗಿಲ್ಲ. ಮೊದಲು ಹೇಗಿದ್ದೀಯೋ ಹಾಗೇ ಇದ್ದೀಯಲ್ಲೇ!—ಬಲವಂತದಿಂದ ನಗು ತಂದು ಕೊಂಡು ಮಾತನಾಡಿಸಲು ಯತ್ನಿಸುತ್ತಿದ್ದರೂ, ಬಾಡಿ ಬತ್ತಿದ ಸಿಪ್ಪೆಗಳಂತಿದ್ದ ತುಟಿಗಳ ಮೇಲಿನ ನಗು ಮತ್ತಷ್ಟು ಹಾಸ್ಯಾಸ್ಪದವಾಗಿ ಕಾಣಿಸಿತು.

ನನಗೆ ಸ್ವಲ್ಪವೂ ಸಹನೆಯಿರಲಿಲ್ಲ. ನೇರಾಗಿ ನನ್ನ ಸಂಶಯಗಳಿಗೆ ಸಮಾಧಾನ ಗಿಟ್ಟಿಸಿಕೊಳ್ಳುವ ಆತುರದಲ್ಲಿದ್ದೆ. ನನ್ನ ಆತುರ ಅವಳ ದೃಷ್ಟಿಗೆ ಬಿತ್ತು. ಯಾಕೆ ಹಾಗಾಡ್ತಾ ಇದ್ದೀಯಾ? ಏನೋ ಕೇಳ್ಬೇಕೂಂತಿರೋ ಹಾಗಿದೆ. ಹೌದೇನೇ?—ಎಂದಳು. 'ಹೌದು'—ಎಂದು ತಲೆಯಾಡಿಸಿದೆನೇ ಹೊರತಾಗಿ ಜಪ್ಪನೆ ಕೇಳಿಬಿಡಲಿಲ್ಲ. ವ್ಯಾನಿಟಿ ಬ್ಯಾಗಿನಿಂದ ಬಿಸ್ಕತ್ ಪ್ಯಾಕೆಟ್ ತೆಗೆದು 'ಎಲ್ಲೇ ನಿನ್ನ ಮಕ್ಕಳು? ಕಾಣೋದಿಲ್ಲವಲ್ಲ?—ಎಂದೆ. ಸುತ್ತಲೂ ನೋಡುತ್ತಾ, ನನ್ನ ಅನಿರೀಕ್ಷಿತ ಪ್ರಶ್ನೆಗೆ ಸಿದ್ಧಳಿರಲಿಲ್ಲ ರಮಾ. ಸ್ವಲ್ಪ ತಬ್ಬಿಬ್ಬಾದಳು. ಹಾಂ, ಹುಂ ಎಂದು ಮೇಲೆ ಕೆಳಗೆ ನೋಡುತ್ತಾ, ಮರೆಸುವುದಕ್ಕೆ ಪ್ರಯತ್ನಿಸಿ, ಕೇಳಿದಳು—ಅಂದ ಹಾಗೆ ನೀನೇನು ಮದುವೆಗಿದುವೆ ಮಾಡ್ಕೊಳ್ತಿಯೋ ಇಲ್ಲ ಇನ್ನೂ ಮೊದ್ಲಿನ ಹಾಗೇ 'ಸುಧಾರಣೆ' 'ಸುಧಾರಣೆ' ಅಂತ ಹಾರಾಡ್ತಾ ಮುದುಕಿಯಾದ್ರೂ ಕುಮಾರಿ ಅಂತ ಕರೆಸಿಕೊಳ್ಳಲು ಇಷ್ಟ ಪಡುತ್ತೀಯಾ?

ನನಗ್ಯಾಕೋ ಅವಳ ಪ್ರಶ್ನೆಯಿಂದ ತುಂಬಾ ಸಿಟ್ಟು ಬಂತು. ಏನೋ ತಾನು ಮಾತ್ರ ಮದುವೆಯಾಗಿ ಮಹಾ ಸಾಧಿಸಿರೋ ಹಾಗೆ. ಈಗಂತೂ ನೇರಾಗಿ ಕೇಳಿಬಿಡೋಣವೆನ್ನಿಸಿತು. ಆದರೂ ಮನಸ್ಸು ಯಾಕೋ ಬೇಡ ಅನ್ನಿಸಿ, ಸುತ್ತಿಸಿ ಅವಳನ್ನೇ ಬಾಯಿ ಬಿಡುವಂತೆ ಮಾಡೋಣವೆನಿಸಿತು.

ಅಲ್ವೆ, ಮದುವೆಯಾದವಳು ನೀನು. ನಿನ್ನ ಅನುಭವ, ಅನಿಸಿಕೆಗಳನ್ನು ನಮ್ಮಂಥವರಿಗೆ ಹೇಳಿದ್ರೆ ತಾನೇ, ನಾವು ಸಹ ಧೈರ್ಯ

ಮಾಡೋಕೆ ಪ್ರಯತ್ನ ಪಡಬಹುದು. ನಿನ್ನ ಗಂಡ ನಿಂ ಜೊತೆ ಹೇಗಿರ್ತಾನೆ. ಅವನ ಬಗ್ಗೆ ನಿನ್ನ ಅಭಿಪ್ರಾಯವೇನಿದೇಂತ್ಲಾದ್ರೂ ತಿಳಿಸು. ಎಷ್ಟರ ಮಟ್ಟಿಗೆ ನನ್ನ ಮಾತು ಅವಳ ಕಿವಿಗೆ ಬಿತ್ತೊ ಏನೋ ಗೊತ್ತಿಲ್ಲ. ಆದರೆ ಒಂದು ನಿಟ್ಟುಸಿರು ಹೊರಡಿಸಿ ಹಾಗೇ ಸೋಫಾದಲ್ಲಿ ಹಿಂದಕ್ಕೆ ಒರಗಿದಳು.

ಕ್ಷಣ ಕಾಲ ನಾನು ಅವಳನ್ನು distrub ಮಾಡಬಾರ್ದು ಅಂದು ಕೊಂಡೆ.... ಒಂದು ಎರಡು....ಮೂರು ನಿಮಿಷಗಳು ಕಳೆದಿರಬಹುದು. ಅವಳೇ ಬಾಯಿಬಿಟ್ಟಳು. ಕತೆ ಕೇಳುವುದಕ್ಕೆ ನಾನೂ ಸಿದ್ಧವಾಗಿ ತುಳಿತೆ.

'ನೋಡೇ, ಮದುವೆಯ ಮಧುರ ರಾತ್ರಿ ನೂರಾರು ಆಸೆಗಳನ್ನು ಅದುಮಿಟ್ಟುಕೊಂಡು ಆ ಕ್ಷಣಗಳನ್ನು ಎದುರು ನೋಡುತ್ತಿದ್ದೆ, ನಮ್ಮ ಪಾಡಿಗೆ ನಮ್ಮನ್ನು ಬಿಟ್ಟುಹೋದರು. ಯಾರೂ ಇಲ್ಲದಾದಾಗ ಒಂದು ಸಲ ಅರ್ಧ ಮಾತ್ರ ತಲೆಯೆತ್ತಿ ಆವರತ್ತ ನೋಡಿದೆ. ಆವರು ಮೇಲೆ ನೋಡುತ್ತಾ ತೊಲೆಗಳನ್ನು ಎಣಿಸುತ್ತಿರುವಂತೆ ಕಂಡರು. ನಾನು ಅವರ ಬಳಿ ಇರುವುದರ ಪರಿವೆಯೂ ಇಲ್ಲದೆ ಅನ್ಯ ಮನಸ್ಕರಾಗಿ ಕೂತಿದ್ದಾರೆ. ಅವರನ್ನು ಆಕರ್ಷಿಸಲು ಕೆಮ್ಮಿದೆ. ಆದರೆ ಅವರ ದೃಷ್ಟಿ ನನ್ನತ್ತ ಬಿದ್ದಿತೋ ಇಲ್ಲವೋ ರಾಹು ಬಡಿದ ಮುಖದಂತಾಗಿ ಬೆವರತೊಡಗಿದರು. ಏನಾಯಿತೋ ಎಂದು ಹತ್ತಿರ ಸರಿದರೆ ಸರ್ರನೆ ಎದ್ದು ನಿಂತು ಅಸ್ಪೃಶ್ಯ ರಿಂದ ದೂರ ಸರಿಯುವ ಹಾಗೆ ಸರಿದು ನಿಂತರು. ನನ್ನ ಸ್ಥಿತಿಯನ್ನು ನೀನೇ ಊಹಿಸಿಕೋ. ಕಾರಣ ತಿಳಿಯದೆ ಒಂದು ಕಡೆ ಆಶ್ಚರ್ಯ ದಿಗ್ಭ್ರಮೆಯಾದರೆ ಮತ್ತೊಂದೆಡೆ ತಡೆಯಲಾರದಷ್ಟು ಅಳು ಉಕ್ಕಿ ಬಂತು. ನನ್ನ ಸ್ಥಿತಿಯನ್ನು ನೋಡಿ ಅವರಿಗೆ ಮರುಕವೆನಿಸಿರಬೇಕು. ಒಂದು ಹೆಜ್ಜೆ ಮುಂದೆ ಬಂದರೇ ಹೊರತಾಗಿ ನನ್ನನ್ನು ಮುಟ್ಟಲಿಲ್ಲ. ಅಪ್ಪಿ ಆದರಿಸಲಿಲ್ಲ. ಅಳಬೇಡವೆಂದು ಮೆಲ್ಲನೆ ಉಸುರಿದರು. ಕಣ್ಣೊ ರಸಿಕೊಳ್ಳಲು ಕರವಸ್ತ್ರ ನೀಡಿದರು. ಅಷ್ಟೇ, ಅವರ ಪಾಡಿಗೆ ಅವರು ಕಂಬಳಿ ಎಳೆದುಕೊಂಡು ದೂರದ ಮೂಲೆಯೊಂದರಲ್ಲಿ ಮಲಗಿದರು. ಹಾಗೂ ಹೀಗೂ ರಾತ್ರಿ ಕಳೆಯಿತು. ಅತ್ತು ಅತ್ತು ಕಣ್ಣು ಬಾತಿತ್ತು.

ಅವತ್ತಿನಿಂದ ಇವತ್ತಿನವರೆಗೂ ಅವರ ಸ್ಪರ್ಶ ಸುಖವನ್ನು ಅನುಭವಿಸಿಯೇ ಇಲ್ಲ. ಅವರ ದೌರ್ಬಲ್ಯ ಏನೂಂತ ಮನೆಯವರಿಗೂ ತಿಳಿಯದು. ನನ್ನನ್ನು ಕಂಡರೆ ಅಪರಾಧಿಯಂತೆ ದೂರ ಸರಿಯುತ್ತಾರೆ. ಮದುಯಾದ ಹೊಸದರಲ್ಲಿ ದಿನಾ ದೇವರಲ್ಲಿ ಮೊರೆಯಿಟ್ಟುಕೊಂಡು ಅಳುತ್ತಿದ್ದೆ. ಆದರೆ ಈಗೀಗ ಹೊಂದಿಕೊಂಡು ಬಿಟ್ಟಿದ್ದೇನೆ. ಅವರಿಗೂ ಹೆಣ್ಣಿಗೂ ಬದ್ಧ ವೈರ. ಹೆಣ್ಣಿನ ಬಗ್ಗೆ ಕನಿಕರವಿದೆಯೇ ಹೊರತಾಗಿ ಪ್ರೀತಿ, ಪ್ರೇಮಗಳಿಲ್ಲ. ಅವರ ಗೆಳೆಯ 'ನಾಗರಾಜ' ಅಂತ ಇದ್ದ. ಅವನನ್ನು ಕಂಡರೆ ಅವನ ಹಿಂದೆ ಬಿದ್ದು ಸಾಯ್ತಿದ್ರು. ಎಷ್ಟೋ ರಾತ್ರಿಗಳು ಇಬ್ಬರೂ ಎಲ್ಲಿಗೋ ಹೊರಟು ಕಳೆದು ಬರುತ್ತಿದ್ದರು. ಕಣ್ಣೆದುರಿಗೆ ಆವರಿಲ್ಲದಾದ ರಾತ್ರಿಗಳನ್ನು ನೆಮ್ಮದಿಯಿಂದ ಕಳೆಯುತ್ತಿದ್ದೆ. ಅವರು ಬಂದರೆಂದರೆ ನನಗೆ ವಿಪರೀತ ಅಸಹ್ಯವುಂಟಾಗುತ್ತೆ. ಅತ್ತೆ, ಮಾವ, ಅಮ್ಮ, ಅಪ್ಪ ಎಲ್ಲರಿಗೂ ನನಗೆ ಮಕ್ಕಳಾಗಲಿಲ್ಲ ಯಾಕೋ, ಅನ್ನೋ ಚಿಂತೆ. ಎಷ್ಟೋ ಸಲ ಬಾಯ್ಬಿಟ್ಟು ಅತ್ತೆ ಮಾವನಿಗೆ ಮಗನ ದೌರ್ಬಲ್ಯ ಹೇಳೋಣಾಂತ' ಅಂದುಕೊಳ್ತೇನೆ. ಆದರೆ ಸಂಪ್ರದಾಯ ಮಾನ, ಮರ್ಯಾದೆ, ಮದುವೆಯಾಗಬೇಕಾಗಿರುವ ನಾದಿನಿಯರು, ತಂಗಿಯರು ನನ್ನ ಕಣ್ಮುಂದೆ ಸುಳಿದು ಸುಮ್ಮನಾಗುತ್ತೇನೆ. ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ಅಂದುಕೊಂಡರೂ ಧೈರ್ಯಬರುತ್ತಿಲ್ಲ. ನನ್ನ ಹಸಿವು ತೀರಿಲ್ಲ. ಸ್ವಾರ್ಥದ ಮೊಟ್ಟೆಯಾಗಿ ಎಲ್ಲರನ್ನು ಧಿಕ್ಕರಿಸಿ ನಿಜವಾದ ಗಂಡಸಿನ ತೋಳುಗಳಲ್ಲಿ ಸೆರೆಯಾಗಬೇಕೆಂದು ಅಂದುಕೊಳ್ಳುತ್ತೇನೆ. ಆದರೆ ಮದುವೆಯಾಗಿರುವ ನನ್ನನ್ನು ಸ್ವೀಕರಿಸುವ ಗಂಡಸರಾದರೂ ಯಾರಿದ್ದಾರೆ. ಅಥವ ಯಾರಿಗೆತಾನೇ ನನ್ನ ತೀರ ವೈಯುಕ್ತಿಕ ಸಮಸ್ಯೆ ಅರ್ಥವಾಗಿರುತ್ತೆ ?.... .... ... ನೀನೇ ಹೇಳು, ನಾನು ಇಂಥ ಪರಿಸ್ಥಿತಿಯಲ್ಲಿ ಏನ್ಮಾಡಬೇಕು. ಎಲ್ಲ ಕಡೆಯಿಂದಲೂ ಬಂಧಿತಳಾದ ನಾನು ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ ಸಾಯುವುದೊಂದೇ ನನಗಿರುವ ಮಾರ್ಗ. ಇಲ್ಲವೇ ಹೀಗೆಯೇ ಒದ್ದಾಡುತ್ತಾ ಎಲ್ಲರೂ ಆಡುವ ಚುಚ್ಚು ಮಾತುಗಳನ್ನು ಕೇಳುತ್ತಾ ಬಿದ್ದುಕೊಂಡಿರುವುದು ಅರೆಸತ್ತ ಹುಳುವಿನಂತೆ,—ಎಂದು ಹೇಳುತ್ತಿದ್ದಂತೆ ಬಳಬಳನೆ ಅತ್ತುಬಿಟ್ಟಳು....ಮತ್ತೆ

ನನಗೆ ಒದ್ದಾಡುತ್ತಿದ್ದ ಆ ನೊಣದ ನೆನಪಾಯಿತು. ವಿಲಿ ವಿಲಿ ಒದ್ದಾಡು ತ್ತಿದ್ದ ಆ ದೃಶ್ಯ ಈಗ ಆ ದೃಶ್ಯದಲ್ಲಿ ನೊಣವಿಲ್ಲ. ರಮಾ ಇದ್ದಾಳೆ ಅಸಹಾಯಕ ಕಣ್ಣುಗಳಿಂದ ತಪ್ಪಿಸಿಕೊಳ್ಳುವ ದಾರಿ ಯಾವುದೆಂದು ಕೇಳುತ್ತಿದ್ದಾಳೆ. ದೂರದಲ್ಲಿ ಅವಳ ಗಂಡ ನರಸತ್ತವನಂತೆ ನಿಂತು ನೋಡುತ್ತಿದ್ದಾನೆ. ಅವನ ಕಪಾಳಕ್ಕೆ ಒಡೆದುಬಿಡುವಷ್ಟು ಸಿಟ್ಟು ಬಂತು, ಮುಂಡೇದಕ್ಕೆ ತಿಳಿದಿದ್ದೂ ಹೆಂಡತಿಯಾಕೆ ಬೇಕಾಯ್ತು ? ಅಂತ ಕೇಳ್ಬೇಕು' ಅಂತ ಅನ್ನಿಸ್ತು. ರಮಾ ....ರಮಾ.... ಇಗೋ ಬಂದೆ.... ನಾನು ಕೈ ನೀಡುತ್ತೇನೆ. ಕೆಸರಿನ ಗುಂಡಿಯಿಂದ ಎದ್ದು ಬಾ ಗಟ್ಟಿ ಯಾಗಿ ಹಿಡಿದುಕೋ ಎಂದು ಹೇಳುತ್ತಿದ್ದೆ' ಪ್ರಯತ್ನಿಸಿದಷ್ಟೂ ಕೆಸರಿ ನಲ್ಲಿ ಇನ್ನೂ ಹೂತುಹೋಗುತ್ತಿದ್ದಳು. ಅವಳೊಂದಿಗೇ ನನಗೂ ಅದ ರಲ್ಲಿಯೇ ಮುಗ್ಗರಿಸುವಂತಾಗುತ್ತಿತ್ತು. ಬೇಡ ಬೇಡ ನಾನೂ ಬಿದ್ದೇನು? ಎಂದು ಭಯವಾಗಿ ಕೈಬಿಟ್ಟೆ. ರಮಾ ಮತ್ತಷ್ಟು ಹೂತು ಹೋಗುತ್ತಾ ಕಣ್ಣಿಗೆ ಕಾಣಿಸದಂತಾದಳು. ಅಯ್ಯೋ ರಮಾ ! ಎಂದು ಕೂಗಿದೆ.... ಟ್ರೇನಲ್ಲಿ ಕಾಫಿ ಕಪ್ಪುಗಳನ್ನು ಹಿಡಿದು ತಂದ ರಮಾ ನನ್ನನ್ನು ಅಲುಗಿಸಿ ದಾಗಲೇ ನನಗೆ ಪ್ರಜ್ಞೆ ಮರಳಿದ್ದು. ರಮಾ ಈ ಬದುಕಿನೊಂದಿಗೆ ಒಪ್ಪಂದ ಮಾಡಿಕೊಂಡಂತಿತ್ತು. ಕತೆ ಹೇಳುವಾಗಿನ ನೋವಾಗಲಿ, ಉದ್ವೇಗವಾಗಲಿ ಅವಳಲ್ಲಿ ಉಳಿದಿರಲಿಲ್ಲ. ಅವಳ ಸೌಮ್ಯತೆಯನ್ನು ಕಂಡಷ್ಟೂ ನನ್ನ ಕರುಳು ಕುದಿಯುತ್ತಿತ್ತು. ಈ ಗಂಡು ಹುಳುಗಳ ನ್ನೆಲ್ಲಾ ಕ್ರಿಮಿನಾಶಕ ಔಷಧಿಯಿಂದ ಕೊಲ್ಲಬೇಕೆನಿಸಿತು. ನೊಣದ ಒದ್ದಾಟ ನೋಡಿ ಖುಷಿಪಟ್ಟ ಮನಸ್ಸು ರಮಾಳ ವಿಷಯದಲ್ಲಿ ತುಂಬಾ ಮೃದುವಾಯಿತು. ಗಂಡುಗಳು ಅನುಭವಿಸುವುದನ್ನು ನೋಡಿ ನಲಿಯ ಬೇಕೆಂದಿದ್ದ ಮನಸ್ಸಿಗೆ ನನ್ನ ಜಾತಿಯದೇ ಒದ್ದಾಡುತ್ತಿರುವುದನ್ನು ಕಂಡಾಗ ಕಾದ ಕಬ್ಬಿಣದ ಸಲಾಕೆಯಿಂದ ಕರುಳನ್ನು 'ಚುರ್' ಎನಿಸಿ ದಂತಾಯಿತು.

ಅಲ್ಲಿರುವುದಕ್ಕೆ ಮನಸ್ಸು ಬರಲಿಲ್ಲ. ನನ್ನ ಮನೆಗೆ ಬರಬೇಕೆಂದು ಅವಳನ್ನು ಆಹ್ವಾನಿಸಿ ಅವಳ ಗಂಡನ ಸಂಪಾದನೆಯಿಂದ ಮಾಡಿದ ಕಾಫಿ ಯನ್ನವಳಿಂದ ಮುಟ್ಟುವುದಕ್ಕೇ ಅಸಹ್ಯವಾಯಿತು. ಕುಂಟು ನೆಪ

ಹೇಳಿ ಹಿಂಪಕ್ಕೆ ಕಳುಹಿಸಿಬಿಟ್ಟೆ. ಎದ್ದವಳೇ ಬೇಗ ಬೇಗನೆ ಬಸ್ ಸ್ಟ್ಯಾಂಡಿನತ್ತ ನಡೆದೆ. ಹಾಗೂ ಮನೆ ಸೇರುವಷ್ಟು ಹೊತ್ತಿಗೆ ರಾತ್ರಿ 8 ಘಂಟೆ ದಾಟಿತ್ತು. ತಿನ್ನುವುದಕ್ಕೂ ಮನಸ್ಸಿಲ್ಲದೆ ಮೈ ಚಾಚಿದೆ. ನಿದ್ದೆ ಹತ್ತಿತ್ತು.

* * *

ರಮಾಳ ವಿಷಯ ಮರೆತೇ ಹೋಯಿತು. ಸ್ವಲ್ಪ ನೆಮ್ಮದಿ ದೊರೆಯಿತು. ರಮಾಳ ಗಂಡನ ಬಗೆಗಿಂತ ರಮಾಳ ಬಗ್ಗೆಯೇ ನನಗೆ ಸಿಟ್ಟು ಬರುತ್ತಿತ್ತು. ಇಷ್ಟು ಓದಿಕೊಂಡು ಹಾಳು ನೊಣದ ಹಾಗೆ ಸಾಯುತ್ತಿಳಲ್ಲ, ತನ್ನ ಕಾಲಮೇಲೆ ತಾನು ನಿಲ್ಲುವ ಧೈರ್ಯವಿಲ್ಲವೇ ಇವಳಿಗೆ'– ಎಂದು ಸಿಡಿಮಿಡಿಗೊಳ್ಳುತ್ತಿದ್ದೆನಾದರೂ ನಾನೇನೂ ಮಾಡುವಂತೆ ಇರಲಿಲ್ಲ. ಅದಕ್ಕೇ ಹಾಳುಬಿದ್ದುಹೋಗಲಿ ಅಂತ ಸುಮ್ಮನೆ ಮರೆಯುವುದಕ್ಕೆ ಪ್ರಯತ್ನಿಸಿದೆ.

ರಮಾಳ ಸ್ಥಿತಿ ನನಗೂ ಬಂದರೆ ?......ನಾನೇ ಪ್ರಶ್ನಿಸಿಕೊಂಡಾಗ ಅಷ್ಟು ಸುಲಭವಾಗಿ ಹೊಳೆಯಲಿಲ್ಲ. ರಮಾಳ ಗಂಡನ ಹಾಗೇ ಎಲ್ಲರೂ ಇರುವುದಿಲ್ಲ. ನಾನೂ ಯಾಕೆ ಪ್ರಯತ್ನಿಸಬಾರದು ! ಎಂದುಕೊಂಡೆ. ನನಗೆ ವಯಸ್ಸಾಗಿದ್ದರೂ ನನ್ನ ಕಾಮನೆಗಳು ಪೂರ್ತಿಯಾಗಿ ಸತ್ತಿರಲಿಲ್ಲ. ಒಮ್ಮೊಮ್ಮೆ ಮದುವೆಯಾಗದಿದ್ದರೆ ಹುಚ್ಚಿಯಾಗುತ್ತೇನೇನೋ ಅನ್ನಿಸುತ್ತಿತ್ತು. ಆದರೆ ಈ ವಯಸ್ಸಿನಲ್ಲಿ ಯಾರನ್ನು ಬಲೆಗೆ ಕೆಡವಲಿ ? ನನಗೆ ತಿಳಿದವರೆಲ್ಲ ಗಂಡಸರಿಗೂ ಮದುವೆಯಾಗಿದೆ ಆದರೇನಂತೆ. ಪ್ರಯತ್ನಿಸಿ ನೋಡೋಣವೆಂದುಕೊಂಡೆ. ಒಮ್ಮೆ ಊರ ಪಟೇಲ ಪಟ್ಟಣಕ್ಕೆ ಬಂದಾಗ ನನ್ನನ್ನು ಕಂಡು, ಪಾಪ ಅಪ್ಪ ಅಮ್ಮ ಇಬ್ಬರನ್ನೂ ಕಳೆದುಕೊಂಡು ಒಬ್ಬಳೇ ಹ್ಯಾಗಿರ್ತೀಯ ಮಗು ?—ಎಂದೇನೋ ವಿಚಾರಿಸಿದ್ದರು. ಆದರೆ ಅವರ ಧ್ವನಿಯಲ್ಲಿ ವಾತ್ಸಲ್ಯದ ವಾಸನೆಯಿರಲಿಲ್ಲ. ಮುಂದುವರಿಸಿದ

'ಹಳ್ಳೀ ಕಡೆ ಬಂದಾಗ ಒಂದ್ಸಲ ಮನೇತಂಕ ಬಂದುಹೋಗು.

ಸೀನು ಓದಿರೋವ್ನು ನಮ್ಮಂಥಾ ಹಳ್ಳೀ ಮುದಕ್ಕರ್ನ ಮರೀಬೇಡ'.... ಎಂದು ಹೇಳುತ್ತಾ, ಏನನ್ನೋ ನೆನಪು ಮಾಡಿಕೊಂಡು, ಅಂದ್ಹಾಗೆ, ನನ್ನ ಮೂರನೇ ಹೆಂಡ್ರು ತೀರಿಹೋದ್ಲು. ಮಕ್ಕಳಿಗೆಲ್ಲ ಮದುವೆ ಆಗೇದ. ಮನೆಯಾಗ ಒಂಟಿ ಜೀವನ ಬೇಸರಬರ್ತಾದ. ಏನ್ಮಾಡ್ಬೇಕೋ ಅಂದ— ಇಷ್ಟೆಲ್ಲಾ ನನ್ಹತ್ರ ಹೇಳೋದ್ರಲ್ಲಿ ಏನೂ ಪ್ರಯೋಜನವಿಲ್ಲವೆಂದು ಕೊಂಡೆ. ಆದರೂ ನಿರಾಸೆಗೊಳಿಸಬಾರದೂಂತ, ಅಯ್ಯೋ ಪಾಪ ! ತುಂಬಾ ದಾರುಣವಾಗೋಯ್ತಲ್ಲ, ನಿಮ್ಮ ಜೀವನ ಪಟೇಲರೇ ?— ಎಂದು ಪ್ರತಿಕ್ರಿಯೆ ತೋರಿಸಿದ್ದೆ.

ಯಾರಿಲ್ಲದಿದ್ದರೂ ಒಮ್ಮೆ ಊರ ಕಡೆ ಹೊರಟು ಬರೋಣವೆನಿಸಿತು. ಆದರೆ ಪಟೇಲರ ಮನೆಗೆ ಹೋಗಬೇಕೆಂದರೆ ಧೈರ್ಯ ಸಾಲದು ಅನ್ನಿಸಿತು. ಪಟೇಲರು ಒಬ್ಬರೇ ಮನೆಯಲ್ಲಿದ್ದರೆ ?—ಬಯಸಿದರೂ ಹೆದರಿಕೆ ಯಾಯಿತು. ಪಟೇಲರು ಸಾಮಾನ್ಯರಲ್ಲ. ಹಳ್ಳಿಯ ಹೆಣ್ಮಕ್ಕಳು ಪಟೇಲರ ನೆರಳು ಕಂಡರೆ ಹೆದರುತ್ತಿದ್ದರು. ಅವರ ಕಣ್ಣು ಬಿದ್ದ ಹೆಣ್ಣು ಯಾವುದೂ ಉಳಿಯುವುದಿಲ್ಲ ಅದಕ್ಕೇ ಇರ್ಬೇಕು ಅಮ್ಮ ಅಪ್ಪ ವಯಸ್ಸಿಗೆ ಬಂದ ಹುಡುಗಿಯಾದರೂ ಪಟ್ಟಣದಲ್ಲಿ ಓದುವುದಕ್ಕೆ ಕಳುಹಿ ಸಿದ್ದು ! ಅಂಥಾದ್ದರಲ್ಲಿ ನಾನು ಈಗೇನಾದರೂ ಹೋದರೆ—ಅದೇ ಥರದ ನೊಣವಾಗುತ್ತೇನೇನೋ. ಅವನ ಕಾಮದ ಕೆಸರಿನಲ್ಲಿ ಇಳಬೀಳುತ್ತೇ ನೇನೋ. ಆ ನೊಣದ ಒದ್ದಾಟದ ದೃಶ್ಯ ಕಣ್ಮುಂದೆ ಬಂದರೇನೇ ಈಗ ಭಯವಾಗುತ್ತಿತ್ತು. ನೊಣ ಸತ್ತರೆ ನೋವಿಲ್ಲ. ನಾನೇ ನೊಣ ವಾದರೆ ??—ರೆ ? ಎಂದು ಪ್ರಶ್ನಿಸಿಕೊಳ್ಳುತ್ತಲೇ ಇದ್ದೆ.

ಒಂದು ವೇಳೆ ಧೈರ್ಯಮಾಡಿ ಹೋದರೂ, ಸುತ್ತಲಿನ ಜನ ಏನೆಂದುಕೊಂಡಾರು ? ಜನದ ಭಯವನ್ನು ಹೇಗೋ ತಳ್ಳಿಹಾಕಿದೆ. ಅನುಭವಕ್ಕಾಗಿ ತೆರಬೇಕಾಗಿ ಬರುವ ಬೆಲೆಯ ಪರಿವೆಯಿಲ್ಲದೆ ಒಂದು ದಿನ ಹೊರಟೇ ಹೊರಟೆ.

* * *

ಪಟೇಲರಿಗೆ ಸಂತೋಷವೋ ಸಂತೋಷ. ಆಳು ಮಾದನ ಕೈಯಲ್ಲಿ ಎಳೆನೀರು ತರಿಸಿಕೊಟ್ಟರು. ಮಾದ ಒಂದು ತರದ ಭೀತಿಯ ಕಣ್ಣುಗಳಿಂದ ನನ್ನತ್ತ ನೋಡಿ ಕೇಳಿದ. "ಅವ್ವಾವ್ರೆ ನೀವೊಬ್ರೆ ಬಂದ್ರಾ? ನಿಮ್ಮ ಕೂಡೆ ಬೇರೆ ಯಾರಾದ್ರೂ ಬಂದಿದ್ರೆ ಚೆನ್ನಾಗಿತ್ತೇನೊ!"

ನನಗೆ ಯಾಕೇಂತ ಕೇಳಬೇಕೆನಿಸಿತು. ಇವರ ಹತ್ರ ಎಲ್ಲ ನನಗೇನು ಮಾತು ಎಂದು 'ಹೌದು ಮಾದ ನನಗೇನೊ ಭಯವಿಲ್ಲ. ಅದಕ್ಕೇ ನಾನೊಬ್ಬಳೇ ಬಂದೆ! ನೀನ್ಯಾಕೆ ಹೀಗೆ ಹೆದರಿದ ಹಾಗಿದ್ದಿ?' ಅಂತ ಪ್ರಶ್ನಿಸಿದ್ದಕ್ಕೆ ಜೆವಾಬಾಗಿ ಮಾದ ಸುಮ್ಮನೆ, ಪಟೇಲರು ಒಪ್ಪಿಸಿದ ಬೇರೊಂದು ಕೆಲಸದ ಮೇಲೆ ಹೊರಟುಬಿಟ್ಟ.

ಪಟೇಲರು ಈಗ ತಾರಸಿ ಮನೆ ಕಟ್ಟಿಸಿದ್ದರು. ಮನೆ ನೋಡಲು ಆಹ್ವಾನಿಸಿದರು. ನಿರ್ಭಯವಾಗಿ ಹೊರಟೆ. ಸುತ್ತ ಎಲ್ಲ ಕೋಣೆಗಳನ್ನೂ ತೋರಿಸಿದರು. ಒಂದು ನಿಮಿಷ ಬರುತ್ತೇನೆಂದು ಹೇಳಿ ಹೊರಟು ಐದು ನಿಮಿಷಗಳ ನಂತರ ನಾನಿದ್ದೆಡೆಗೆ ಬಂದು ಹಿಂದಿನಿಂದ ನನ್ನನ್ನು ಬಳಸಿದರು. ಬಿಗಿಯಾಗಿ ಹಿಡಿದರು. ಐವತ್ತರ ಗಡಿ ಮುಟ್ಟುತ್ತಿದ್ದರೂ ಕೈಯಲ್ಲಿ ಪೈಲ್ವಾನ್ ಬಲ ಇದ್ದ ಹಾಗೆ ಇತ್ತು. ಭಯವಾಯಿತು. ತಲೆತಿರುಗಿಸಿ ಮುಖದ ಮೇಲೆ ಹೊಡೆಯಲು ಪ್ರಯತ್ನಿಸಿದೆ. ಆದರೆ ಆ ಬಿಗಿಯಾದ ಬಂಧನದಲ್ಲಿ ಸಿಲುಕಿದ ನನಗೆ ತಲೆ ತಿರುಗಿಸಲು ಆಗಲಿಲ್ಲ. ಒದ್ದಾಡಿದೆ. ಕಚ್ಚಲು ಪ್ರಯತ್ನಿಸಿದೆ. ಯಾವುದಕ್ಕೂ ಆಸ್ಪದವಿಲ್ಲದಂತೆ ಬಿಗಿದು ಹಿಡಿದಿದ್ದರು. ಕೂಗಲೂ ಆಗದಂತೆ ರುಮಾಲನ್ನು ಬಾಯಿಗೆ ತುರುಕಿದರು. ವಿಲಿ ವಿಲಿ ಒದ್ದಾಡಿದೆ. ನೊಣದ ನೆನಪಾಯಿತು. ಬರಬರುತ್ತಾ ನಾನೇ ನೊಣವಾದೆ, ನೊಣವಾದೆ....ಒದ್ದಾಡಿ ಒದ್ದಾಡಿ ತಣ್ಣಗಾದೆ.

# ಮತ್ತೆ ಮರಳಲಾರೆ

ಬೆಳಗಿನ ಜಾವ ನಾಲ್ಕು ಗಂಟೆಯಿರಬಹುದು. ದೂರದಲ್ಲಿ ಆಂಬ್ಯುಲೆನ್ಸ್ ವ್ಯಾನಿನ ಗಂಟೆ ಶಬ್ದ. ಟ್ರಾನ್ಸಲ್ಯೂಸೆಂಟ್ ಕತ್ತಲು ಅಸ್ಪಷ್ಟವಾಗಿ ಕಾಗೆಯ 'ಕಾಕಾ' ಧ್ವನಿ. ಪಕ್ಕದ ಕೋಣೆಯೊಳಗಿಂದ ಗಂಡಸು ವ್ಯಕ್ತಿಯ ನರಳಾಟದ ಧ್ವನಿ. ಆ ಮೌನ ಮುಂಜಾನೆಯ ಎದೆ ಸೀಳಿ ಕೇಳಿ ಬರುತ್ತಿದೆ. ಮಧ್ಯೆ ಮಧ್ಯೆ ನರಜೀವಿಗಳ ಅಸ್ತಿತ್ವದ ನೆನಪು ತರುವುದಕ್ಕೆಂಬಂತೆ ಗಸ್ತು ತಿರುಗುತ್ತಿರುವ ಘೂರ್ಖಾನ ಬೂಟು ಕಾಲಿನ ಸಪ್ಪಳ ಕೇಳಿ ಬರುತ್ತಿವೆ. ನಿದ್ದೆ ಹತ್ತದ್ದ ಸುನೀತ ಹಾಸಿಗೆಯ ಮೇಲೆ ಹೊರಳಾಡುತ್ತಿದ್ದವಳು ಏನೇನೋ ನೆನಸಿಕೊಂಡವಳಂತೆ ಆತುರಾತುರವಾಗಿ ಎದ್ದು ಎದುರಿಗೇ ಗೋಡೆಗಿದ್ದ ವಾಷ್ ಬೇಸಿನ್‌ನಲ್ಲಿ ಬಾಯಿ ಮುಕ್ಕುಳಿಸಿ ಮುಖ ಒರೆಸಿಕೊಂಡು. ಒಳಕೋಣೆಯ ಪೆಟ್ಟಿಗೆಯಲ್ಲಿದ್ದ ವೀಣೆಯನ್ನು ಹೊರ ತೆಗೆದು ಶೃತಿ ಮಾಡತೊಡಗಿದಳು ಆ ಪ್ರಶಾಂತ ವಾತಾವರಣದಿಂದ ಸ್ಫೂರ್ತಿಗೊಂಡ ಅವಳ ಬೆರಳುಗಳು ವೀಣೆಯ ತಂತಿಗಳ ಮೇಲೆ ಅನಾಯಾಸವಾಗಿ ನಡೆಯತೊಡಗಿ ಮಧುರ ಭಾವ ತರಂಗಗಳು ತೇಲಿ ತೇಲಿ ತನ್ಮಯತೆಯಲ್ಲಿ ಅವಳ ಮನಸ್ಸನ್ನು ಮುಳುಗಿಸಿಬಿಟ್ಟಿತು.

ಉದಯರಾಗದಿಂದ ಆರಂಭವಾದುದು ಬರಬರುತ್ತಾ ಬಿರುಸಾಗತೊಡಗಿತ್ತು. ಮೂಕ ಮನಸ್ಸಿನ ಉದ್ವಿಗ್ನತೆ, ಆವೇಶ, ಉನ್ಮತ್ತತೆ, ನಾದ ಮಾಧ್ಯಮದಲ್ಲಿ ಹೊರಗೆಡಹಲು ಮೊದಲಿಟ್ಟವು. ಪರವಶತೆಯ ಸೆರೆಗೊಳಗಾದ ಅವಳಿಗೆ ಹೊರ ಜಗತ್ತಿನ ಅರಿವಿದ್ದಂತೆ ಅನಿಸಲಿಲ್ಲ.

'ಸುನೀತ'.... 'ಸುನೀತ'.... ಎಂದು ಅಪ್ಪ ಕೂಗಿದರೂ ಪರವಶತೆಯಲ್ಲಿ ಅದು ಕಿವಿಗೆ ಬೀಳಲಿಲ್ಲ. ಕಷ್ಟದಿಂದ ಅಪ್ಪನೇ ಎದ್ದು ಬರುತ್ತಾ ಹೊಸ್ತಿಲು ಎಡವಿ, ತೂಕ ತಪ್ಪಿ 'ದೊಪ್ಪೆಂದು' ಬಿದ್ದ ಸದ್ದಾದಾಗಲೇ.... ಅವಳಿಗೆ ಪರವಶತೆಯ ಮಂತ್ರ ಬಿಟ್ಟಿದ್ದು, ತಡವರಿಸುತ್ತಾ ಏಳುವ ಪ್ರಯತ್ನದಲ್ಲಿದ್ದ ಅಪ್ಪನ ಹತ್ತಿರಕ್ಕೆ ಓಡಿ ಹೆಗಲುಕೊಟ್ಟು ಎಬ್ಬಿಸಿ ಮತ್ತೆ ಅವನ ಹಾಸಿಗೆಯತ್ತ ನಡೆಸಿಕೊಂಡು ಹೊರಟಳು.

ಹೇಳದೆ ಕೇಳದೆ ಎದ್ದು ಬಂದದ್ದು ಕೆಡುಕೆನಿಸಿ ಸ್ವಲ್ಪ ಸಿಟ್ಟು ಮಾಡಿಕೊಂಡು ಅಪ್ಪನನ್ನು, 'ನೀನು ಯಾಕೆ ಎದ್ದು ಬಂದೆಯಪ್ಪಾ' ಎಷ್ಟು ಸಲ ಹೇಳಿದರೂ ನೀನು ಹೀಗೇ'—ಎಂದು ದೂರುವ ಧ್ವನಿಯಿಂದ ಕೇಳಿದಳು "ಇಲ್ಲಮ್ಮ ನಾನು ಮೂರು ನಾಲ್ಕು ಸಲ ಕೂಗಿದೆ. ಆದರೆ ನಿನಗೆ ಸರಿಯಾಗಿ ಕೇಳಿಸಲಿಲ್ಲ'—ಸ್ಪಷ್ಟಪಡಿಸುವವನಂತೆ ಹೇಳಿದ.

"ಇನ್ನೊಂದು ಸಲ ಹೀಗೆ ಎದ್ದೇಳ ಬೇಡಪ್ಪ, ಏನಾದರೂ ಬೇಕಿದ್ದರೆ ನನ್ನನ್ನೇ ಕರಿ. ನೀನಾಗಿ ಯಾವ ಸಾಹಸವನ್ನೂ ಮಾಡ ಬೇಡ"—ಮೃದುವಾಗಿ ಹೇಳಿದಳು.

"ಸುನೀತ, ಇವತ್ತು ನನಗೆ ಕನಸು ಬಿತ್ತು, ರಾಜು ಬಂದಿದ್ದಾನಂತೆ. ನನ್ನನ್ನು ನೋಡಿ, ತುಂಬಾ ಬೇಜಾರು ಮಾಡಿಕೊಂಡು, 'ಅಪ್ಪ ಇಷ್ಟು ದಿವಸ. ನಿನ್ನನ್ನು ನಾನು ನೋಡಿಕೊಳ್ಳಲಿಲ್ಲ. ಸುನೀ ಜವಾಬ್ದಾರೀನೂ ತಪ್ಪಿಸಿಕೊಂಡು ತಲೆ ಮರೆಸಿಕೊಂಡಿದ್ದೆ. ನನಗೇ ನನ್ನ ವರ್ತನೆ ತೀರಾ ಕ್ರೂರ ಅನ್ನಿಸಿಬಿಟ್ಟಿದೆ. ಇನ್ನೇನೂ ನೀನು ಯೋಚ್ನೆ ಇಟ್ಕೊಳ್ಳ ಬೇಡಾಂತ'—ನನಗೆ ಸಮಾಧಾನ ಹೇಳ್ತಿದ್ದ.

ಅಪ್ಪನ ಆಸೆ ತುಂಬಿದ ಮಾತನ್ನು ಕೇಳಿ ಸುಮ್ಮನೆ, ವ್ಯಂಗ್ಯವಾಗಿ 'ಹೂಂ', ಎಂದಳು, ಆಸೆ, ಭರವಸೆಗಳನ್ನು ತುಂಬಿಕೊಂಡು ಉಸಿರಾಡು ತ್ತಿದ್ದ ಅಪ್ಪನ ಮನಸ್ಸನ್ನು ಛಿದ್ರಗೊಳಿಸಲು ಇಷ್ಟವಾಗಲಿಲ್ಲ, ಅದಕ್ಕೇ ಸುನೀತಳು ಕೇಳಿಯೂ ಕೇಳದಂತೆ ವರ್ತಿಸಿದಳು.

ಶರೀರ ಜೀರ್ಣವಾಗಿದ್ದರೂ, ಪಾತಾಳಗುಹೆಯ ಮಣಿಗಳಂತಿರುವ ಅಪ್ಪನ ಕಣ್ಣುಗಳ ದೃಷ್ಟಿಯಿಂದ ಅವಳ ಅನ್ಯಮನಸ್ಕತೆ ತಪ್ಪಿಸಿ ಕೊಳ್ಳಲು ಸಾಧ್ಯವಾಗಲಿಲ್ಲ, ಸುನೀತೆಯ ಅಪನಂಬಿಕೆಯ ಮನೋಭಾವ ಅಪ್ಪನ ಮನಸ್ಸಿಗೆ ನೋವುಂಟು ಮಾಡಿತು.

"ಯಾಕೆ ಸುನೀತ, ನನ್ನ ಮಾತಿನಲ್ಲಿ, ನಂಬಿಕೆಯಲ್ಲಿ ನಿನಗೆ ವಿಶ್ವಾಸ ವಿಲ್ಲವೇ' ಎಂದು ನೊಂದ ಧ್ವನಿಯಲ್ಲಿ ಪ್ರಶ್ನಿಸಿದ.

'ಇದೆ, ಇಲ್ಲ ಎಂದು ಸ್ಪಷ್ಟವಾಗಿ ಹೇಳುವುದು ಹೇಗೆ? ಅಪ್ಪನ ದೃಷ್ಟಿಯಲ್ಲಿ, 'ನಂಬಿಕೆ, ಭರವಸೆಗಳೇ ಬದುಕನ್ನು ಸಹನೀಯವಾಗುವಂತೆ

ಮಾಡುತ್ತವೆ. ಅದೊಂದೂ ಇಲ್ಲದಲ್ಲಿ ಪಕ್ಷದ ಬದುಕುವುದು ಭಯಂಕರವೆನಿಸುತ್ತದೆ. ಬಾಳಿಗೆ ಒಂದು ನಂಬಿಕೆ, ಆಸೆ ಇವುಗಳ ಆಧಾರ ಬೇಕು. ಅಸಾಧ್ಯವೆಲ್ಲವೂ ಸಾಧ್ಯವೆಂಬ ಬಲವಾದ ನಂಬಿಕೆಗೆ ಜೋತುಬಿದ್ದರೆ ಬಾಳು ಸಹ್ಯ. ಆದರೆ ಸುನೀತಳಿಗೆ ಆಸೆ, ಭರವಸೆಗಳಲ್ಲಿ ವಿಶ್ವಾಸವಿಲ್ಲ, ಅವಳದು ನಿರಾಶಾವಾದ. ಆಶಾವಾದಕ್ಕೆ ಅಂಟುಕೊಂಡಿದ್ದರಿಂದಲೇ ಅಪ್ಪನಿಗೆ ಇಷ್ಟು ವಯಸ್ಸಾದರೂ, ಹೊಡೆತಗಳು ಬಿರುಸಾದರೂ ಬದುಕಿದ್ದಾರೆ. ಆದರೆ 'ನಿರಾಶಾವಾದಿ' ಸುನೀತಳಿಗೆ ಬದುಕೆಂದರೇನೇ ಭಯಂಕರ ಸ್ವಪ್ನವೆನಿಸುತ್ತದೆ. ದೇವರು, ಪಾಪ, ಪುಣ್ಯ ಇಂತಹ ಅಮೂರ್ತ ತತ್ವಗಳಿಗೆ ಏನಾದರೂ ಅರ್ಥವಿದ್ದ ಕರ್ಮ ಸಿದ್ಧಾಂತ—ನಿಜವಾದರೆ, ಪುಣ್ಯ ಮಾಡಿದರೆ ಮನುಷ್ಯ ಜನ್ಮ ಎಂಬ ಸಿದ್ಧಾಂತಕ್ಕೆ ವಿರೋಧವಾಗಿ ಪಾಪ ಮಾಡಿದರೆ ಮನುಷ್ಯ ಜನ್ಮ ಬರುವುದು ಎಂದು ನಂಬಿದ್ದಳು.

ಬಂಧುತ್ವ, ರಕ್ತ ಸಂಬಂಧ ಅನ್ನುವುದೆಲ್ಲ ಬರಿ ಸುಳ್ಳು. ಮಾಡುವುದಕ್ಕೆ ಕೆಲಸವಿಲ್ಲದೆ ಇಂತಹ ಅರ್ಥಹೀನ ಪದಗಳ ಕೋಶವನ್ನು ಸೃಷ್ಟಿ ಮಾಡಿರುವುದು' ಎಂದೇ ತಿಳಿದಿದ್ದಳು. ಸ್ವಾರ್ಥದ ಸಮಸ್ಯೆಗೆ ಪರಿಹಾರ 'ಕರುಳ ಕೊರಳಿನ ಕೊಲೆ' ಇದಕ್ಕೆಲ್ಲಾ ಒಂದು ಅರ್ಥವಿದೆ ಎಂದು ಭಾವಿಸಿ ಬೆಲೆ ಕೊಡಲು ಹೊರಟರೆ ವೈಯುಕ್ತಿಕವಾದ ಸುಖಕ್ಕೆ 'ತಿಲಾಂಜಲಿ' ಕೊಡಬೇಕಾದ್ದೆ !

ಮೊದಲಿನಿಂದಲೂ ಇಂತಹ ಕ್ರಾಂತಿ ವಿಚಾರಗಳಿಗೆ ನೆಲೆ ಬೆಲೆ ಕೊಟ್ಟ ಇವಳ ಅಸಹಾಯಕ, ರೋಗ ಪೀಡಿತ' ಅಪ್ಪನನ್ನು ಹತ್ತಿರ ಇಟ್ಟುಕೊಂಡು ಪೋಷಿಸಿ ಆದರಿಸುತ್ತಿರುವುದೇ ಬಿಡಿಸಲಾಗದ ಒಗಟು. ಯಾರಾದರೂ ಈ ವಿಷಯವಾಗಿ ಕೇಳಿದರೆ, ಮಾತನ್ನೇ ತೇಲಿಸಿಬಿಡುತ್ತಿದ್ದಳು. ಅವಳಿಗೇ ಈ ವಿಷಯವಾಗಿ ಏನೂ ಸ್ಪಷ್ಟವಿರಲಿಲ್ಲ. 'ತಂದೆ' ಎನ್ನುವ ಬಂಧುತ್ವಕ್ಕೋ, ಇಲ್ಲಿ ಅರಿವಿಲ್ಲದ ಅಂತರ್ಯದ ಸೆಳೆತಕ್ಕೋ...ಒಂದೂ ತಿಳಿಯುತ್ತಿರಲಿಲ್ಲ.

'ಮಕ್ಕಳು' ಎನ್ನುವ ಒಂದು ಕಾರಣಕ್ಕೆ 'ಅಪ್ಪ' ಅಣ್ಣನ ಕೃತಘ್ನತೆಯನ್ನು ಮರೆಯಬಹುದು ಮತ್ತೆ ಬಳಿಗೆ ಕರೆದು ಕೊಳ್ಳಲೂ ಬಹುದು ಆದರೆ ತನಗೇನು ? 'ತಂಗಿ' ಅನ್ನೋ ಸೆಳೆತ ತನಗಿಲ್ಲದ

ಮೇಲೆ, ತಾನು ಮಾತ್ರ ಅವನ ವಿಚಾರವಾಗಿ ತಲೆಕೆಡಿಸಿಕೊಳ್ಳಬೇಕಾದ ಅವಶ್ಯಕತೆಯಿಲ್ಲ'—ಎಂದೇ ಸಾಧಿಸುತ್ತಿದ್ದಳು.......

"ಅಮ್ಮ" ಇದ್ದಿದ್ದರೆ ಹೀಗೆ ಅವರೆಲ್ಲಾ ದಿಕ್ಕಾಪಾಲಾಗಿ ಹೋಗಬೇಕಾದ ಪರಿಸ್ಥಿತಿ ಬರುತ್ತಿರಲಿಲ್ಲ. ಅಮ್ಮನಿಗೆ ಬ್ರೆಸ್ಟ್ ಕ್ಯಾನ್ಸರ್. ಬದುಕುವುದು ಸಾಧ್ಯವಿಲ್ಲವೆನ್ನುವುದು ಎಲ್ಲರಿಗೂ ತಿಳಿದದ್ದೆ. ಅಪ್ಪನಿಗೊಬ್ಬರಿಗೇ ಅಮ್ಮನ ವಿಷಯದಿಂದ ತೀರಾ ನೋವಾಗಿದ್ದು ಮಕ್ಕಳು ವಯಸ್ಸಿಗೆ ಬಂದ ಮೇಲೆ ಅವರನ್ನು ನೋಡಿಕೊಳ್ಳುತ್ತಾರೆ ಅನ್ನುವ ಭ್ರಮೆ ಅವರಿಗೆ ಇದ್ದಿರಲಿಲ್ಲ. "ಗಂಡ ಹೆಂಡತಿ "ಅವಿಭಾಜ್ಯ" ಅಂಕಿಗಳಿದ್ದ ಹಾಗೆ ಎಂದು ಭಾವಿಸಿದ್ದ "ಅಪ್ಪ"ನಿಗೆ ಅಮ್ಮನ ಖಾಯಿಲೆ ಏನೆಂದು ತಿಳಿದಂದಿನಿಂದಲೇ "ಒಂಟಿತನ"ದ ಭಯ ಪೀಡಿಸತೊಡಗಿತ್ತು. ಅದಕ್ಕೇ ಅಮ್ಮನಿಗಿಂತ ಮುಂಚೆ ತಾನೇ ಸಾಯಬೇಕೆಂದು ಹಾರೈಸುತಿದ್ದ ಅಪ್ಪನನ್ನು ಕಂಡು ವಿಚಿತ್ರವೆನಿಸುತ್ತಿತ್ತು ಸುನೀತಳಿಗೆ, ಗಡುಸಾದ "ಅಪ್ಪ'ನೇ ಹೀಗೆ ಆಲೋಚಿಸಿದರೆ ಮದುವೆಯಿಲ್ಲದ ತಮ್ಮ ಪಾಡೇನೆಂದು ಒಮ್ಮೊಮ್ಮೆ ಸುನೀತಳು ಚಿಂತಿಸುತ್ತಿದ್ದಳು. ಅಮ್ಮ ಅಪ್ಪನನ್ನು ಅವರ ಮದುವೆಯ ವಿಚಾರವಾಗಿ ಒತ್ತಾಯಿಸುತ್ತಿರುವಷ್ಟರಲ್ಲಿಯೇ ಕೊನೆಯುಸಿರೆಳೆದಳು.

ಸುನೀತ, ಸುನೀತಳ ಅಕ್ಕ ರೇಣುಗೆ ಮಾತ್ರ ಮೊದಲೆರಡು ದಿನ ಅಮ್ಮನ ಅಗಲಿಕೆಯ ನೋವು ಸ್ವಾಭಾವಿಕವಾಗಿತ್ತು. ಅವರಿಬ್ಬರ ಓದೂ ಮುಗಿದು, ಕೆಲಸ ಸಿಕ್ಕಿದುದರಿಂದ ಹೊಟ್ಟೇ ಪಾಡಿನ ಸಮಸ್ಯೆಯಿರಲಿಲ್ಲ. ಅಣ್ಣ ರಾಜು, "ಅಮ್ಮ"ನ ಅಗಲಿಕೆಯನ್ನು ಅಷ್ಟಾಗಿ ಹಚ್ಚಿಕೊಂಡಂತೇನೂ ಇರಲಿಲ್ಲ. ಈ ಒಂದೆರಡು ತಿಂಗಳಿಂದ ಬಹಳ ಬಿರುಸಾಗಿ ಓಡಾಡುತ್ತಿರುವ ಹಾಗೇ ಅನಿಸಿದರೂ ಯಾರೂ ಎದೆಗಾರಿಕೆಯಿಂದ ಅವನ ವಿಷಯವನ್ನು ಕೇಳುತ್ತಿರಲಿಲ್ಲ. ಆದರೆ ಅವನಾಗಿ ಒಂದು ದಿನ, "ಅಪ್ಪ"ನಿಗೆ ನಾನು "ಫಾರಿನ್"ಗೆ ಹೋಗುತ್ತಿರುವುದಾಗಿ ತಿಳಿಸಿದ. ಅಪ್ಪನೂ ಯಾಕೆ, ಏನೂ ಅಂತ ವಿಚಾರಿಸಲಿಲ್ಲ. ಬೆಳೆದವರು ಅವರವರ ಜವಾಬ್ದಾರಿ ಅವರವರಿಗೆ ಸೇರಿದ್ದು ಎಂದು ಭಾವಿಸಿದ್ದರಿಂದ ಯಾವ ವಿಷಯದಲ್ಲಿಯೂ ಪ್ರವೇಶ ಮಾಡುತ್ತಿರಲಿಲ್ಲ.

ರೇಣುಗೆ ಅಹಮದಾಬಾದಿಗೆ ಹೋಗಬೇಕಾಗಿ ಬಂತು. ಮೆಡಿಕಲ್ ಆಫೀಸರಾಗಿ ತೃಪ್ತಿಯಿಂದ ಹೊರಟು ಹೋದಳು. ಇನ್ನುಳಿದಿದ್ದವರೆಂದರೆ ಸುನೀತ, ನರಳುತ್ತಿರುವ ಅಪ್ಪ". ಪೂರ್ವೀಕರಿಂದ ಬಂದ ದೊಡ್ಡದಾದ ಆ ಹಳೆಯ ಬಂಗಲೆ. ರೇಣು ಹೋದಂದಿನಿಂದ ಸುನೀತಳಿಗೆ ಹುಚ್ಚು ಹಿಡಿದಂತಾಗಿತ್ತು. ಕೆಲಸ ಮಾಡಲು ದಿಕ್ಕು ತೋಚದಂತಾಯಿತು. ಕೆಲಸಕ್ಕೆ ಸೇರಿದರೆ ಸ್ವಲ್ಪವಾದರೂ ವಾಸಿ ಹೇಗೋ ದಿನ ಕಳೆದು ಹೋಗುತ್ತೆ ಎಂದುಕೊಳ್ಳುತ್ತಿದ್ದಳು. "ಅಮ್ಮ"ನಿಂದ ಸುನೀತ ಸಂಗೀತದ ಅಭಿರುಚಿಯನ್ನು ಬೆಳೆಸಿಕೊಂಡಿದ್ದಳು. ಅಷ್ಟೇ ಅಲ್ಲ ಅಲ್ಪಸ್ವಲ್ಪ ಕಲಿತಿದ್ದನ್ನು ಈಗ ಅಭ್ಯಾಸಕ್ಕೆ ಹಚ್ಚಿ, ಹೊಸಹೊಸದಾಗಿ ರಾಗಸೃಷ್ಟಿಯ ಪ್ರಯೋಗಕ್ಕೆ ತೊಡಗಿದಳು. ಕ್ರಮವಾಗಿ ಯಶಸ್ಸು ಅವಳದಾಯಿತು. ಮನಸಿನ ಒಂಟಿತನವನ್ನು ಅವ್ಯಕ್ತವೇದನೆಯನ್ನು ಮರೆಯುತ್ತಿದ್ದಳು. ಕೊನೆಕೊನೆಗೆ ಅದೊಂದೇ ಅವಳಿಗೆ ಆಸರೆಯೆನ್ನುವಷ್ಟು ಆತ್ಮೀಯತೆ ಬೆಳೆಯಿತು—ಅವಳಿಗೂ ಅವಳ ಸಂಗೀತಕ್ಕೂ. ಹೀಗಾಗಿ ಒಮ್ಮೊಮ್ಮೆ ಇದ್ದಕ್ಕಿದ್ದಂತೆ, ಯಾವುದೋ ಭೂತ ಹೊಕ್ಕಂತೆ ಹೊತ್ತಲ್ಲದ ಹೊತ್ತಿನಲ್ಲಿ ಎದ್ದು ವೀಣೆ ಹಿಡಿದು ಕೂಡುತ್ತಿದ್ದಳು.

ಅಪ್ಪನಿಗೆ ಅವಳ ಮೇಲೆ ಅಸಮಾಧಾನ. ಅವನು ಬಂದ ಕೂಡಲೇ ಸುನೀತಳಿಗೆ ಯಾವುದಾದರೂ ಸಂಬಂಧವನ್ನು ನೋಡಿ ಮದುವೆ ಮಾಡಬೇಕೆಂದು ಯೋಚಿಸಿದ್ದರು. "ರೇಣು" ತನಗೆ ಮದುವೆ ಬೇಡವೆಂದು ಸ್ಪಷ್ಟವಾಗಿ ಹೇಳಬಿಟ್ಟಿದ್ದಳು. ರಾಜುವಿನ ಬಗ್ಗೆ ಸುನೀತಳಿಗೆ ಒಳ್ಳೆಯ ಭಾವನೆಯಿಲ್ಲ. ಅದೂ ಮೊನ್ನೆ ತಾನೆ ಮದುವೆಯಾಯಿತೆಂಬ ಸುದ್ದಿ ತಿಳಿದಂದಿನಿಂದ ದುಮುಗುಟ್ಟುತ್ತಿದ್ದಳು ಇದೋ ನಿನ್ನ ಮಗ ಕೆಂಪು ಕೋತಿಯನ್ನು ಮದುವೆಯಾಗಿದ್ದಾನಂತೆ" ಎಂದು ಹೇಳಬೇಕೆಂದು ನಾಲಿಗೆ ತುದಿವರೆಗೂ ಬಂದರೂ ಸುಮ್ಮನಿದ್ದಳು. ಅದ್ಯಾಕೋ ಎಷ್ಟು ಪ್ರಯತ್ನಿಸಿದರೂ "ಅಪ್ಪ"ನ ಮನಸ್ಸನ್ನು ನೋಯಿಸುವುದಕ್ಕೆ ಆಗುತ್ತಲೇ ಇರಲಿಲ್ಲ ಅದಕ್ಕೇ ಅವಳು ಮೆದುವಾಗಿ,

"ನೋಡಪ್ಪ, ರಾಜು ಬಂದರೆ ನನಗೂ ಸಂತೋಷವೇ" (ಸುಳ್ಳು ಹೇಳುತ್ತಿರುವುದಕ್ಕೆ ತನಗೇ ಅಸಹ್ಯವೆನಿಸಿತು) ಆದರೆ ನೀನು ಮಾತ್ರ

ಇಷ್ಟಕ್ಕೆಲ್ಲಾ Excite ಆಗಬಾರದು. ಮೊದಲು ಬರಲಿ, ನಿನ್ನ ಕನಸು ನಿಜವಾದರೂ ಆಗಬಹುದು. (ಅವಳಿಗೆ ಎಳ್ಳಷ್ಟೂ ನಂಬಿಕೆಯಿರಲಿಲ್ಲ) ನೀನೀಗ ಸ್ವಲ್ಪ ರೆಸ್ಟ್ ತಗೋ, ಈಗಲೇ ಹಾಲು ಕಾಸಿ ತಂದುಬಿಡು ತ್ತೇನೆ ಎಂದು ಹೇಳಿದವಳೇ ಸರಸರನೆ ಒಳನಡೆದಳು.

ಕಡ್ಡಿ ಗೀರಿ ಹೊತ್ತಿಸಲು ಭುಗಿಲೆಂದು ಹೊತ್ತಿಕೊಂಡ ಬೆಂಕಿ ಒಂದು ಕ್ಷಣ ಹಾಯೆನಿಸುವಂತೆ ಇವಳ ಮುಖಕ್ಕೆ ಕಾವು ಕೊಟ್ಟಿತು. Bournvita ಡಬ್ಬ ತೆಗೆದಿಟ್ಟುಕೊಂಡಳು. ಹಾಲು ಕಾಯಿಸಲು ಇಟ್ಟ ಸುನೀತಳ ಮನಸ್ಸು ಮತ್ತೆ ವಿಚಾರದ ಸುಳಿಯಲ್ಲಿ ಸಿಕ್ಕಿತು. "ನಾನು ಆಜೀವ ಪರ್ಯಂತ, ಹಕ್ಕಿತ್ತಲಾಗದ, ಬೇಧಿಸಲಾಗದ ಸಾವಿರ ಸುತ್ತಿನ ಕೋಟೆ ಯೊಳಗೆ ಬಂದಿಯಾಗಿದ್ದೇನೆ. ನನ್ನಂತೆ ಬಂಧಿಯಾಗಿದ್ದು ತಪ್ಪಿಸಿಕೊಳ್ಳ ಲಾರದೆ ಅಲ್ಲಿಯೇ ಸತ್ತು ಕೊಳೆತುನಾರುವ ಹೆಣಗಳೇ ಗಾಳಿಯಲ್ಲಿ ತೇಲು ತ್ತಿರುವಂತಿದೆ. ಆದರೆ ನಾನು ಹಾಗಾಗಬಾರದು. ಹೇಗಾದರೂ ತಪ್ಪಿಸಿ ಕೊಂಡು ಹೊರಗೆ ಹೋಗಲೇಬೇಕು. ಸ್ವಚ್ಛವಾದ ಗಾಳಿ ಬೆಳಕನ್ನು ಕುಡಿಯಬೇಕು ; ಆದರೆ .......ಆದರೆ....ಏನದು....ಭಯಂಕರವಾಗಿದೆ........ ಚಿಂತೆ ಬೆಂಕಿಯಂತೆ ಕಾಣುತ್ತಿದೆ. ...ನನ್ನತ್ತಲೇ ಬರುತ್ತಿದೆ ಅಯ್ಯೋ ....ಸಿಕ್ಕಿಬಿದ್ದೆ....ಎಂದು ಚೀರಿ, ಕೈಯನ್ನು ಅಡ್ಡವಾಗಿಡಲು ಪ್ರಯತ್ನಿಸು ವಾಗ, ಹಾಲುಕ್ಕಿ ತಣ್ಣಗಾಗಿದ್ದ ಒಲೆಯ ಮೇಲಿನ ಪಾತ್ರೆಯ ಬಿಸಿ ತಾಕಿತು, Shock ಆದಂತಾಗಿ ಮತ್ತೆ ಮರಳಿತು ಅವಳ ಕಳೆದ ಪ್ರಜ್ಞೆ. "ದರಿದ್ರ ಮನಸ್ಸು"—ಎಂದು ಬೈದುಕೊಳ್ಳುತ್ತ ಹಾಲಿನ ಲೋಟವನ್ನು ಹಿಡಿದುಕೊಂಡು ನಡೆದಳು.

ಇಷ್ಟು ಹೊತ್ತು ಮಾಡಿದ ಮಗಳತ್ತ ಏನೋ ಪ್ರಶ್ನಿಸುವನಂತೆ ನೋಡಿದ ಅಪ್ಪನ ದೃಷ್ಟಿಯನ್ನು ಎದುರಿಸಲಾರದೆ ಸುನೀತ ಮುಖ ಕೆಳಗೆ ಮಾಡಿದಳು. ಮಗಳ ಮನಸ್ಸಿನ ಭಾವನೆಗಳನ್ನು ಗ್ರಹಿಸಲು ಪ್ರಯತ್ನಿ ಸಿದ. ಆದರೆ ಒಬ್ಬರ ಅಂತರ್ಯವನ್ನು ಇನ್ನೊಬ್ಬರು ಅರ್ಥ ಮಾಡಿ ಕೊಳ್ಳುವುದು ಕಷ್ಟ. ಕೈಲಾಗದ ಅಪ್ಪ ಚಡಪಡಿಸಿದ. ತನ್ನ ಅಸ ಮರ್ಥೆಯ ಬಗ್ಗೆ ಮಗಳ ಆಶ್ರಯದಲ್ಲಿ ಅವಳಿಗೆ ಹೊರೆಯಾಗಿ ಬದುಕು ತ್ತಿರುವುದರ ಬಗ್ಗೆ ತೀರಾ ಕಸಿವಿಸಿಯೆನಿಸಿತು. ಏನಾದರೇನು ? ಅಸಹಾಯಕ

ನಾಗಿ ಇರುವುದರಿಂದ ಅನುಭವಿಸದೆ ಗತ್ಯಂತರವಿಲ್ಲ. ಎಷ್ಟೇ ಭಯಂಕರ ವೆನಿಸಿದರೂ ಸ್ವಾಭಿಮಾನದ ಗಂಟಲಿರಿದು—ದೇವರು ಕರೆ ಕಳುಹಿಸುವವ ರೆಗೂ ಇರದೆ ವಿಧಿಯಿಲ್ಲವೆಂದುಕೊಳ್ಳುತಿದ್ದ.

ಸುನೀತಳ ಮನಸ್ಸು ಜ್ವಾಲಾಮುಖಿಯಾಗ ತೊಡಗಿತು. ಒಳ ಗೊಳಗೇ ಉಕ್ಕುತ್ತಿರುವ ಲಾವಾರಸ ಹೊರಗೆ ಸಿಡಿದಂತೆ ತಣ್ಣಗೆ ಮಾಡ ಬೇಕಾದರೆ ಖಾಂಡವ ದಹನದ ಬೆಂಕಿಯಾರಿಸಲು ಬೇಕಾದ್ದಕಿಂತ ಎರಡ ರಷ್ಟು ಬೇಕೆನಿಸಿತ್ತು ಮಳೆ.

ಅಕ್ಕನಿಂದ ಲೆಟರ್ ಬಂತು. ರೆಡ್‌ಕ್ರಾಸ್ ಮೂಲಕ ತಾನು ಆಸ್ಟ್ರೇಲಿಯಕ್ಕೆ ಹೋಗುತ್ತಿರುವುದಾಗಿಯೂ ತನ್ನ ಮನಸ್ಸಿಗೆ ಒಪ್ಪುವ ಕೆಲಸವೇ ತನಗೆ ಸಿಕ್ಕಿರುವುದಾಗಿಯೂ ತಿಳಿಸಿದ್ದಳು—ಪತ್ರ ಓದಿದಳು. ಅಷ್ಟೇ! excitement ಏನೂ ಇಲ್ಲ. ತೀರಾ flat ಆಗಿ ಈ ಸುದ್ದಿ ಯನ್ನು ಸ್ವೀಕರಿದಳು, ಅಪ್ಪನಿಗೂ ಹೇಳಿದಳು. ಅಪ್ಪನಿಂದ ಉತ್ತರ ಇಲ್ಲ. ಪ್ರತಿಕ್ರಿಯೆ ಎಂದರೆ ನಿಟ್ಟುಸಿರು!

ಮನೆಯಲ್ಲಿ ಬೋರ್, ಕೆಲಸಕ್ಕೆ ಅಪ್ಲಿಕೇಷನ್ ಬರೆದು ಬರೆದು ready ಮಾಡಿದರೂ ಯಾಕೋ ಪೋಸ್ಟ್ ಮಾಡುವ ಹೊತ್ತಿಗೆ ಮನಸ್ಸು ಬಾರದೆ ಹರಿದು ಹಾಕಿ ಬಿಡುತ್ತಿದ್ದಳು. ಮನೆಯಿಂದ ಬಾಡಿಗೆ, ಅಕ್ಕ ನಿಂದ ಬರುವ ದುಡ್ಡು ಇಬ್ಬರಿಗೂ ಬದುಕಲು ಸಾಕಾಗುತ್ತಿತ್ತು. ಆದರೆ ಈಗ—? ಕೆಲಸಕ್ಕೆ ಹೋಗದೆ ವಿಧಿಯಿಲ್ಲ. ತಾನು ಕೆಲಸಕ್ಕೆ ಹೋದರೆ ಅಪ್ಪನನ್ನು ನೋಡಿಕೊಳ್ಳುವವರು ಯಾರು? ಇದೇ ಅವಳನ್ನು ಕಾಡು ತ್ತಿದ್ದ ಪ್ರಶ್ನೆ. ಅಪ್ಪನನ್ನು ಕೆಲಸಕ್ಕೆ ಹೋಗಲು ಪರ್ಮಿಷನ್ ಕೇಳ ಬೇಕೆಂದು ಕೊಂಡಳು.

ಹೇಗಾದರೂ ಅಪ್ಪ ಪರ್ಮಿಷನ್ ಕೊಟ್ಟಾನು. ಆದರೆ ಬೇಕೆಂದಾಗ ಕೆಲಸ ಸಿಗುವುದು ಸಾಧ್ಯವೆ?....ಪ್ರಯತ್ನಗಳನ್ನೇನೋ ಮಾಡತೊಡಗಿ ದಳು. ಕೆಲಸ ಸಿಕ್ಕಿದ ಮೇಲೆ ಅಪ್ಪನಿಗೆ ತಿಳಿಸಿದರಾಯಿತು. ಎಂದು ಕೊಂಡು ಆ ಪ್ರಸ್ತಾಪವನ್ನೇ ಮಾಡದೆ ಸುಮ್ಮನಾದಳು. ಆದರೆ ಅಪ್ಪನ ಆಲೋಚನೆಗಳೂ ಇವೇ ದಿಕ್ಕಿನಲ್ಲಿ ಹೊರ ಬಿದ್ದವು. ದೇಹದಲ್ಲಿ ದೌರ್ಬಲ್ಯ ಅಷ್ಟೆ, ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳದೇ ಇರುವಷ್ಟು ಬೌದ್ಧಿಕ

ವಾಗಿ ಜೀರ್ಣವಾಗಿರಲಿಲ್ಲ. ಅಪ್ಪನ ಹೃದಯ ಬಹಳ ಮೃದು ಯಾರಿಗಾದರೂ ಕಷ್ಟವೆಂದು ತಿಳಿದು ಬಂದರೆ, ಅವರಿಗಿಂತ ಇವರೇ ಹೆಚ್ಚು ತಲೆ ಕೆಡಿಸಿಕೊಳ್ಳುತ್ತಿದ್ದರು. ತಮ್ಮ ಕೈಲಾದಷ್ಟು ಸಹಾಯ ಮಾಡುತ್ತಿದ್ದರು. ಇದ್ದದ್ದು ಸಂಪಾದಿಸಿದ್ದು, ಧರ್ಮಕ್ಕಾಯಿತು. ಎಷ್ಟೋ ಸಲ ಸುನೀತ ಅಪ್ಪನ ತೀರಾ ಒಳ್ಳೇತನವನ್ನು ಪ್ರತಿಭಟಿಸಿದ್ದುಂಟು.... ಈಗ ಸುನೀತಳಿಗೆ, ತನ್ನ ಧೋರಣೆಯೇ ಸರಿಯೆನಿಸುತ್ತಿದೆ. ತಿಂದವರು ತೇಗಿದವರು, ಅದೃಷ್ಟ ಇಲ್ಲದಂತೆ ನಾಪತ್ತೆ. ಸಾಯುತ್ತಿದ್ದರೂ, ಸಾಸಿವೆ ಕಾಳಿನಷ್ಟು ಸಹಾಯವಿಲ್ಲದಿರುವುದನ್ನು ಕಂಡು, ಕಿಡಿಕಿಡಿಯಾಗುತ್ತಾಳೆ. "ಮಕ್ಕಳು ಮನೆ ಅನ್ನುವುದನ್ನು ಮರೆತ ಪರೋಪಕಾರಿಯಾಗಿ ವರ್ತಿಸಿದ ಅಪ್ಪನ ಮೇಲೂ, ಹದ್ದು, ಕಾಗೆಗಳ ಹಾಗೆ ತಿಂದು ಹೋದ ಜನದ ಮೇಲೂ ಬೆಂಕಿಯಾಗುತ್ತಾಳೆ. ಅಪ್ಪ ಸುನೀತಳನ್ನು ಕೂಗಿದಾಗ, ಧುಮುಗುಟ್ಟುತ್ತಲೇ ಹತ್ತಿರ ಹೋದಳು. ನೋಡಮ್ಮ ಸುನೀತ, ನಿಷ್ಕಾರಣವಾಗಿ ಹಾರಾಡುವುದರಿಂದ ಆಗುವುದೇನೂ ಇಲ್ಲ. ಈಗ ನಾನು ಹೇಳುವುದನ್ನು ಸ್ವಲ್ಪ ಗಮನವಿಟ್ಟು ಕೇಳು, ನನ್ನ ಕತೆ ಏನಿದ್ದರೂ ದಿನಗಳಲ್ಲಿ ಮುಗಿಯುತ್ತೆ, ಆದರೆ ಕ್ರೂರ ಸಮಾಜದ ಮಧ್ಯ ನಿನ್ನನ್ನು ಒಂಟಿಯಾಗಿ ಬಿಟ್ಟು ಹೋಗಬೇಕಾಗಿರುವುದಕ್ಕೆ ನನಗೆ ತುಂಬಾ ಭಯವೆನಿಸುತ್ತೆ. ಯಾವಾಗಲೂ ಹೆಣ್ಣಿಗೆ ಗಂಡನ ರಕ್ಷಣೆ ಬೇಕು....ಈ ಮಾತು ನಿನಗೆ ಹಳೇದಾಗಿ, ಅರ್ಥವಿಲ್ಲದ್ದಾಗಿ ಅನಿಸಬಹುದು. ಆದರೆ ನಿನಗೆ ಕ್ರಮೇಣ ಅರ್ಥವಾಗುತ್ತೆ. ನೀನೇ ನಿನ್ನ ತಪ್ಪನ್ನು ತಿಳಿದು ಕೊಂಡು ಬೇಜಾರುಪಡುತ್ತೀ....ಎಂದು ಹೇಳುತ್ತಿರುವಾಗಲೇ ಇವಳು ಮನಸ್ಸಿನಲ್ಲಿ ಅಪ್ಪನ ಮಾತನ್ನು ವಿಶ್ಲೇಷಿಸತೊಡಗಿದ್ದಳು ಅಪ್ಪನಿಗೆ ನಾನೇನೂ ಖಂಡಿತವಾಗಿ ಮದುವೆ ಬೇಡವೆಂದು ಹೇಳಿರಲಿಲ್ಲ....ಗಂಡಸಿನ ರಕ್ಷಣೆ ಇಲ್ಲದೆ ಹೆಣ್ಣು ಬಾಳುವುದಕ್ಕೆ ಸಾಧ್ಯವಿಲ್ಲವೇ ಇಷ್ಟು ವಿಶಾಲವಾದ ಪ್ರಪಂಚದಲ್ಲಿ ?.............ಎಂದು ಒಮ್ಮೆ ಅನಿಸಿದರೆ, ಇನ್ನೊಂದು ಕ್ಷಣದಲ್ಲಿ ಅಪ್ಪನ ಮಾತಿನಂತೆ ಗಂಡಸಿನೊಡನೆ ಬಾಳುವ ಅನುಭವಕ್ಕೇ ಒಪ್ಪಿಗೆ ಕೊಡೋಣವೆಂದು ಆಲೋಚಿಸುತ್ತಾಳೆ.... .......

ಅಪ್ಪ ಮಾತು ಮುಂದುವರೆಸಿದ. ಸುನೀತ ಆಲೋಚಿಸುತ್ತಿರುವುದು ಏನೆಂದು ಅಪ್ಪನ ಮನಸ್ಸು ಆಗಲೇ ಲೆಕ್ಕ ಹಾಕಿತು. "ನೀನು ನನ್ನ ಫ್ರೆಂಡ್ ಜಗನ್ನಾಥರಾಯರು ಇದ್ದರೆ ನೋಡು, ಅವರ ಬಳಿ ಹೋಗಿ ನನ್ನನ್ನು ಕಾಣಬೇಕೆಂದು ಹೇಳು. ಇದ್ದ ನನ್ನ ಫ್ರೆಂಡ್ಸಿನಲ್ಲಿ ಇವರೇ ನಂಬಿಕೆಗೆ ಸ್ವಲ್ಪ ಲಾಯಕ್ಕು. ನನ್ನ ಪ್ರಾವಿಡೆಂಟ್ ಫಂಡ್ ವಿಷಯ ವಾಗಿ ವ್ಯವಸ್ಥೆ ಮಾಡ್ತಾರೆ. ಅದರ ಹಣದಿಂದ ನಿನ್ನ ಮದುವೆಯನ್ನು ಮಾಡಿಯೇ ಬಿಡುತ್ತೇನೆ—ಎಂದು ಭೀಷ್ಮನಂತೆ ಪ್ರತಿಜ್ಞೆ ಮಾಡಿದ. ಮಾತಿನಲ್ಲಿ ನಿರ್ಧಾರವಿತ್ತು. ಭವಿಷ್ಯವನ್ನು ಯೋಚಿಸಿಕೊಂಡತ್ತಿತ್ತು. ಅಪ್ಪ ಅವಳ ಮದುವೆಯ ವಿಚಾರವಾಗಿ ಕಾತುರರಾಗುತ್ತಿದ್ದರೆ, ತಾನು ಕೆಲಸವನ್ನು ಸಂಪಾದಿಸಿಕೊಳ್ಳುವ ಪ್ರಯತ್ನದಲ್ಲಿದ್ದಳು. ಅಪ್ಪನ ಮನಸ್ಸಿಗೆ ನೋವಾಗಬಾರದು ಎಂದು ಯಾವೊಂದು ವಿರೋಧವನ್ನು ತೋರದೆ ಸುಮ್ಮನಾದಳು.

*  *  *

ಜಗನ್ನಾಥರಾಯನಂಥ ಅಪರೂಪದ ವ್ಯಕ್ತಿಯ ಒಳ್ಳೆತನದಿಂದ ನಿರೀಕ್ಷಿಸಿದ ಹಣದ ವ್ಯವಸ್ಥೆಯಾಯಿತು. ಜೊತೆಗೆ ಅವರಿಗೆ ತಿಳಿದ ಇಂಜಿನಿಯರ್ ಹುಡುಗನೊಂದಿಗೆ ಸಂಬಂಧದ ನಿಶ್ಚಯವು ಆಯಿತು. ಇಂಥ ಹೊತ್ತಿನಲ್ಲಿ 'ಅಪ್ಪ'ನಿಗೆ ಮಗನ ನೆನಪು ಮೊನಚಾಗಿ ಕಾಡುತ್ತಿತ್ತು. ಆದರೆ ಜೀವನದಲ್ಲಿ ಒಂದು ಕರ್ತವ್ಯವನ್ನಾದರೂ ಸಾರ್ಥಕವಾಗಿ ಸಾಧಿಸಲು ಸಾಧ್ಯವಾಯಿತು ಅನ್ನೋ ಸಂತೋಷವೇ ಸಾಕಾಯಿತು.

ಸುನೀತಳಿಗೆ ಸಂತೋಷವೋ, ದುಃಖವೋ ತಿಳಿಯುವುದು ಕಷ್ಟವಾಗುತ್ತಿತ್ತು. ನಿಲುಗನ್ನಡಿ ಮುಂದೆ ನಿಂತು ನೋಡಿಕೊಂಡ ಸುನೀತಳಿಗೆ ಛಿ ! ಛಿ ! ಅನ್ನಿಸಿತು. ಅರಳಿದ ಹೊಚ್ಚ ಹೊಸ ಹೂವಿನ ಕಂಪು ತಾಜಾತನ ಏನೂ ತನ್ನಲ್ಲಿ ಕಾಣಲಿಲ್ಲ ಎನ್ನಿಸಿತು. ಅಲ್ಲಲ್ಲಿ ಎದ್ದು ಕಾಣುತ್ತಿದ್ದ ಸುಕ್ಕುಗಳು, ಹೌಹಾರುವಂತೆ ಮಾಡಿದವು. ಮರೆತಿದ್ದ ವಯಸ್ಸಿನ ನೆನಪಾಯಿತು..........ಎಷ್ಟಿರಬಹುದು ?........ಲೆಕ್ಕ ಸರಿ

ಯಾಗಿ ಗೊತ್ತಿಲ್ಲ ......ಮೂವತ್ತನ್ನು ದಾಟಿರಬಹುದೇ ?—ಎಂದು ಸಂದೇಹಿಸಿದ ಅವಳಿಗೆ ಮದುವೆ ಬೇಡವೆನಿಸಿತು. ತಲೆ ಭಾರವೆನಿಸಿ ಅಲ್ಲೀ ಮಂಚದ ಮೇಲೆ ಒರಗಿದಳು.

* * *

ರಾತ್ರಿ ಅಪ್ಪನಿಗೆ ಇದ್ದಕ್ಕಿದ್ದಂತೆ Stroke ಹೊಡೆಯಿತು. ಸರಿ ರಾತ್ರಿಯಲ್ಲಿ ಸುನೀತಳು ಒಂಟಿಯಾಗಿ ಹೊರಗೆ ಹೋಗಿ ಡಾಕ್ಟರನ್ನು ಕರೆ ತರಲು ಹೆದರಿದಳು. ಆದರೆ ಮರುಗಳಿಗೆಯಲ್ಲೀ, ಇಷ್ಟಕ್ಕೇ ಹೆದರಿದರೆ ಮುಂದೆ ಇರುವ, ಕೊನೆಯಿಲ್ಲದ ಇಂತಹ ಪರಿಸ್ಥಿತಿಗಳನ್ನು ಎದುರಿಸ ಬೇಕಾಗಿದೆಯೆಂಬುದರ ಅರಿವಿನಿಂದ ಹೊರಗಡೆಯಿಂದ ಬೋಲ್ಟ್ ಹಾಕಿ ಕೊಂಡು ಓಡಿದಳು. ಓಡುತ್ತಿದ್ದ ಓಟ ತನಗೇ ವಿಚಿತ್ರವೆನಿಸಿತ್ತು. ಸದ್ಯಕ್ಕೆ ಹೇಗೋ, ಡಾಕ್ಟರನ್ನು ಮನೆಗೆ ಕರೆತಂದಳು.

ಡಾಕ್ಟರು ಪರೀಕ್ಷೆ ಮಾಡಿ ಜೋಲು ಮುಖ ಹಾಕಿ ಕೂಡಲೆ ಆಸ್ಪತ್ರೆಗೆ ಅಡ್ಮಿಟ್ ಮಾಡುವಂತೆ ಹೇಳಿದ....ಆದರೆ ಹೇಗೆ....ತಂದೆಗೆ ಯಾರು ಸಹಾಯಕ್ಕೆ ? ಡಾಕ್ಟರನ್ನೇ ಅಂಗಲಾಚಿದಳು. ಪುಣ್ಯಕ್ಕೆ ಆ ಡಾಕ್ಟರಿಗೆ ಹೃದಯ ಅನ್ನೋದು ಇದ್ದಂತಿತ್ತು. ಕೂಡಲೇ ಒಪ್ಪಿ ಕೊಂಡ. ಸುನೀತ ಡಾಕ್ಟರೂ ಇಬ್ಬರೂ ಕಷ್ಟಪಟ್ಟು ಕಾರಲ್ಲಿ ಮಲಗಿ ಸಿದರು. ಸರಸರನೆ ಸುನೀತ ಇಳಿದು ಮನೆ ಬಾಗಿಲುಗಳನ್ನು ಭದ್ರಪಡಿಸಿ ಕೊಂಡು ಬಂದಳು. ಕಾರುಸ್ಟಾರ್ಟಾಯಿತು.

* * *

ಅಪ್ಪ ಉಳಿಯಲಿಲ್ಲ. ಈಗ ಸುನೀತ ಒಬ್ಬಳೇ. ಅವಳ ಸುತ್ತಲೂ ಭಯಂಕರ ಶೂನ್ಯತೆ. ತಲೆ ತಲೆ ಚಚ್ಚಿಕೊಂಡಳು. ಮದುವೆ ಮುರಿ ದಿತ್ತು. ಅಸ್ತವ್ಯಸ್ತ ಮನಸ್ಸಿಗೆ, ಮನೆ ತುಂಬ ನೆರಳುಗಳು ಓಡಾಡಿ

ದಂತೆ. ಅಸ್ಪಷ್ಟ ಧ್ವನಿಗಳು ಕೇಳಿಸುತ್ತಿರುವಂತೆ ಅನಿಸಿತ್ತು. "ಯಾವ ಪಾಪಕ್ಕಾಗಿ ಪ್ರಾಯಶ್ಚಿತ್ತ?" ಎಂದು ಪದೇ ಪದೇ ಮನಸ್ಸು ಕೇಳುತ್ತಿತ್ತು. ಪ್ರಪಂಚದಲ್ಲಿ ಇಷ್ಟು ಮಂದಿ ಇರುವಾಗ ತನೊಬ್ಬಳಿಗೇ ಏಕೆ suffering" —ಎಂದು ಯಾರೊಂದಿಗೋ ವಾದಿಸುತ್ತಿರುವಂತೆ ತೋರುತ್ತಿತ್ತು, ತನಗೆ.... ತನಗೆ....ತನಗೊಂದು ಕೆಲಸ ಸಿಕ್ಕಿದರೆ, ಮನಸ್ಸಿಗೆ ಸಮಾಧಾನವಾಗಬಹುದೇನೋ" ಎಂದುಕೊಳ್ಳುತ್ತಿದ್ದಳು ಆದರೆ ....ಸಿಗುವವರೆಗೂ ?....

ಈ ಪ್ರೇತ ಮನೆಯಲ್ಲಿ, ಎಂದೋ ಕಥೆಯಲ್ಲಿ ಓದಿದ್ದ ಗುಹೆಯಂತಿರುವ ರಾಕ್ಷಸನ ಬಾಯಲ್ಲಿ ಚಿತ್ರಹಿಂಸೆ ಅನುಭವಿಸುತ್ತ... ಇರುವುದು ಸಾಧ್ಯವೇ ಇಲ್ಲವೆಂದು. ಅವಳಿಗೆ ತೋರಿತು, ಒಂಟಿಯಾಗಿ ಬಾಳಲು ಅಸಮರ್ಥರಾದ ಹೆಣ್ಣುಗಳ ಭಯಂಕರ ನೆನಪುಗಳು !

ಕೊನೆಗೆ ಏನೋ ನಿರ್ಧಾರವನ್ನು ಕೈಗೊಂಡಂತೆ, ಒಂದೆರಡು ಬಟ್ಟೆಗಳನ್ನು ತುರುಕಿಕೊಂಡು ಕೈ ಚೀಲ ಒಂದನ್ನು ಹಿಡಿದು, ತನ್ನ ಬದುಕಿನ ಭವಿಷ್ಯವೆಲ್ಲಿದೆಯೆಂದು ಹುಡುಕುವುದಕ್ಕೆ—ಎಂಬಂತೆ,

ಮನೆಯೊಳಗಿಂದ ಬಿರಬಿರನೆ ನಡೆದುಹೊರಟಳು.

ಎಲ್ಲಿಗೆ—? ಎನ್ನುವುದು ಅವಳಿಗೂ ಪ್ರಶ್ನೆಯಾಗಿ ಉಳಿಯಿತು. ಆದರೆ ಆ ಹೆಜ್ಜೆಯ ನಡೆಯಲ್ಲಿ ಮತ್ತೆ ಈ ಭಯಂಕರ ಬದುಕಿಗೆ ಮರಳಲಾರೆ'—ಎನ್ನುವ ಧೃಢ ನಿರ್ಧಾರದ ಧ್ವನಿಯಿತ್ತು.

## ಉದ್ವಿಗ್ನೆ

ಕಾಲೇಜಿಗೆ ಹೊರಟಿದ್ದ ವೀಣಾ ಒಂದೆರಡು ಗಂಟೆಗಳಲ್ಲೇ ಹಿಂತಿರುಗಿದ್ದನ್ನು ನೋಡಿ ತಾಯಿಗೆ ಆಶ್ಚರ್ಯವಾಯಿತು. ಬಂದವಳೇ ಸಿಡಿಮಿಡಿಗೊಳ್ಳುತ್ತಾ ಕೈಲಿದ್ದ ಪುಸ್ತಕಗಳನ್ನು ಎಸೆದು ಮಂಚದ ಮೇಲೆ ಬಿದ್ದುಕೊಂಡು. Brutes 'idiots' ಎಂದು ಬಡಬಡಿಸತೊಡಗಿದಳು. ತಾಯಿಗೆ

ಕ ಡಲೇ ಅರ್ಥವಾಯಿತು. ಕಾಲೇಜಿನಲ್ಲಿ ಏನಾದರೂ ಬಿರುಗಾಳಿ ಎಬ್ಬಿಸಿಯೇ ಬಂದಿರುವಳು !'—ಅಂದುಕೊಂಡರು. ಆದರೆ ಏನೆಂದು ಕೇಳುವ ಸಾಹಸಕ್ಕೆ ಹೋಗಲಿಲ್ಲ, ಆಕೆಗೆ ಗೊತ್ತು. ಈಗ ಕೇಳುವುದಕ್ಕಿಂತ ಸುಮ್ಮನೆ ಇರುವುದೇ ಮೇಲು' ಎಂದು. ಈಗೇನಾದರೂ ಅವಳನ್ನು ಪ್ರಶ್ನಿಸಿ ಕೆಣಕಿದರೆ ಲಾವಾರಸ ಸಿಡಿಯುತ್ತದೆಂದು ಹೆದರಿ ಸುಮ್ಮನಾದರು.

ಯಾರನ್ನೋ ಕುರಿತು ಕಿಡಿಕಾರುತ್ತಿದ್ದ ವೀಣಾ ಈಗ ನೇರಾಗಿ ಮನೆಯವರ ಮೇಲೆಯೇ ಜಿಗಿದಳು. ಸಿಡಿಮಿಡಿಯಿಂದಲೇ ಅಂದಳು. ಈ ಮನೆಯಲ್ಲಿ ಯಾರಿಗೇನಗತ್ಯವಿದೆ. ನಾವು ಸಾಯುತ್ತೇವೋ, ಬದುಕುತ್ತೇವೋ ಯಾರಿಗೆ ಬೇಕಾಗಿದೆ ? ಎಲ್ಲಾ selfish . ಅಮ್ಮ, ಅಕ್ಕ ಅಣ್ಣ, ತಮ್ಮ ಎಲ್ಲಾ ಸುಳ್ಳು. ಅವರವರ ಸ್ವಾರ್ಥ ತಣಿದರೆ ಸಾಕು. ನಾವಿಲ್ಲಿ ಸಾಯಿತಾ ಬಿದ್ದಿದ್ದರೂ ಯಾರಿಗೂ ವಿಚಾರಿಸಿಕೊಳ್ಳಬೇಕು ಅನ್ನೋ ಜ್ಞಾನ ಇಲ್ಲ. ಹೆಸರಿಗೆ ಅಮ್ಮ ಅಂತೆ, ಅಪ್ಪ ಅಂತೆ !' ಅವಳ ಅಣಕದ ಮಾತು ನೇರಾಗಿ ತಮ್ಮನ್ನು ಕುರಿತದ್ದು ಎಂದು ತಿಳಿದ ತಾಯಿ ತುಂಬಾ ನೊಂದುಕೊಂಡರು ಆದರೂ ನೋವನ್ನು ಮನಸ್ಸಿನಲ್ಲಿಯೇ ನುಂಗಿಕೊಂಡು ಸಮಾಧಾನವಾಗಿಯೇ ನುಡಿದರು.

"ಅಲ್ಲ, ವೀಣಾ ನೀನು ಹೊರಗಡೆ ಯಾರ ಯಾರ ಮೇಲೋ ಸಿಟ್ಟು ಮಾಡಿಕೊಂಡು ಬಂದು ಇಲ್ಲಿ ನಮ್ಮ ಮೇಲೆ ಹಾರಾಡಿದರೆ ಮಾಡುವುದಾದರೂ ಏನು ?' ಅಲ್ಲದೆ ಅರ್ಥವಿಲ್ಲದೆ, ಕಾರಣವಿಲ್ಲದೆ ಹೀಗೆ ಹುಚ್ಚುಚ್ಚಾಗಿ ಕಂಡವರ ಮೇಲೆಲ್ಲಾ ಕೆಂಡ ಕಾರಿದರೆ ಹೇಗೇಂತ ?—ನೊಂದ ದನಿಯಾಗಿತ್ತು.

"ನಾನಿಷ್ಟು ಬೇಸರದಿಂದ ಮನೆಗೆ ಬಂದರೆ ಯಾಕೆ ಹಾಗಿದ್ದಿ— ಅಂತಲಾದರೂ ಕೇಳಿದೆಯಾ ? ಹೌದು ಯಾಕೆ ಕೇಳ್ತಿ ? ನಾನು ಯಾಕೆ ಬೇಕು ನಿಮಗೆ ? ಏನಿದ್ದರೂ ದುಡ್ಕೊಂಡು ಬಂದು ಹಾಕಿದ್ರೆ ಸಾಕು !— ಅಷ್ಟೇ ತಾನೇ' ಮಾತಿನಲ್ಲಿ ವ್ಯಂಗ್ಯವಿತ್ತು.

ತಾಯಿ ಏನನ್ನಾದರೂ ಸಹಿಸುತ್ತಿದ್ದಳು, ಆದರೆ ವೀಣಾಳ ಈ ಮಾತು ಅವಳ ಅಂತರಂಗವನ್ನು ಸೀಳಿತು. ಅವಳಿಗೆ ತನ್ನ ಅಸಹಾಯಕತೆಯನ್ನು ಕೆಣಕಿದಂತಾಯಿತು. ಮಗಳ ಬಾಯಿಂದ ಹೊರಟ ಈ ಮಾತು

ಕಿವಿಯಲ್ಲಿ ಮಾರ್ದನಿಗುಟ್ಟಿತು. ಕಂಗಳು ಕಂಬನಿಯ ಮಡುಗಳಾದವು.

'ವೀಣಾ'—ಆ ಕೂಗಿನಲ್ಲಿ ತುಂಬಿದ್ದ ದೈನ್ಯ ವೀಣಾಳ ಎದೆ ಕಲಕಿತು ನಾಲಗೆ ಕಚ್ಚಿಕೊಂಡಳು. ತಾಯಿಯ ಕಂಬನಿ ತುಂಬಿದ ಕಣ್ಣುಗಳನ್ನು ಎದುರಿಸಲಾರದೆ ತಲೆ ಬಗ್ಗಿಸಿದಳು. ಸಿಟ್ಟಿನ ಸೆರೆಯಿಂದ ಸಮಾಧಾನದ ಬಯಲಿಗೆ ಬಂದಳು ಆವೇಶದಲ್ಲಿ ಬಾಯಿ ಜಾರಿದ್ದನ್ನು ನೆನೆದು ಮನಸ್ಸು ಸಂಕುಚಿತವಾಯಿತು ನನ್ನ ಮೇಲೆ ತನಗೇ ಅಸಹ್ಯವೆನಿಸಿತು. ತಾಯಿಯ ಮನಸ್ಸಿಗೆ ಈ ಮಾತಿನಿಂದ ಆಗಿರಬಹುದಾದ ಘಾಯದ ತೀವ್ರತೆಯ ಅರಿವಿನಿಂದ—ತಾನೆಷ್ಟು ತುಚ್ಛವೆನಿಸಿತು. ಆಕಾಶದಷ್ಟು ಅಗಲದ ತಾಯ ಹೃದಯದಲ್ಲಿ ತಾನೆಲ್ಲೋ ತೇಲುವ ಒಂದು ಧೂಳಿನ ಕಣ! ಅಂಥಾದ್ದರಲ್ಲಿ ಇಂದು ಈ ಮಾತನ್ನು ಆಡುವುದಕ್ಕೆ ಹೇಗೆ ತನಗೆ ಸಾಹಸ ಬಂತೆಂಬುದನ್ನೇ ತಿಳಿಯಲಾರದೆ ಚಡಪಡಿಸಿದಳು. ನಿಧಾನವಾಗಿ ಅಮ್ಮನ ಬಳಿಗೆ ಸರಿದಳು.

ನನ್ನನ್ನು ಕ್ಷಮಿಸಮ್ಮ ಉದ್ದೇಶಪೂರ್ವಕವಾಗಿ ನಾನು ಈ ಮಾತನ್ನು ಆಡಲಿಲ್ಲ. ಏನೋ ಆವೇಶದಲ್ಲಿ ಅಂದುಬಿಟ್ಟೆ, ಯಾಕೋ ಕಾಲೇಜಿನಲ್ಲಿ ನನಗೆ ಸ್ವಲ್ಪ ಅಸಮಾಧಾನವಾಗಿತ್ತು. ಇರುವುದಕ್ಕೇ ಆಗಲಿಲ್ಲ. ರಜೆ ಚೀಟಿ ಬರೆದು ಬಿಸಾಕಿ ಬಂದು ಬಿಟ್ಟೆ. ಮನಸ್ಸು ತೀರ ಅಸ್ತವ್ಯಸ್ತವಾಗಿತ್ತು. ಆವೇಶದ ಆತುರದಲ್ಲಿ ಅರ್ಥವಿಲ್ಲದ, ಆಡಬಾರದ ಮಾತನ್ನು ಆಡಿಬಿಟ್ಟೆ. ನಿನ್ನ ಮನಸ್ಸಿಗೆ ತುಂಬಾ ನೋವಾಗಿದೆ. ಅದನ್ನು ಹೇಗೂ ನಾನು ತೊಡೆದು ಹಾಕಲಾರೆ, ನೀನು ಒಂದು ಸಲ ಕ್ಷಮಿಸಿದ್ದೇನೆಂದು ಹೇಳು ಇನ್ನೆಂದೂ ಈ ರೀತಿಯಾಗಿ ಮಾತಾಡೊಲ್ಲ Please ಹೇಳಮ್ಮ"—ಯಾಚಿಸುವಂತಿತ್ತು.

ವೀಣಾಳ ಯಾಚನೆ ತಾಯಿಯ ಮನಸ್ಸನ್ನು ಕರಗಿಸಿತು ಬಿಸಿ ರಕ್ತದ ವಯಸ್ಸು ಸಂಪಾದಿಸುವ ಸಾಮರ್ಥ್ಯವಿರುವ ಮಗಳ ಧೋರಣೆ ಅವಳಿಗೆ ಅಸಹಜವೆನಿಸಲಿಲ್ಲ. ಅವಳನ್ನೇ ಬಳಸಿ ಆಧರಿಸಿರುವ ತಾವು ಅವಳ ಮಾತಿನ ನಂಜನ್ನು ನಗುನಗುತ್ತಲೇ ನುಂಗುತ್ತಿದ್ದರು. ಸ್ವಭಾವತಃ ಕೆಟ್ಟವಳೇನೂ ಅಲ್ಲ. ಆದರೆ ಸ್ವಲ್ಪ ಒರಟು ಹಟಮಾರಿತನ, ತನ್ನದೇ ಗೆಲ್ಲಬೇಕು, ತಾನೇ ದೊಡ್ಡವಳೆನಿಸಿಕೊಳ್ಳಬೇಕೆನ್ನುವ ವಿಚಿತ್ರ

ಸ್ವಭಾವ ಅವಳ ಮಾತಿಗೆ ಯಾರೂ ವಿರೋಧ ಸೂಚಿಸದಿದ್ದರೆ ಸನ್ನಿವೇಶಗಳು ಸರಳವಾಗೇ ಇರುತ್ತಿದ್ದವು.

ಮನೆಯಲ್ಲಿ ಇವಳ Ego ನಡೆಯಬಹುದಾಗಿದ್ದರೂ ಹೊರಗಡೆಯೂ ತನ್ನಂತೆಯೇ ನಡೆಯಬೇಕೆನ್ನುವ ಛಲ ಸ್ವಲ್ಪ ಮೂರ್ಖತನವೆಂದೇ ಎನಿಸುತ್ತಿತ್ತು.

ಗಂಡನನ್ನು ಕಳೆದುಕೊಂಡಂದಿನಿಂದ ತಾಯಿ, ತಮ್ಮಂದಿರು, ತಂಗಿಯರು ತನ್ನನ್ನೇ ಆಶ್ರಯಿಸಿರುವುದು ಅವಳಿಗೆ ಒಂದು ತರಹ ಒಳಗೇ ಖುಷಿಯಾಗಿತ್ತು. ಅಪ್ಪ ಸತ್ತಾಗ ಎಂ. ಎ. ಫೈನಲ್‌ನಲ್ಲಿ ಓದುತ್ತಿದ್ದ ವೀಣಾಗೆ, ಪರೀಕ್ಷೆಗಳು ಮುಗಿದು ಫಲಿತಾಂಶ ಹೊರಬಿದ್ದ ಕೂಡಲೇ ಕೆಲಸ ಸಿಕ್ಕಿದ್ದು ಒಂದು ಸಮಾಧಾನವಾಗಿತ್ತು. ತಾಯಿಗೆ ಭವಿಷ್ಯವೇ ಭಯಂಕರವೆನಿಸಿತ್ತು. ಆದರೆ ವೀಣಾಗೆ ಕೆಲಸ ಸಿಕ್ಕಿದ್ದು ಸ್ವಲ್ಪ ನೆಮ್ಮದಿಯಾಗಿತ್ತು. ಹೊಟ್ಟೆಪಾಡಿನ ಸಮಸ್ಯೆಗೆ ಸ್ವಲ್ಪ ಪರಿಹಾರ ದೊರೆತಂತಾಗಿತ್ತು. ವೀಣಾಗೆ ಬರುವ ಸಂಬಳ ಊಟಕ್ಕೆ, ತಂಗಿ, ತಮ್ಮಂದಿರ ಓದಿಗೆ ಸಾಕಾಗುತ್ತಿತ್ತು. ತಾಯಿಯ ಎಚ್ಚರಿಕೆಯ ನಿರ್ವಹಣೆ ಹೇಗೋ ಬದುಕನ್ನು ಸಾಗಿಸುತ್ತಿತ್ತು ಮುಂದಕ್ಕೆ.

ವೀಣಾಳ ಸ್ವಭಾವವೇ ವಿಚಿತ್ರ ಇಡೀ ಪ್ರಪಂಚದ ವಿಷಯಗಳನ್ನು ವೈಯುಕ್ತಿಕವಾಗಿ, ಇಲ್ಲವೇ ಸ್ವಂತ ವಿಷಯಗಳಂತೆ ಭಾವಿಸುತ್ತಿದ್ದಳು. ಯುಗಾಂಡದಲ್ಲೋ, ಅಮೇರಿಕಾದಲ್ಲೋ, ರಷ್ಯಾದಲ್ಲೋ, ಇಂಗ್ಲೆಂಡಿನಲ್ಲೋ ಜರ್ಮನಿಯಲ್ಲೋ, ಇಂಡಿಯಾದಲ್ಲೋ—ಎಲ್ಲೇ ಏನೇ ಅನಾದರ ಅವ್ಯವಸ್ಥೆ ಉಂಟಾದರೂ, ಮನೆಯಲ್ಲಿ ಕೂತು ವಿಮರ್ಶೆ ಮಾಡುವುದು, ಯಾರಿಗಾದರೂ ಯಾರಿಂದಲಾದರೂ ಅನ್ಯಾಯವಾದರೂ ಎದುರಿಗಿದ್ದವರ ಮೇಲೆ ಸಿಡಿಮಿಡಿಗೊಳ್ಳುವುದು, ಇಲ್ಲೇ ಕಾಲೇಜಿಗೆ ಹೋದರೆ, ಲಕ್ಷ್ಮೀದೇವಿಗೆ ಪ್ರಿನ್ಸಿಪಾಲರು ಲೀವ್ ಕೊಡದಿದ್ದರೆ ಸಿಟ್ಟು, ಜಾನಕಿಗೆ ವರ್ಷಗಟ್ಟಲೆ ಲೀವ್ ಕೊಡೋದು ಕಂಡರೆ ಸಿಟ್ಟು ; ಪಾಠ ಮಾಡುವ ಟೀಚರ್ಸ್ ಕೆಲಸ ಮಾಡುವ ಅಟೆಂಡರ್ಸ್, ಕಕ್ಕಸು ತೊಳೆಯುವ ಭಂಗಿಗಳೂ—ಎಲ್ಲರೂ ಒಂದೇ ಪ್ರಿನ್ಸಿಪಾಲರಿಗೆ ಅಬ್ಬಬ್ಬ!.... ಅದಕ್ಕೆ ತಕ್ಕ ಹಾಗೆ ಹ್ಹಿ ! ಹ್ಹಿ ! ಅಂತ ಆಷಾಢಭೂತಿ ನಗೆ ನಕ್ಕೊಂಡು, ಸೊಂಟ ಬಗ್ಗಿಸಿ ಸಲಾಮು ಹೊಡೆಯುತ್ತ ಕೋಲೆ ಬಸವನ ಹಾಗೆ ಪ್ರಿನ್ಸಿಪಾಲರು ಹೇಳಿದಕ್ಕೆಲ್ಲಾ

ಹೌದು ಸಾರ್, ಇಲ್ಲಾ ಸಾರ್—ಅಂತ ತಲೆ ತೂಗೋ ಈ ಹಾಳು ನರಸತ್ತ ಮೇಷ್ಟ್ರುಗಳನ್ನು ಕಂಡರೆ ಮೈಯೆಲ್ಲಾ ಕುಲುಮೆಯಾಗಿ ಬಿಡು ತ್ತಿತ್ತು.

ಪ್ರಿನ್ಸಿಪಾಲರು ಎದುರಿಗಿದ್ದರೆ ತಮ್ಮ ಅಲ್ಪತನವನ್ನು ಅವರ ಅಡಿ ಗಳಿಗೆ ಅರ್ಪಿಸಿ ಅವರ ಮಾತನ್ನು ನೇವರಿಸಿ....ಓಹೋ ನಿಮ್ಮ ಐಡಿಯಾ ಅದ್ಭುತವಾಗಿದೆ. ಹೌದು ಸಾರ್.... ನಮ್ಮ ನಮ್ಮ ಕೆಲಸ ನಾವು ಮಾಡಿ ಕೊಳ್ಳೋದು ತಪ್ಪೇನಲ್ಲ ನೀವು ಹೇಳೋದು ಸರಿ ಸಾರ್ 'Dignity of Labour' ಅನ್ನೋದು ಇದ್ದೇ ಇದೆಯಲ್ಲ' ಎಂದು ಹೇಳುತ್ತ ಅವರ ಮಾತನ್ನು ಅನುಮೋದಿಸಿ, Latrines ಕ್ಲೀನಾಗಿರೋದನ್ನು ನೋಡ್ಕೊಳ್ಳ ಬೇಕು'—ಎನ್ನುವ ಮಾತಿಗೂ ಆಗಲಿ ಸಾರ್—ಅಂತ ತಲೆ ತೂಗೋ ಇವರ್ನ ಕಂಡರೆ, ಅಪ್ಪಳಿಸಿ ಬಿಡಬೇಕು ಅನ್ನುವ ಸಿಟ್ಟು !

ಮೊನ್ನೆ ಪಾಪ, ಹಿಸ್ಟರಿ ಮೇಷ್ಟ್ರು ಜ್ವರ ಬರುತ್ತೇಂತ ರಜ ಹಾಕಿದ್ರೆ, ಕರೆದು ಕಂಡಾಬಟ್ಟೆ ಬೈದು ಸರ್ವೀಸ್ ರಿಜಿಸ್ಟರಲ್ಲಿ ರಿಮಾರ್ಕ್ ಬರೀತೇನೆ—ಅಂತ ಬಾಯಿ ಬಡಿದು ಮುಖದ ನೀರಿಳಿಸಿ ಕಳಿಸುವ ಕಟುಕ ಪ್ರಿನ್ಸಿಪಾಲರನ್ನು ನೋಡಿದರೆ ಮೈಯೆಲ್ಲಾ ಮುಳ್ಳಾಗುತ್ತಿತ್ತು.

ಮೇಷ್ಟ್ರುಗಳಿಗೆ ಮರ್ಯಾದೆ ಅನ್ನುವುದೇ ಇಲ್ಲ. ಕ್ಲಾಸ್ ಕ್ಲಾಸ್‌ಗೆ ಇಷ್ಟ ಬಂದ ಹಾಗೆ ನುಗ್ಗಿ ವಿದ್ಯಾರ್ಥಿಗಳ ಮುಂದೆ ಮೇಷ್ಟ್ರ ಮಾನ ಮಣ್ಣುಪಾಲು ಮಾಡುವ ಹಕ್ಕಿದೆ ಅಂತ ಭಾವಿಸುವ ಅಧಿಕಾರಿಗಳಿಗೆ ಅವರ ನಿರಂಕುಶ ಪ್ರವೃತ್ತಿಗೆ ಕಾಯಿದೆ ಕಟ್ಟಳೆ ಇಲ್ಲವೇ, ಅನ್ನೋ ಯೋಚ್ನೆ ಬರುತ್ತಿತ್ತು. ಆದರೆ ಮೊನ್ನೆ ತಾನೇ ಸೇರಿಕೊಂಡ ಮೀಣಾಗೆ ಇಂತಹ ಅವ್ಯವಸ್ಥೆಯನ್ನು, ಉದ್ಧಟತನವನ್ನು ಪ್ರತಿಭಟಿಸುವ ಎದೆ ಗಾರಿಕೆಯಿಲ್ಲದ್ದಕ್ಕಾಗಿ ಒಳಗೊಳಗೇ ಹಲ್ಲು ಕಟ ಕಟ ಕಡಿಯುತ್ತಿದ್ದಳು. "ತಥ್" ಈ ಹಾಳು ಗುಲಾಮತನಕ್ಕೇ ಮುಕ್ತಿ ಅನ್ನುವುದೇ ಇಲ್ಲವೇ" ಎಂದು ಯೋಚಿಸುತ್ತಿದ್ದಳು.

ಅಧಿಕಾರ, ಹಣ, ಬೆಂಬಲ ಯಾವುದರಲ್ಲಿಯೂ ಹೇಳಿಕೊಳ್ಳುವ ಹಾಗೆ ಇರಲಿಲ್ಲವಾಗಿ ಮನಸ್ಸು ಅಸಮಾಧಾನದ ಹಾವಾಗಿ ಬುಸು ಬುಸು ಗುಟ್ಟು ತ್ತಿತ್ತು. ಆದರೂ ವಾತಾವರಣಕ್ಕೆ ಹೊಂದಿಕೊಳ್ಳದೆ. ಹೊಲಸನ್ನು

ವರಿಸುವ ನೊಣವಾಗವೆ ವಿಧಿಯಿರಲಿಲ್ಲ. ಅದಕ್ಕೇ ಒಳಗೆ ಹುದಿಗಿಟ್ಟು ಕೊಂಡ ಉದ್ವೇಗವನ್ನು ಮೂಕ ಪಶುವಿನಂತೆ ಪರಿಸ್ಥಿತಿಗಳ ಭಯಂಕರತೆ ಯನ್ನು ಭರಿಸುತ್ತಿದ್ದ ತಾಯಿಯ ಮೇಲೆ ಕಾರುತ್ತಿದ್ದಳು. ತಾಯಿಗೆ ಮಗಳ ದೌರ್ಬಲ್ಯ, ಅವಳ ಅಪರಿಪಕ್ವ ಅನುಭವ ತಿಳಿದದ್ದರಿಂದಲೇ ಪ್ರತ್ಯುತ್ತರ ಕೊಡದೇ ಅವಳ ಒಡನಾಟ, ಹಾರಾಟಗಳತ್ತ, ನಿರ್ಲಕ್ಷ್ಯ ಭಾವವನ್ನು ತಾಳುತ್ತಿದ್ದಳು. ಆದರೆ ವೀಣಾಗೆ ತಾಯಿಯ ನಿರ್ಲಕ್ಷ್ಯ ಭಾವ, ವಿರೋದಾರ್ಥವನ್ನೇ ಪಿಸುಗುಟ್ಟುತ್ತಿತ್ತು.

ಅವಳ ಸಿಟ್ಟು ಸಹಜವಾಗಿ ತಾಯಿಯ ಮೇಲಲ್ಲದೆ ಊಟದ ಮೇಲೂ ಇರುತ್ತಿತ್ತು. ಆದರೆ ಈಗ ತಾಯಿಯ ಮನಸ್ಸನ್ನು ನೋಯಿಸಿದ್ದಕ್ಕಾಗಿ ತಪ್ಪು ಕಾಣಿಕೆಯನ್ನು ಒಪ್ಪಿಕೊಳ್ಳುವ ಹಾಗೆ, ಊಟಕ್ಕೆ ಕರೆದದ್ದೇ ಸಾಕು, ಯಾಂತ್ರಿಕವಾಗಿ ಎದ್ದು ನಡೆದಳು.

ಕಮಂಗಿ ಕೇಶವನಿಗೆ ಮೇಷ್ಟ್ರು ಅನ್ನೋ ಸೀರಿಯಸ್‌ನೆಸ್ ಇಲ್ಲ. ಕಂಡ ಕಂಡ ಹುಡುಗಿಯರ ಜೊತೆಗೆ ಮಜಾ ಪಾರ್ಟ್ ಮಾಡೋಕೆ ನೋಡ್ತಾನೆ. ಆದರೆ ಹಲ್ಲು ಉದುರಿಸಿಕೊಂಡು ಬರ್ತಾನೆ, ಕಾಲೇಜ ಲ್ಲೆಲ್ಲಾ ಗುಲ್ಲೋ ಗುಲ್ಲು, ಪ್ರಿನ್ಸಿಪಾಲರು ಕರೆದು ಕೇಳಿದ್ದಕ್ಕೆ, ನೀನು ಮುದುಕ, ನಿಮಗೇನು ಗೊತ್ತು ಪ್ರೇಮ ಮಾಡೋದು, ವಯಸ್ಸಿ ನಲ್ಲಿ ಇರೋ ನಾವು ಈಗ ಇಂಥ ಕೆಲಸ ಮಾಡದೆ ನಿಮ್ಮ ವಯಸ್ಸಿನಲ್ಲಿ ಮಾಡೋಕೆ ಆಗುತ್ಯೆ! ಅಂಥ ಧೈರ್ಯವಾಗಿ ಉತ್ತರಿಸಿದ. ಜೊತೆಗೆ ನನ್ನ ಲೈಫು ನನಗೆ ಇಷ್ಟ ಬಂದ ಹಾಗೆ ಇರ್ತೀನಿ. ನೀವೇನೂ ಕೇಳ ಬೇಕಾದ್ದಿಲ್ಲ ಅಲ್ಲದೆ ಹುಡುಗಿಯರೇ ನನ್ನ ಹಿಂದೆ ಬಿದ್ದರೆ ನಾನೇನು ಮಾಡ್ಲಿ'—ಅಂತ ರೊಯ್ಯಂತ ಮಾತಾಡಿ ಬಾಯಿ ಮುಚ್ಚಿಸಿ ಬಿಟ್ಟ ;— ವೀಣಾಗೆ ಒಳಗೊಳಗೇ ಖುಷಿ. ಹೀಗೆ ಬಾಯಿ ಬಡಿಯೋ ಜನ ಒಬ್ಬ ರಿಬ್ಬರಾದರೂ ಇದಾರಲ್ಲಾಂತ ರಸಗುಲ್ಲ ತಿಂದಷ್ಟು ಸಂತೋಷ. "Dirty fellow" ಎಂದು ಬಯ್ಯುತ್ತಿದ್ದ ವೀಣಾಳಿಗೆ ಬೇಡ ಬೇಡ ವೆಂದರೂ ಕೇಶವನ ನೆನಪು ಬಂದಿತ್ತು. ಪ್ರಿನ್ಸಿಪಾಲರನ್ನು ಪ್ರತಿ ಭಟಿಸುವಾಗ ಕೇಶವನು ಬೇಕೆನಿಸುತ್ತಿದ್ದರೂ, ಉಳಿದ ವೇಳೆಯಲ್ಲಿ ಕೇಶವ ನನ್ನು ಕಂಡರೆ ಸಿಡುಕುತ್ತಿದ್ದಳು. ಕೇಶವನೂ ಸುಮ್ಮನೆ ಇರುತ್ತಿರಲಿಲ್ಲ.

ಬೇಕಂತಲೇ ಅವಳನ್ನು ರೇಗಿಸುವುದಕ್ಕೆ, ಯಾವಾಗಲೂ ಅವಳ ಬಳಿಗೆ ಬಂದು. Hello darling ಹೇಗಿದ್ದೀಯಾ ? ಎಂದೇ ಸಂಬೋಧಿಸುತ್ತಿದ್ದ ಕೂಡಲೇ . ಜ್ವಾಲಾಮುಖಿಯಾಗಿ, 'you idiot, rogue ಎಂದು ಬೈಗಳನ್ನು ಸುರಿಸುತ್ತಿದ್ದಳು. ಖುಷ್ ಖುಷಿಯಾಗಿ ಕೇಶವ, ಏನಮ್ಮ ಈ ಮಜ್ನೂ ಮೇಲೆ ಉರಿಕಾರಿದರೆ ಏನಾಗ್ಬೇಕು ?.... ಹೋಗಲಿ ನಾವಿಬ್ಬರೂ ಡ್ಯೂಯೆಟ್ ಹಾಡೋಣ, ಸ್ವಲ್ಪ ಸಮಾಧಾನವಾಗುತ್ತೆ, ಅಂತ ಲೈಟಾಗಿ ಮಾತನಾಡುವುದನ್ನು ಕೇಳಿದಾಗೆಲ್ಲ ಕೆನ್ನೆ ಊದಿ ಬಿಡು ತ್ತಿತ್ತು. ಆದರೂ ಅವನು ಮಾತ್ರ ಕೆನ್ನೆ ಸವರಿಕೊಂಡು, ಚಪ್ಪರಿಸಿ ಕೊಂಡು ಏನೂ ಆಗದವನ ಹಾಗೆ ಅಲ್ಲಿಂದ ಹೊರಟುಬಿಡುತ್ತಿದ್ದ.

ಮೊದಲನೆ ದಿವಸ ಆಕಸ್ಮಿಕವಾಗಿ ಇಬ್ಬರೂ ಅದೇ ಕಾಲೇಜ್ ಇಂಟರ್‌ವ್ಯೂಗೆ ಬಂದಿದ್ದರು ಇಷ್ಟು unexpected ಆಗಿ ಇಲ್ಲಿ ಮೀಟಾಗಿ ದ್ದಕ್ಕೆ ಒಂದು ಕಡೆ ಆಶ್ಚರ್ಯ, ಮತ್ತೊಂದು ಕಡೆ, ವೀಣಾಗೆ ಈ ಲೋಫರ್ ಇಲ್ಲಿಗೂ ಬಂದನೇ ಅಂತ ಸಂಕಟ. ಅವಳಿಗೇನೂ ಅವನು ಕ್ಲಾಸ್‌ಮೇಟಲ್ಲ. ಆದರೆ ಇಬ್ಬರೂ ಕಾಲೇಜ್ ಮೇಟ್ಸ್, ಕಲ್ಚರಲ್ ಪ್ರೋಗ್ರಾಮ್ಸ್‌ನಲ್ಲಿ ಇಬ್ಬರೂ ಸ್ವಲ್ಪ ಲೀಡಿಂಗ್‌ನಲ್ಲಿದ್ದರು. ಹಾಗೇ ಪರಿಚಯ ಜಾಸ್ತಿಯಾಯ್ತು. ನೋಡೋಕೆ ಕೇಶವ ತುಂಬಾ ಚೆನ್ನಾಗಿದ್ದ ಆದರೆ ಅವನ ಚೇಷ್ಟೆಗಳು ಕಮಂಗಿ ಚೇಷ್ಟೆಗಳಾದ್ದರಿಂದಲೇ ಅವನಿಗೆ ಕಮಂಗಿ ಕೇಶವ ಇಲ್ಲ ಕೆ. ಕೇಶವ ಅಂತ ಹೆಸರಾಯ್ತು. ಚೇಷ್ಟೆಯಷ್ಟೇ ಅವನ ಬುದ್ಧೀನೂ ಚುರುಕಾಗಿತ್ತು. ಅದಕ್ಕೇ ಅವನಿಗೆ ಬಂಡಿಗಟ್ಟಲೆ ಫ್ರೆಂಡ್ಸ್, ಆದರೆ ಯಾಕೋ, ವೀಣಾ ! ಸ್ವಲ್ಪ ಹತ್ತಿರದ ಫ್ರೆಂಡಂತಿ ದ್ದಳು. ಆದರೆ ಅವನಿಗೆ ಹಾಗೆ ಅನ್ನಿಸಿತ್ತು. ಅವನ ಬಗ್ಗೆ ಅಸಹ್ಯ ವಿದ್ದರೂ ಅವನ ಸ್ನೇಹ ಮಾತ್ರ ಯಾಕೋ ಸ್ವಲ್ಪ ಹಿತವಾಗೇ ಅನ್ನಿಸು ತ್ತಿತ್ತು. ಜಗಳ ಮಾಡೋಕೆ ಅವನ ಜೊತೆ ಬಯಸುವ ಹಾಗೆ ಕಾಣು ತ್ತಿತ್ತು.

ಕೇಶವನಿಗೆ ದಿನಕ್ಕೊಬ್ಬಳು ಹೊಸ ಫ್ರೆಂಡ್ ಮ್ಯಾತೆಮಾಟಿಕ್ಸ್ ಬ್ಲಾಕ್ ಹಿಂದುಗಡೆ, ಕ್ಯಾಂಟೀನ್‌ನಲ್ಲಿ ಲೈಬ್ರರಿ, ಬುಕ್ ಷೆಲ್ಫುಗಳ ಮಧ್ಯೆ ಕೇಶವನ ರೋಮಾನ್ಸ್.

ಒಂದು ಸಲ ಪಾಪ ಕೇಶವ ವೀಣಾಳನ್ನು ಕೆಣಕುವುದಕ್ಕೆ ಪ್ರಯತ್ನಿಸಿದ. ಆದರೆ ವೀಣಾ ಅಷ್ಟು ಸುಲಭವಾಗಿ ಬಗ್ಗುವ ಘಟವಲ್ಲ. ಅವನ ರೋಮಾನ್ಸ್‌ಗಳೆಲ್ಲ ಕೇವಲ ರಿಸರ್ಹಲ್ ಅಂತ ತಿಳಿದಿದ್ದ ವೀಣಾ ಅವನಿಗಿಂತ ಅದ್ಭುತವಾಗಿ ನಾಟಕವಾಡಿ ಬಗ್ಗು ಬಡಿದಿದ್ದಳು. ಅವತ್ತಿನಿಂದ ಕೇಶವ ವೀಣಾ ಜೊತೆಗೆ ಕೇರ್‌ಫುಲ್ ಆಗಿದ್ದ. ಆದರೆ ಇಬ್ಬರೂ ಈ ಘಟನೇನ ತುಂಬಾ ಸ್ಪೋರ್ಟಿವಾಗೇ ತಗೊಂಡಿದ್ದರು. ಅಲ್ಲದೆ ಇಬ್ಬರೂ ಕಳ್ಳರೇಷ್ಟಆಗಿದ್ದರಿಂದ ನಕ್ಕುಬಿಟ್ಟು ಸುಮ್ಮನಾಗಿದ್ದರು.

ಈಗ ಮತ್ತೆ ಒಂದೇ ಕಾಲೇಜಿನಲ್ಲಿ ಸಹೋದ್ಯೋಗಿಗಳು. ಕೇಶವ ಒಂದಿಷ್ಟೂ ಚೇಂಜಾಗಿಲ್ಲ ಹಾಗೇ ಇದ್ದಾನೆ. ಅದೇ ಸ್ಟೈಲು, ಅದೇ ಸಿಲ್ಲಿ ಜೋಕ್ಸ್. ಅದೇ ಕೋತಿ ಚೇಷ್ಟೆಗಳು. ಸದ್ಯ ಇಂಟರ್‌ವ್ಯೂನಲ್ಲಿ ಹಾಗೇನೂ ಮಾಡ್ದೆ ಇದ್ದದ್ದು ಪುಣ್ಯ. ಆದರೆ ಸ್ಟೂಡೆಂಟ್ಸ್ ಪಾಡು ? ಎಂದು ಯೋಚಿಸುತ್ತಿದ್ದ ವೀಣಾಳಿಗೆ ಸ್ಟೂಡೆಂಟ್ಸ್ ದೊಡ್ಡ ಸಮಸ್ಯೆಯೇನಲ್ಲ, ಅನ್ನುವ ಸತ್ಯ ಸುಳಿಯಿತು. ಅವರಿಗೇನು ಜಾಲಿಯಾಗಿ ಒಂದು ಗಂಟೆ ಅದೂ ಇದೂ ಹೇಳ್ತಾ ಇದ್ದರೆ ಸಾಕು. ಈಗಿನ ಸ್ಟೂಡೆಂಟ್ಸೇ ಹಾಗೆ. ಅವರಿಗೇನು ಬೇಕಿಲ್ಲ. ಮಾರ್ಕೆಟ್ ಗೈಡ್ಸಿವೆ. ಪರೀಕ್ಷೆ ಟೈಮಲ್ಲಿ ಕೊಂಡು ಕೊಂಡು ಗಬಗಬ ಪುಟ ತಿರುವಿ ಹಾಕಿದರೆ, ಜೀವನಾಂಶಕ್ಕೇನೂ ಮೋಸ-ಇಲ್ಲ. ಅಂಥಾದ್ದರಲ್ಲಿ ಅವನು ಪಾಠ ಮಾಡಿದರೇನು, ಬಿಟ್ಟರೇನು ? ಕಪಿ ಕೇಶವನಿಗೆ ಸ್ಟೂಡೆಂಟ್ಸ್ ಜೊತೆ ತೀರ ಸಲುಗೆ. ಅವನಂತೂ ಸ್ಟೂಡೆಂಟ್ಸ್ ಪೆಟ್, ಅವನದೆಲ್ಲ ವೆಸ್ಟರ್ನ್ ಸ್ಟೈಲು. ಭಾರತೀಯ ಡ್ರಿಂಕುಗಳು ಬೇಕಿಲ್ಲ. ಸೂಡೆಂಟ್ಸ್ ಜೊತೆ ವಾರಕ್ಕೇನಿಲ್ಲವೆಂದರೆ ನಾಲ್ಕೈದು ಸಲ ಕಾಕ್‌ಟೈಲ್ ಪಾರ್ಟಿ, ಕ್ಯಾಬರೆ. ಎಂದಾದರೂ ಎದುರು ಬಿದ್ದು ಕೇಳಿದರೆ, ಅಷ್ಟೊಂದು ರೆಸರ್ವೇಷನ್ ಬೇಡಮ್ಮ ....ಅಂತ ತೂರಾಡುತ್ತಾ ತೀರಾ ನಾಟಕೀಯವಾಗಿ ಮಾತಾಡ್ತಿದ್ದ. ಇನ್ನು ಇವನ್ನೊತೆಗೇನು ಚರ್ಚೆ ಅಂತ ಸುಮ್ಮನೆ ಇದ್ದು ಬಿಡ್ತಿದ್ದೆ.

ನಮ್ಮಿಬ್ಬರ ಸಲುಗೆ, ವಾಗ್ವಾದ, ಒರಟುತನ ನೋಡ್ತಿದ್ದ ನಮ್ಮ ಕೊಲಿಗ್ಸ್ ನಮ್ಮನ್ನು ಅದೊಂಥರಾ ವಿಚಿತ್ರವಾಗಿ ನೋಡೋವ್ರು. ನಾವಿಲ್ಲದೆ ಇದ್ರೆ ಗುಸ ಗುಸ ಪಿಸ. ಆದರೆ ನೇರಾಗಿ ಕೇಳೋ ಧೈರ್ಯ ಇರಲಿಲ್ಲ. ಅದ್ಯಾಕೋ ನಮ್ಮ ವಿಷಯವಾಗಿ ಅವರೆಲ್ಲಾ ತಲೆ ಕೆಡಿಸ್ಕೊಳ್ತಿದ್ರು. ಅದನ್ನ ನೆನೆಸಿಕೊಂಡರೇನೇ ನಮ್ಮಿಬ್ಬರಿಗೂ ನಗು ತಡೆಯುವುದಕ್ಕೇ ಆಗ್ತಿರ್ಲಿಲ್ಲ. ನನ್ನ ಫ್ರೆಂಡ್ (ಗರ್ಲ್‌ಫ್ರೆಂಡ್) ಒಂದು ದಿವಸ ನನ್ನನ್ನು ಕೇಳಿಯೇ ಬಿಟ್ಟಳು. ಅದೇನೇ ಅವ್ನು, ಕೇಶವ, ನೀನಷ್ಟು ಉಗೀತಿದ್ರೂ, ಬೈತಿದ್ರೂ ಮೇಲೆ ಮೇಲೆ ಬಿದ್ದು ಮಾತಾಡಿಸ್ತಾನೆ'—ಅಂತ, ನನಗೆ ತಕ್ಷಣ ಏನು ಹೇಳ್ಬೇಕು ತಿಳೀಲಿಲ್ಲ. ಆದರೆ ಅರ್ಧ ಕ್ಷಣದಲ್ಲಿ ಏನೋ ಹೊಳೆದು ಅವ್ನು ನನ್ನ ಭಾವಿ ಗಂಡ ಕಣೆ. ಅವ್ನ ನಾನು ಮದುವೆಯಾಗ್ತೀನಿ, ಅಂತ ರೈಲು ಬಿಟ್ಟೆ. ಅವಳಿಗೆ ಯಾಕೋ ಆಶ್ಚರ್ಯ ತಡೆಯೋಕಾಗಲಿಲ್ಲ. ಗೋಲಿ ಗಾತ್ರದ ಕಣ್ಣನ್ನ ನಿಂಬೇಕಾಯಿ ಗಾತ್ರ ಆಗಲಿಸಿ ಕೇಳಿದಳು. "ಹೌದೇನೇ ? ಇದೇನೆ ನಮಗ್ಯಾರಿಗೂ ಗೊತ್ತಿಲ್ದೆ ಹೀಗೆ ದಿಢೀರಂತ ಅವನ್ಜೊತೆ ಮದುವೆ ಖಾಯಂ ಮಾಡ್ಕೊಂಡ್ಬಿಟ್ಟೆ ?"—ಸಂತೋಷ ತಂದುಕೊಳ್ಳಲು ಪ್ರಯತ್ನಿಸಿದರೂ ಅಸೂಯೆಯ ಧ್ವನಿ ಅಡಗಿತ್ತು ಅವಳ ಮಾತಿನಲ್ಲಿ. ಅದನ್ನು ನೋಡ್ತಿದ್ರೆ ನನಗೆ ಒಳಗೊಳಗೇ ನಗು ತಡೆಯಲಾಗಲಿಲ್ಲ. ಆದರೂ ಒತ್ತರಿಸಿ ಬರುತ್ತಿದ್ದ ನಗುವನ್ನು ತಡೆಯೋಕೆ ಪ್ರಯತ್ನ ಪಡ್ತಿದ್ದೆ. ಒಂದು ಸಲ 'ಪಾಪ' ಅನ್ನಿಸ್ತು. ಕೇಶವನ್ನ ಒಮ್ಮೆ ತನ್ನನ್ನು ಮದುವೆಯಾಗುವಂತೆ ಕೇಳಿದ್ದಳಂತೆ. ಆದರೆ ಕೇಶವ ಫ್ಲಾಟಾಗಿ ಆ ಬೇಡಿಕೆಯನ್ನು ತಿರಸ್ಕರಿಸಿದ್ದನಂತೆ. ಅದಕ್ಕೇ ಅವರಿಬ್ಬರೂ ಮಾತಾಡ್ತಿರಲಿಲ್ಲ. ನನಗಂತೂ ನನ್ನ ಆಕ್ಟಿಂಗ್ ತುಂಬಾ ಪರಿಣಾಮಕಾರಿಯಾಗಿದೆ ಅನ್ನಿಸಿತು. ಇದು ಇಷ್ಟಕ್ಕೇ ನಿಲ್ಲಲಿಲ್ಲ. ಅವಳಿಂದ ಇಡೀ ಕಾಲೇಜಿಗೇ ಈ ಸುಳ್ಳು ವದಂತಿ ಹಬ್ಬಿತು. ಮೊದಲೇ ಪ್ರಿನ್ಸಿಪಾಲರಿಗೆ ನಾನಂದ್ರೆ ಅಷ್ಟಕ್ಕಷ್ಟೇ ಅಂಥಾದ್ದರಲ್ಲಿ ಇದು ಅವರಿಗೆ ಒಳ್ಳೇ ಆಹಾರವಾಯ್ತು. ನನ್ನನ್ನು ಕರೆದು ವಾರ್ನಿಂಗ್ ಕೊಟ್ಟರು. ಆದರೆ ನಾನೇನೂ ಸುಮ್ಮನಿರಲಿಲ್ಲ.

"ನಾನು ಮುದುಡೆಯಾದ್ರೆ ನಿಮ್ಮ ಗಂಟೇನು ಹೋಗುತ್ತಂತ" ತಿರುಗಿ ಜವಾಬು ಕೊಟ್ಟು ಸರಸರ ಒಂದು ಲೀವ್ ಲೆಟರ್ ಗೀಚಿ ಬಂದ್ಬಿಟ್ಟಿದ್ದೆ.

ಈಗ ನೋಡಿದರೆ ಏನೋ ಒಂದು ಥರಾ ಭಯವಾಗ್ತಾ ಇದೆ. ಆ 'idiot' ಕೇಶವ ಕಾಣಿಸಿದರೆ ಚೆನ್ನಾಗಿ ಥಳಿಸಿ ಬಿಡಬೇಕು ಅಂದ್ಕೊಂಡೆ. ಅವನೂ ಅದೇ ಕಾಲೇಜಿಗೆ ಬರದಿದ್ದರೆ ಇಷ್ಟೆಲ್ಲಾ ರದ್ಧಾಂತ ಆಗ್ತಿರ್ಲಿಲ್ಲ. ಅಂತ ಮನಸ್ಸಿಗೆ ಅನ್ನಿಸಿದರೂ, ಅವನನ್ನು ತಡೆಯೋಕೆ ತನಗೇನು ಹಕ್ಕಿದೆ. ನಮ್ಮಪ್ಪ ಕಟ್ಟಿಸಿದ ಕಾಲೇಜೇನೂ ಅಲ್ವಲ್ಲ—ಎಂದುಕೊಂಡು ಪಕ್ಕ ತಿರುಗಿದಳು. ಮಂಚ ಕಿರುಗುಟ್ಟಿತು.





ಡಾ॥ ವಿಜಯಾ ಸುಬ್ಬರಾಜ್‌ರವರ ಕಥಾ ಸಂಕಲನ "ಮಾನಿಷಾದ" ವನ್ನು ಸಹೃದಯ ಓದುಗರ ಮುಂದೆ ಇಡಲು ಅತ್ಯಂತ ಸಂತೋಷವಾಗುತ್ತದೆ. ಇವರ ಭಾಷಾ ಶೈಲಿ ಮತ್ತು ಕಥಾನಿರೂಪಣಾ ಸಾಮರ್ಥ್ಯ ಮೆಚ್ಚುವಂತಹುದು. ಇವರ ಎರಡು ಕಾದಂಬರಿಗಳು ಈಗಾಗಲೇ ಪ್ರಕಟವಾಗಿವೆ. ಇವರಿಂದ ಇನ್ನೂ ಅನೇಕ ಉತ್ತಮ ಕೃತಿಗಳು ಹೊರಬರಲೆಂದು ಹಾರೈಸಿ ಈ ಕಥಾ ಸಂಕಲನವನ್ನು ತಮ್ಮೆಲ್ಲರ ಮೆಚ್ಚುಗೆಯನ್ನು ಪಡೆಯುವುದೆಂಬ ಭರವಸೆಯಿಂದ ಸಹೃದಯ ಓದುಗರಿಗೆ ಅರ್ಪಿಸುತ್ತಿದ್ದೇವೆ.

ಪ್ರಕಾಶಕರು